

( ಸಚಿತ್ರ ಮಾಸ ಪುಸ್ತಕಾವಳಿ )

೧೭

ಸುಬೋಧ ಪ್ರಕಟನಾಲಯ,
ಬೆಂಗಳೂರು ನಗರ

# ವಿಷಯಾನುಕ್ರಮಣಿಕೆ

ಶ್ರೀರಾಮ ಸಹಾಯಂ.

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

## (ಸಚಿತ್ರ ಮಾಸ ಪುಸ್ತಕಾವಳಿ)

**ಮುನ್ನುಡಿ :—**

ಸತೀತಿಲಕಳಾದ ಶ್ರೀ ಪಾರ್ವತೀದೇವಿಯು, ಜಗತ್ತಿನಲ್ಲಿ ಅಗ್ರಗಣ್ಯರೆನ್ನಿಸಿರುವ ಪೌರಾಣಿಕ ನಾರೀಮಣಿಯರ ತರಗತಿಗೆ ಸೇರಿದವಳು.—ತಾನು ಮೆಚ್ಚಿ ವರಿಸಿದ್ದ ಪತಿಯು ಮೃತನಾಗಲು, ಯಮನೊಂದಿಗೇ ವಾಗ್ಯುದ್ಧ ನಡೆಯಿಸಿ ಆತನ ಪ್ರಾಣವನ್ನು ಹಿಂದಿರುಗಿ ಪಡೆದ ಸಾಧ್ವೀಮಣಿ ಸಾವಿತ್ರಿದೇವಿಯಂತೆಯೇ **ಈ** ಪಾರ್ವತೀದೇವಿಯಾದವಳೂ, ದಾಕ್ಷಾಯಣಿಯಾಗಿ ಹುಟ್ಟಿದ್ದಾಗ ತಾನು ಮಾನಿಪ ತನ್ನ ಪತಿಯ ಅವಮಾನವನ್ನು ಸಹಿಸಲಾರದೆ ಪ್ರಾಣತ್ಯಾಗ ಮಾಡಿದ್ದಳೋ, ಆ ಪತಿಯನ್ನೇ ಪುನಃ ವರಿಸುವ ನಿಮಿತ್ತವಾಗಿ ಜನ್ಮವೆತ್ತಿ, ಅಗಾಧ ತಪಶ್ಚರ್ಯ ಮಾಡಿ ಕೊನೆಗೂ ವಿರಕ್ತಚಕ್ರವರ್ತಿಯಾದ ಆ ಹರನನ್ನು ಮೆಚ್ಚಿಸಿ ಪಾಣಿಗ್ರಹಣವನ್ನೇ ಮಾಡಿದಳು. ಯೋಗಸಮಾಧಿಮಗ್ನನಾಗಿದ್ದ ಹರನ ಮನಸ್ಸಿನಲ್ಲಿ ವಿವಾಹಾಭಿಲಾಷೆಯನ್ನು ಹುಟ್ಟಿಸಿ, ಆತನನ್ನು ವರಿಸಿಕೊಳ್ಳುವುದೇನು ಸಾಮಾನ್ಯ ಕಾರ್ಯವಾಗಿರಲಿಲ್ಲ. ವಿಷಯ ವಿಮುಖನಾಗಿ ಕುಳಿತಿದ್ದ ಆತನಿಗೆ ಕಾಮ ಚಿಂತನೆಯನ್ನು ಉಂಟುಮಾಡಲು ಅವರಿವರಲ್ಲ ಸಾಕ್ಷಾತ್ ಕಾಮದೇವನೇ ಬರಬೇಕಾಯಿತು. ಬಂದರೇನ, ಆತನ ತಪೋಜ್ವಾಲೆಯುರಿಗೆ ಅವನೂ ದಗ್ಧನಾಗಿ ಭಸ್ಮೀಭೂತನಾಗಿ ಹೋದನು. ಅಂತಹ ವಿರಕ್ತಾಗ್ರೇಸರನ ಮನಸ್ಸನ್ನು ತಿರುಗಿಸಿ ತನ್ನೆಡೆಗೆ ಬರಮಾಡಿಕೊಂಡ ಪಾರ್ವತೀದೇವಿಯು ತಪಸ್ಸಾಮರ್ಥ್ಯವೂ ಅಲ್ಪವಾದುದಲ್ಲ. ಅಂತಹ ಲೋಕಾಶ್ಚರ್ಯಕರವೆನ್ನಿಸಿದ ಕಠಿಣತಮ ತಪಸ್ಸನ್ನಾಚರಿಸಿ, ಆತನನ್ನು ವರಿಸಿದುದಾದರೂ ಏನು ವಿಷಯ ಸುಖಾಭಿಲಾಷೆಯಿಂದಲೇ! ಎಂದಿಗೂ ಅಲ್ಲ. ಅದು ದೇವಕುಲಕ್ಕೆ ಪ್ರಾಪ್ತವಾಗಿದ್ದ ಒಂದು ದುರಂತ ಪ್ರಾಣಭಯವನ್ನು ನಿವಾರಿಸಿ, ಅವರಿಗೆ ಸ್ವರ್ಗವಾಸವನ್ನು ಸ್ಥಿರೀಕರಿಸಿ ಕೊಡುವುದಕ್ಕಾಗಿ! ಹೀಗೆ ಮಹನೀಯರು ಕೈಕೊಳ್ಳುವ ಯಾವುದೊಂದು ಕಾರ್ಯಕ್ಕೂ ಲೋಕಸೇವಾ

ಸಾಧಕವಾದ ಯಾವುದಾದರೊಂದು ಮಹೋದ್ದೇಶವು ಕಾರಣವಾಗಿ ಇದ್ದೇ ಇರುವುದು. ಸಾಮಾನ್ಯರು ಕೈಕೊಳ್ಳುವ ಕಾರ್ಯಗಳಿಗೂ, ಮಹನೀಯರು ಕೈಕೊಳ್ಳುವ ಕಾರ್ಯಗಳಿಗೂ ಇದೇ ಮುಖ್ಯವಾದ ವ್ಯತ್ಯಾಸವು ! ಸಾಮಾನ್ಯರು ಯಾವ ಕೆಲಸಮಾಡಿದರೂ, ಅದರಲ್ಲಿ ತಮ್ಮ ಸ್ವಸುಖಾಭಿಲಾಷೆಯನ್ನು ಪೂರ್ಣಗೊಳಿಸಿಕೊಳ್ಳುವ ಅಪೇಕ್ಷೆಯು ಅವರಿಗೆ ಇರುವುದು. ಆದರೆ ಮಹನೀಯರ ವಿಚಾರವು ಹಾಗಲ್ಲ-ಅವರ ಯಾವುದೊಂದು ಕ್ರಿಯೆಯಲ್ಲೂ ಪರೋಪಕಾರ ಚಿಂತನೆಯೇ ಪ್ರಾಮುಖ್ಯವಾಗಿರುವುದು. ಹೀಗೆ ಮಹನೀಯರ ಲೌಕಿಕ ಕ್ರಿಯೆಗಳೂ ಲೋಕೋದ್ಧಾರಕಗಳಾಗಿ ಸಾಮಾನ್ಯರಿಗೆ ಆದರ್ಶಪ್ರಾಯವಾಗಿರುವುವು.

ಪಾರ್ವತೀದೇವಿಯ ಸಚ್ಚರಿತ್ರವು ಸ್ಕಾಂದ ಮಹಾಪುರಾಣಾಂತರ್ಗತವಾದುದು. ಸ್ಕಾಂದ ಪುರಾಣವೆಂಬುದು ಭಗವಾನ್ ವ್ಯಾಸಮಹರ್ಷಿಗಳಿಂದ ವಿರಚಿತವಾದ ಹದಿನೆಂಟು ಪುರಾಣಗಳಲ್ಲೊಂದು. ಪುರಾಣಗಳು ನಮ್ಮ ದೇಶದ ಪ್ರಾಚೀನ ನಾಗರಿಕತೆ, ಆಗಿನ ಜನಗಳ ಶೀಲಸ್ವಭಾವಗಳು, ಅವರ ಭಾವನೆಗಳು, ಅವರ ಕಾರ್ಯಗಳು, ಯಾವುದೊಂದು ಕಾರ್ಯದ ವಿಷಯದಲ್ಲೂ ಅವರ ಮನಸ್ಸಿನಲ್ಲಿರುತ್ತಿದ್ದ ಉನ್ನತ ಧ್ಯೇಯಗಳು, ಆ ಧ್ಯೇಯಸಾಧನೆಗಾಗಿ ಮುಂದೆ ನುಗ್ಗುವಾಗ ತಮ್ಮ ಪ್ರಾಣಾಪಾಯವನ್ನೂ ಗಮನಿಸದೆ ಕೇವಲ ಕಾರ್ಯತತ್ಪರವಾಗಿರುತ್ತಿದ್ದ ಅವರ ದೃಢಚಿತ್ತತೆ, ಪರೋಪಕಾರಕ್ಕಾಗಿಯೇ ತಮ್ಮ ಪ್ರಾಣಗಳನ್ನು ನೀಡಲುಗಿಟ್ಟಿರುತ್ತಿದ್ದ ಅವರ ಪವಿತ್ರ ಜೀವಿತಗಳು ಮುಂತಾದ ಹಲವು ಅಮೌಲ್ಯ ವಿಚಾರಗಳನ್ನು ಒಳಗೊಂಡ ಅಗಾಧ ರತ್ನದ ಗಣಿಗಳಂತಿವೆ. ಅವುಗಳನ್ನು ಪ್ರವೇಶಿಸಿ ಅಗೆಯುತ್ತಾ ಆಳ-ಆಳಕ್ಕೆ ಹೋದಂತೆಲ್ಲಾ ಹೆಚ್ಚುಹೆಚ್ಚು ಬೆಲೆಯ ರತ್ನಗಳೇ ದೊರೆಯುತ್ತವೆ! ಆದರೆ, ಭೂಮಿಯಲ್ಲಿ ಕಲ್ಲುಮಣ್ಣುಗಳೊಂದಿಗೆ ಬೆರೆತಿರುವ ಆ ರತ್ನಗಳನ್ನು ತೆಗೆದು ಕಾಲ ದೇಶವರ್ತಮಾನಗಳನ್ನನುಸರಿಸಿ ದೊರೆಯುತ್ತಿರುವ ಹಲವು ಸಾಧನಗಳ ಸಹಾಯಗೊಂಡು, ಅವುಗಳನ್ನು ಮುಚ್ಚಿಕೊಂಡಿರುವ ಕಶ್ಮಲವನ್ನೆಲ್ಲ ಹೋಗಲಾಡಿಸಿ, ಯೋಗ್ಯರೀತಿಯಿಂದ ಸಾಣೆಗೆ ಕೊಟ್ಟವಾದರೆ ಅವುಗಳ ಬೆಲೆಯು, ಒಂದಕ್ಕೆ ಹತ್ತು-ನೂರು-ಸಾವಿರವಾಗಬಹುದು. ಮೇಲಿನ ಕಶ್ಮಲವನ್ನು ಹೋಗಲಾಡಿಸದಿದ್ದರೆ,

ಎಂತಹ ಅಮೌಲ್ಯ ರತ್ನವಾದರೂ ಮೂರುಕಾಸಿನ ಬೆಲೆಯ ಕಲ್ಲಿನ ಆವರಣ ದೊಳಗಡಗಿದ್ದು ಪ್ರಕಾಶಹೀನವಾಗಿಯೇ ಇರುವುದು. ನಮಗೆ ನಮ್ಮ ಪೂರ್ವಿಕರಲ್ಲಿ ಭಕ್ತಿಗೌರವಗಳು ಇರುವುದೇ ನಿಶ್ಚಯವಾಗಿದ್ದರೆ, ನಾವು ಸರ್ವ ಪ್ರಯತ್ನದಿಂದಲೂ, ಅವರ ಪವಿತ್ರಚರಿತ್ರೆಗಳೆಂಬ ರತ್ನಗಳನ್ನು ಆವರಿಸಿಕೊಂಡಿರುವ ಈ ಕೊಳಕನ್ನು ಹೋಗಲಾಡಿಸಿ, ಅವು ತಮ್ಮ ಸ್ವಾಭಾವಿಕ ಕಾಂತಿಯಿಂದ ಪ್ರಕಾಶಿಸಲು ಅವಕಾಶವನ್ನು ಕಲ್ಪಿಸಬೇಕು. ನಮ್ಮ ಹಿರಿಯರು, ದೊಡ್ಡವರು-ಮಹನೀಯರು-ಅಗಾಧ ಮಹಿಮಾನ್ವಿತರು ಎಂದು ಹೇಳಿಕೊಂಡು ನಮ್ಮ ಸಮಾನರಿಲ್ಲವೆಂದು ಹಿಗ್ಗುವ ಹೆಮ್ಮೆಯು ಮಾತ್ರ ಅರೆಕಾಸಿನ ಪ್ರಯೋಜನಕ್ಕೂ ಬಾರದು.

ಪೌರಾಣಿಕ ವ್ಯಕ್ತಿಗಳ ಚರಿತ್ರೆಗಳನ್ನು ಆವರಿಸಿಕೊಂಡಿರುವ ಈ ಕಸ್ಮಲಕ್ಕೆ ಪುರಾಣಕರ್ತರು ಕಾರಣರೆಂದು ಹೇಳಲಾಗದು. ಪುರಾಣಗಳು ಸಮಾಧಿಭಾಷೆ, ಗುಹ್ಯಭಾಷೆ, ದರ್ಶನಭಾಷೆ ಎಂಬ ಮೂರು ಭಾಷೆಗಳಿಂದ ಬರೆಯಲ್ಪಟ್ಟು-ದೃಷ್ಟಿಭೇದದಿಂದ ಅರ್ಥಾನಾದರೂ ಭೇದವಾಗುವುದೆಂದು ಹಿಂದೆ ಕೆಲವು ಸಂದರ್ಭಗಳಲ್ಲಿ ಹೇಳಿರುವುದು ಸುಳ್ಳಲ್ಲ. ಆದರೆ ಅಷ್ಟು ಮಾತ್ರವಲ್ಲ. ಇಂದು ನಮಗೆ ದೊರೆಯುತ್ತಿರುವ ಪುರಾಣಗಳೆಂಬುವು, ಅವು ಆರಂಭಕ್ಕೆ ರಚಿತವಾದಂತೆಯೇ ಇಲ್ಲ! ಅವುಗಳಮೇಲೆ ಅಗಾಧ ಧಾಳಿಯು ನಡೆದಿದೆ. ಹಲವು ಮಂದಿ ಬೆರಕೆ ಮಾಡಿದ ಪಾಕದಂತಾಗಿದೆ ಅವುಗಳ ಬಾಳು. ಒಂದು ಧ್ರುವತರಂಗಿಣಿಯಲ್ಲಿ ಪ್ರವೇಶಿಸಿಬಿಟ್ಟರೆ ಸಾಕು,- ತಮ್ಮ ಜನ್ಮವು ಪಾವನವಾಗಿ, ಶಾಶ್ವತ ಕಾಲದವರೆಗೆ ಉಳಿಯುವುದೆಂಬ ಆಸೆಗೆ ಬಸ್ಸವಾಗಿ ಸುತ್ತುಮುತ್ತಿನ ಹಲವು ಹಳ್ಳಗಳೂ, ಕೆರೆಗಳೂ, ತೊರೆಗಳೂ ತಮ್ಮಲ್ಲಿದ್ದ ಕೊಳೆತು ನಾರುವ-ಬಗ್ಗಡವಾದ, ಕಶ್ಮಲವಾದ ನೀರನ್ನೆಲ್ಲಾ ತಂದು, ಅದರೊಂದಿಗೆ ಬೆರೆಸಿ ಆ ತರಂಗಿಣಿಯ ಶುದ್ಧಜಲವನ್ನೂ ಕೆಡಿಸಿ ಹಾಳ ಮಾಡಿದಂತಾಗಿದೆ ನಮ್ಮ ಪುರಾಣಗಳ ಸ್ಥಿತಿ! ಈ ಅಗಾಧ ಕಾಲಾವಧಿಯಲ್ಲಿ, ನಮ್ಮ ಪುರಾಣಗಳು ಸ್ವಾರ್ಥಸಾಧಕರಾದ, ಕಾಮಾಂಧರಾದ, ಲೋಭಿಗಳಾದ, ಮೋಹಾವಿಷ್ಟರಾದ, ಮದಾಂಧರಾದ, ಮಾತ್ಸರ್ಯಪೂರಿತರಾದ-ಆದರೂ ವಿದ್ಯಾಧಿಕರೇ ಆಗಿದ್ದ ಆಯಾಯಕಾಲದ ಹಲಕೆಲವು ವಿದ್ವಾಂಸರ ಕೈಯಲ್ಲೆಲ್ಲಾ ಬಿದ್ದು ಸಾಗಿಬರಬೇಕಾಯಿತು. ವರ್ಣ

ನಾಭಾಗವಲ್ಲೂ ಕಥಾಭಾಗದಲ್ಲೂ ಅವರವರು ತಮತಮಗೆ ಶ್ರೇಷ್ಠವೆಂದು ತೋರಿದ ಸಂಗತಿಗಳನ್ನೆಲ್ಲ-ಶಾಶ್ವತವಾಗಿ ಉಳಿಯಲೆಂಬ ದೃಷ್ಟಿಯಿಂದ-ಪಾಪ, ಸದ್ಭಾವದಿಂದಲೇ ಪ್ರೇರಿತರಾಗಿ, ಅವುಗಳಲ್ಲಿ ಸೇರಿಸುತ್ತಾ ಬಂದರು. ಹೀಗಾಗುತ್ತ ಆಗುತ್ತ ಅವು ಈಗ ಇರುವ ಸ್ಥಿತಿಗೆ ಬಂದುನಿಂತಿವೆ. ಹಾಗಿಲ್ಲದಿದ್ದರೆ-ತಮ್ಮ ಕೈಗೆ ಸಿಕ್ಕಿದನ್ನು ಅಭಿಮಾನಾವಿಷ್ಟರಾಗಿ, ಒಬ್ಬೊಬ್ಬರೂ ತಮ್ಮ ಮನಸ್ಸಿಗೆ ಬಂದ ದಾರಿಗೆ ಎಳೆಯದೆ ಇದ್ದಿದ್ದರೆ-ಏಕಮಾತ್ರ ವೇದವ್ಯಾಸರಿಂದಲೇ ವಿರಚಿತವಾದುವುಗಳಲ್ಲಿ ಒಂದೊಂದೂ ಬೇರೆಬೇರೆ ಅಭಿಪ್ರಾಯಗಳನ್ನುಂಟಾಗಿರಲು ಕಾರಣವೇನಿದೆ? ಇಂತಹ ಹಲವು ಮಿಶ್ರಣಗಳ ಕಾರಣದಿಂದ ಪ್ರಾಪ್ತವಾಗಿರುವ 'ಪುರಾಣಗಳೆಂದರೆ ಸುಳ್ಳಿನ ಮೂಟೆ, ಕೆಲಸಕ್ಕೆ ಬಾರದ ವಿಚಾರಗಳಿಂದ ತುಂಬಿದ ಹಂಪು ಕಂತೆ' ಎಂಬೀ ಅಪವಾದಗಳನ್ನು ತಪ್ಪಿಸಿ, ಅವುಗಳನ್ನು ಅವುಗಳ ಪ್ರಾಚೀನತೆಗೆ ತಕ್ಕ ಗೌರವಸ್ಥಾನದಲ್ಲಿಟ್ಟು ಆದರಿಸಬೇಕೆಂಬ ಆಶಯವು ನಮಗಿರುವುದಾದರೆ, ಮೇಲೆ ಹೇಳಿದಂತೆ, ಅವುಗಳಲ್ಲಿ ಆಳಕ್ಕೆ ಪ್ರವೇಶಿಸಿ, ಮೋಹಾವಿಷ್ಟರಾಗದೆ ವಿಚಾರ ನಡೆಸಿ, ಅವುಗಳಲ್ಲಿ ಬಂದು ಸೇರಿರುವ ಕಸ್ಮಲವನ್ನೆಲ್ಲ ತೆಗೆದುಹಾಕಿ ಶುದ್ಧಿಗೊಳಿಸಬೇಕು. ಆಷ್ಟುಕಾರ್ಯ ಮಾಡಬೇಕಾದುದು ವಿದ್ಯಾವಂತರ ಕರ್ತವ್ಯವು. ಪಾರಂಪರ್ಯವಾಗಿ ಬಂದ ಜ್ಞಾನವನ್ನು ಪಡೆದಿರುವ ಅವರು, ಅದನ್ನು ಯೋಗ್ಯ ರೀತಿಯಿಂದ ಶುದ್ಧಿಗೊಳಿಸಿ ತಮ್ಮ ಮುಂದಿನ ಪೀಳಿಗೆಗೆ ದಾನಮಾಡದಿದ್ದರೆ, ಈ ಋಷಿಋಣದಿಂದ ಬಿಡುಗಡೆಯಾಗುವುದೆಂತು ?

ಅಖಂಡ ಭಾರತನಾರೀಮಣಿಯರಿಂದ ಸೌಭಾಗ್ಯಪ್ರದ ದೇವತೆಯೆಂದು ಪೂಜನೀಯಳಾಗಿರುವ ನಮ್ಮ ಕಥಾನಾಯಿಕೆ ಪಾರ್ವತೀದೇವಿಯ ದಿವ್ಯಚರಿತ್ರೆಯನ್ನು ಆದರಿಸದ ಸ್ತ್ರೀಯುಂಟೆ ? ವಾಚಕ ಮಹಾಶಯರು, ಗ್ರಂಥಮಾಲಾ ವಿಷಯಕವಾದ ತಮ್ಮ ಅಭಿಮಾನವನ್ನು ಮುಂದರಿಸಿ, ತಮ್ಮ ನೆರೆಹೊರೆ-ಬಂಧುಬಾಂಧವರಲ್ಲೂ ಗ್ರಂಥಮಾಲೆಗೆ ಪ್ರಚಾರವನ್ನು ಕಲ್ಪಿಸಿಕೊಟ್ಟು ತನ್ಮೂಲಕ ನಮ್ಮ ಭಾಷಾ ಸೇವಾಕಾರ್ಯವು ನಿರ್ವಿಘ್ನವಾಗಿ ನಡೆವಂತೆ ಪ್ರೋತ್ಸಾಹವನ್ನುಂಟು ಮಾಡಲೆಂದು ಪ್ರಾರ್ಥಿಸುತ್ತೇವೆ.

ಬೆಂಗಳೂರು,
ತಾ|| ೩—೨—೧೯೩೧.

ಇತಿ ಸುಜನ ವಿಧೇಯ,
**ಯಂ ರಾಮರಾವ್.**



ಶ್ರೀ ಪಾರ್ವತೀ ಪರಮೇಶ್ವರರು.

ಶ್ರೀರಾಮ ಸಹಾಯಂ.

## ಪತಿವ್ರತಾ ಕುಲತಿಲಕಳಾದ

# ಪಾರ್ವತೀದೇವಿ

---

**ಅಧ್ಯಾಯ ೧.** **ತ್ರಿಲೋಕ ಕಂಟಕ—ತಾರಕ.'**

ನಮ್ಮ ಮಾತೃಭೂಮಿ ಭಾರತದೇಶದಲ್ಲಿ, ಇಂದ್ರಾದಿ ದೇವತೆಗಳೂ ತ್ರಿಮೂರ್ತಿಗಳಾದ ಬ್ರಹ್ಮವಿಷ್ಣು ಮಹೇಶ್ವರರೂ ಲೋಕದ ಮನುಷ್ಯರೊಂದಿಗೆ ಬಂದು ಬೆರೆದು ಮಾತನಾಡುತ್ತ, ಆಟವಾಡುತ್ತ, ಯುದ್ಧ ವಿವಾಹ ವಿಹಾರ ಮುಂತಾದುವುಗಳಲ್ಲಿ ಭಾಗತೆಗೆದುಕೊಳ್ಳುತ್ತ ಇದ್ದ ಕಾಲವೊಂದಿದ್ದಿತು. ಮಹಾ ಮಹಿಮೋಪೇತರಾದ ದೇವತೆಗಳು ಮನುಷ್ಯವರ್ಗದೊಂತಿಗೆ ಸವ್ಯವಹಾರವನ್ನಿಟ್ಟುಕೊಂಡಿದ್ದ ಆ ಕಾಲದಲ್ಲಿ ಜನರ ನಡೆನುಡಿಗಳು ಧರ್ಮಮಾರ್ಗಕ್ಕೆ ವಿರೋಧವಿಲ್ಲದೆ ನಡೆಯುತ್ತಿದ್ದುವು. ಜನರು ನಿಷ್ಕಪಟಿಗಳಾಗಿದ್ದರು. ನ್ಯಾಯಪಥವನ್ನು ಬಿಟ್ಟು ನಡೆಯುತ್ತಿರಲಿಲ್ಲ. ಸತ್ಕಾರ್ಯಾಚರಣೆಯಲ್ಲಿ ದೃಢಚಿತ್ತವುಳ್ಳವರಾಗಿದ್ದು - ತ್ರಿಕರಣಗಳಲ್ಲೂ ಶುದ್ಧರಾಗಿದ್ದರು. ಆ ಸತ್ಯಯುಗದಲ್ಲಿ, ಮನುಷ್ಯರಿಗೂ ದೇವಗಂಧರ್ವಾದಿ ತೇಜಸ್ವಿವರ್ಗಗಳವರಿಗೂ ಇದ್ದ ಅಂತರವು ಬಹಳವಾಗಿರಲಿಲ್ಲ. ದೇವಾನುದೇವತೆಗಳು, ಮನುಷ್ಯರ ಕಷ್ಟಸುಖಗಳಲ್ಲಿ ಭಾಗವಹಿಸಿ, ತಮ್ಮ ಕಷ್ಟಸುಖಗಳಲ್ಲಿ ಅವರಿಂದ ಸಹಾಯ ಪಡೆದು ಹೀಗೆ ಕೇವಲ ಅನ್ಯೋನ್ಯಭಾವದಿಂದ ವರ್ತಿಸುತ್ತಿದ್ದರು. ಭರತಖಂಡದ ಜನರು ದೇವತೆಗಳೊಡನೆ ಬೆರೆದು ತಮ್ಮ ಜೀವಿತಯಾತ್ರೆಯನ್ನು ಸಾಗಿಸುತ್ತಿದ್ದ ಆ ಸುವರ್ಣ ಯುಗದಲ್ಲಿ ದೇವತೆಗಳು ಕಾಲಕಾಲಕ್ಕೆ ವೃಷ್ಟಿಯನ್ನು ಸುರಿಸಿ-ಲೋಕದ ಜನರಿಗೆ ಸುಖಕರ

ವಾಗಿರುವಷ್ಟು ಪ್ರಮಾಣದಲ್ಲಿ ಗಾಳಿಬಿಸಿಲು ಮಳೆಚಳಿಗಳನ್ನು ಅನುಗ್ರಹಿಸಿ ಕ್ಷೇಮದಿಂದ ಕಾಪಾಡುತ್ತಿದ್ದರು. ಲೋಕದ ಜನರೂ ಸಹ, ದೇವತೆಗಳಿಂದ ಪಡೆದ ಆ ಪದಾರ್ಥಗಳಿಗಾಗಿ ಅವರನ್ನು ಕೃತಜ್ಞತಾಪೂರ್ವಕವಾಗಿ ವಂದಿಸಿ, ಅನೇಕ ಬಗೆಯಿಂದ ಅವರ ಉದಾರಭಾವವನ್ನು ಹೊಗಳಿ ಕೀರ್ತಿಸಿ, ಯಜ್ಞಯಾಗಾದಿಗಳ ರೂಪದಿಂದ ಪುನಃ ಅವುಗಳ ಸತ್ವಾಂಶವನ್ನು ದೇವತೆಗಳಿಗೇ ಸಮರ್ಪಿಸುತ್ತಿದ್ದರು. ಅದರಿಂದ ಸುಪ್ರೀತರಾದ ದೇವತೆಗಳು ಮತ್ತೆ ಒಂದಕ್ಕೆ ಹತ್ತರಷ್ಟು, ನೂರರಷ್ಟು ಪ್ರಮಾಣದಿಂದ ಪ್ರತಿಫಲಕೊಟ್ಟು ತಮ್ಮ ಆರಾಧಕರನ್ನು ಸಂತೋಷಪಡಿಸುತ್ತಿದ್ದರು. ಹೀಗೆ ಬಹುಕಾಲ ನಡೆದುಬಂದಿತು.

ಮುಂದೊಂದುವೇಳೆ ದಕ್ಷಪ್ರಜೇಶ್ವರನು ಅಧಿಕಾರ ಮದದಿಂದ ಕೊಬ್ಬಿ, ತನ್ನ ಅಳಿಯನಾದ ಪರಶಿವನೊಂದಿಗೆ ದ್ವೇಷಮಾಡಿದನು. ಆ ದ್ವೇಷಸಾಧನೆಯು ಅಷ್ಟರಲ್ಲೇ ನಿಲ್ಲಲಿಲ್ಲ. ತಾನುಮಾಡಿದ ಒಂದು ಯಜ್ಞಕ್ಕೆ ತನ್ನಮುದ್ದಿನ ಮಗಳಾದ ದಾಕ್ಷಾಯಣೀ ದೇವಿಯನ್ನೂ ಅಳಿಯ ಶಿವನನ್ನೂ ಆಹ್ವಾನಿಸುವುದು ಕೂಡ ಆತನಿಗೆ ಸಹನೆಯಾಗಲಿಲ್ಲ. ಆತನ ಈ ದುಷ್ಟ ಸ್ವಭಾವವು ಪರಶಿವನ ಗಮನಕ್ಕೆ ತರಲ್ಪಟ್ಟಿತಾದರೂ ಮಹಾನುಭಾವನೂ ಆತ್ಮಚಿಂತಾಮಗ್ನನೂ ಆದ ಆತನು ಅದನ್ನು ಮಾನಸಿಕಮಾಡಿ, ದಕ್ಷನ ವಿಷಯದಲ್ಲಿ ಉದಾಶೀನ ಭಾವವನ್ನು ವಹಿಸಿ ಸುಮ್ಮನಿದ್ದುಬಿಟ್ಟನು. ಆದರೆ ಇದು ಆತನ ಪತ್ನಿಯಾದ ದಾಕ್ಷಾಯಣೀ ದೇವಿಗೆ ಸಹನೆಯಾಗದೆ, ತಮ್ಮ ತಂದೆಯ ಮನೆಯಲ್ಲಿ ನಡೆವ ಯಾಗಕ್ಕೆ ಆಹ್ವಾನ ಬಾರದಿದ್ದರೂ ತಾನು ಹೋಗುವುದು ಅಪರಾಧವಲ್ಲವೆಂದು ತಿಳಿದು, ಅಲ್ಲಿಗೆ ಹೋಗಿಬರಲು, ಪರಶಿವನನ್ನು ಕಾಡಿಬೇಡಿ ಪೀಡಿಸಿ ಎಂತೂ ಅನುಮತಿ ಪಡೆದಳು. ಕರೆಯದವರ ಮನೆಗೆ ಹೋಗುವುದರಿಂದ ಆಗುವ ಪರಿಣಾಮವೇನೆಂಬುದನ್ನು ಕುರಿತು ಬಹುಬಗೆಯಿಂದ ಹೇಳಿದ ಪರಶಿವಮೂರ್ತಿಯ ಮಾತುಗಳು ಪ್ರಯೋಜನಕ್ಕೆ ಬರಲಿಲ್ಲ ಕೊನೆಗೆ ಶಿವನು ಹೋಗೆಂದು ಅನುಮತಿಕೊಟ್ಟನು. ತನ್ನ ಅನುಚರರಲ್ಲಿ ಕೆಲವರನ್ನೂ ಜೊತೆಮಾಡಿ ಆಕೆಯನ್ನು ದಕ್ಷನ ಯಾಗ ನಡೆಯುತ್ತಿದ್ದ ಸ್ಥಳಕ್ಕೆ ಕಳುಹಿಸಿದನು.

ತನ್ನ ಪತಿಯು ಮಾತನ್ನು ಮೀರಿ ಆತನ ಇಷ್ಟಕ್ಕೆ ವಿರೋಧವಾಗಿ ಅಲ್ಲಿಗೆ ಬಂದುದು ಎಂತಹ ಪ್ರಮಾದಕರವಾದ ಕಾರ್ಯವಾಯಿತೆಂಬುದು ಸತೀದೇವಿಗೆ ಯಾಗಭೂಮಿಯನ್ನು ಸೇರಿದಮೇಲೆ ತಿಳಿಯಿತು. ತನ್ನನ್ನು ಬಳಿಗೆ ಕರೆದು ಆದರಿಸಿ ತನ್ನ ಮತ್ತು ಪತಿಯ ಕ್ಷೇಮಸಮಾಚಾರವನ್ನು ವಿಚಾರಿಸುವನೆಂದುಕೊಂಡಿದ್ದ ಆಕೆಯ ತಂದೆಯು, ತನ್ನ ಕಡೆಗೆ ತಿರುಗಿಯೂ ನೋಡಲಿಲ್ಲ. ಮಹಾ ಧೂರ್ತನಾಗಿದ್ದ ಅವನ ಭಯದಿಂದ ದಾಕ್ಷಾಯಣಿಯ ತಾಯಿ ಅಕ್ಕತಂಗಿಯರು ಮುಂತಾದ ಸ್ತ್ರೀಜನವು ಸಹಾ ಆಕೆಯ ಕಡೆ ಸುಳಿಯಲಿಲ್ಲ. ದಾಕ್ಷಾಯಣೀ ದೇವಿಯು ಹೀಗೆ ಅಪಮಾನಿತಳಾದ ತರುವಾಯ, ಅಲ್ಲಿಂದ ಹೊರಟು ಪುನಃ ತನ್ನ ಪತಿಯ ಬಳಿಗೆ ಹೋಗಲಿಕ್ಕಾಗಲೀ ಅಥವ ಅಲ್ಲೇ ನಿಲ್ಲಲಿಕ್ಕಾಗಲೀ ತೋರದೆ, ಮುಂದೇನು ಮಾಡಬೇಕೆಂದು ಚಿಂತಿಸುತ್ತಾ ಸ್ವಲ್ಪಹೊತ್ತು ನಿಂತುಕೊಂಡಿರುವಷ್ಟರಲ್ಲಿ, ಮಹಾ ದುರ್ಮತಿಯಾದ ದಕ್ಷನು, ಶಿವನಿಗೆ ಯಜ್ಞಭಾಗವನ್ನು ಕೊಡಬೇಕಾದ ಸಮಯಬಂದಾಗ್ಗೆ ಆತನನ್ನು-'ಸ್ಮಶಾನವಾಸಿ, ಭಸ್ಮಧಾರಿ, ಭಿಕ್ಷುಕ' ಎಂದು ಮುಂತಾಗಿ ಹಲವು ಬಗೆಯಿಂದ ನಿಂದಿಸ ತೊಡಗಿದನು. ತನ್ನ ಸ್ವಂತ ತಂದೆಯಿಂದಲೇ ಆಗುತ್ತಿದ್ದ ತನ್ನ ಪತಿನಿಂದೆಯನ್ನು ಕೇಳಿ ಸಹಿಸಲಾರದೆ, ಪತಿವ್ರತಾ ಶಿರೋಮಣಿಯಾದ ಆ ಸತೀದೇವಿಯು ತನ್ನ ಯೋಗ ಸಾಮರ್ಥ್ಯದಿಂದ ದೇಹದಲ್ಲಿನ ಅಗ್ನಿಯನ್ನು ಪ್ರಜ್ವಲನಗೊಳಿಸಿ, ಅದರಿಂದಲೇ ತನ್ನ ಭೌತಿಕ ಕಳೇಬರವನ್ನು ದಹಿಸಿಬಿಟ್ಟಳು. ಯಜ್ಞಮಂಟಪದಲ್ಲಿ ಹಾಹಾಕಾರವೆದ್ದಿತು. ದೇವಿಯೊಂದಿಗೆ ಬಂದಿದ್ದ ಶಿವಾನುಚರರು ತಮ್ಮ ಸ್ವಾಮಿಯ ಬಳಿಗೈದಿ ನಡೆದುಹೋದ ಅನಾಹುತವನ್ನು ಕುರಿತು ವಿಜ್ಞಾಪಿಸಿಕೊಂಡರು. ಶಂಕರಮೂರ್ತಿಯು ಆ ವಾರ್ತೆಯನ್ನು ಕೇಳಿ ಕಾಲರುದ್ರನಂತೆ ಘುಡಿಘುಡಿಸಿ ರೋಷಾವೇಶದಿಂದ ನೆಲವನ್ನಪ್ಪಳಿಸಲು ವೀರಭದ್ರನೆಂಬ ಭಯಂಕರ ವ್ಯಕ್ತಿಯೊಂದು ಉದ್ಭವಿಸಿ, ಯಾಗಭೂಮಿಗೆ ನಡೆದು ಕೇಡಿಗನಾದ ದಕ್ಷಪ್ರಜೇಶ್ವರನನ್ನು ಧ್ವಂಸಮಾಡಿಬಿಟ್ಟನು. ಯಜ್ಞವೂ ಅದರೊಂದಿಗೇ ಅಂತ್ಯವಾಗಿ ಹೋಯಿತು.

ಅನ್ಯೋನ್ಯ ದಾಂಪತ್ಯದಿಂದ ಕ್ಷಣಕಾಲವೂ ಅಗಲದೆ ಒಂದುಗೂಡಿರುತ್ತಿದ್ದ ದಾಕ್ಷಾಯಣೀ ಪರಶಿವರ ಸಂಸಾರವು ಹೀಗೆ ಅಂತ್ಯವಾದುದರಿಂದ

ಪರಶಿವನು ಮುಂದೆ ಸಂಸಾರ ವಿಚಾರದಲ್ಲಿ ನಿರಾಶನಾದನು. ಮನಸ್ಸು ವೈರಾಗ್ಯಭಾವವನ್ನಾಶ್ರಯಿಸಿತು. ಉತ್ಸಾಹವು ಕುಗ್ಗಿತು. ಏಕಾಂತವಾಸವೇ ಮೇಲೆನ್ನಿಸಿತು. ಒಡನೆ ಕೈಲಾಸ ಗೃಹವನ್ನು ತ್ಯಜಿಸಿ ಹಿಮಾಲಯದ ತಪ್ಪಲಿನ ಪ್ರದೇಶವನ್ನಾಶ್ರಯಿಸಿ, ನಿರ್ಜನವಾದೊಂದು ಗಹನವಾದ ಕಾಡಿನ ಮಧ್ಯಪ್ರದೇಶದಲ್ಲಿ ತಪೋನಿರತನಾಗಿ ಕುಳಿತನು. ಜಿತೇಂದ್ರಿಯ ಸಾರ್ವಭೌಮನಾದ ಪರಮೇಶ್ವರನು ಇಚ್ಛೆಗೊಂಡು ತಪೋನಿರತನಾಗಿ ಅಂತರ್ಮುಖನಾಗಿ ಕುಳಿತಮೇಲೆ, ಇನ್ನು ಅದನ್ನು ಭಂಗಗೊಳಿಸಿ ಆತನನ್ನು ಎಚ್ಚರಗೊಳಿಸಲು ಯಾರಿಂದ ಸಾಧ್ಯ!—

ಆ ಕಾಲದಲ್ಲಿ, ಪ್ರಾರಂಭದಿಂದಲೂ ದೇವತೆಗಳಿಗೂ ದೈತ್ಯರಿಗೂ ಬೆಳೆದುಬಂದಿದ್ದ ದ್ವೇಷಭಾವವು ಅತಿ ಉತ್ಕಟಾವಸ್ಥೆಯನ್ನು ಹೊಂದಿತು. ಬಲಿಯೇ ಮುಂತಾದ ದೈತ್ಯ ಚಕ್ರೇಶ್ವರರು, ಅಪಾರ ಸೈನ್ಯಸಮೇತರಾಗಿ ಸ್ವರ್ಗ ರಾಜಧಾನಿಯಮೇಲೆಯೇ ದಂಡೆತ್ತಿನಡೆದು, ಇಂದ್ರಾದಿ ಲೋಕಪಾಲಕರನ್ನು ಪರಿಪರಿಯಿಂದ ಬಾಧಿಸತೊಡಗಿದರು. ಪಾತಾಳವಾಸಿಗಳಾಗಿದ್ದ ಈ ದಾನವರ ಪ್ರಾಬಲ್ಯವು ಸ್ವರ್ಗಲೋಕ ಮರ್ತ್ಯಲೋಕಗಳಲ್ಲೂ ವ್ಯಾಪಿಸಿ ತ್ರಿಲೋಕಾಧಿಪನಾದ ದೇವೇಂದ್ರನ ಆಧಿಪತ್ಯವು ನಾಮಾವಶೇಷವೆನ್ನಿಸುವ ಪರಿಸ್ಥಿತಿಗಿಳಿಯಿತು. ಮೂರುಲೋಕದ ಪ್ರಜೆಗಳೂ ಹಾಹಾಕಾರ ಮಾಡಸಾಗಿದ್ದರು. ದಾನವವರ್ಗದ ಕೈಯು ಹಾಗೆ ಮೇಲೆನ್ನಿಸಿ, ಮೂರು ಲೋಕವೂ ತಲ್ಲಣಗೊಂಡಿದ್ದ ಆ ಕಾಲದಲ್ಲೇ ನಮುಚಿ ಎಂಬೊಬ್ಬ ದಾನವನ ಮಗನಾದ ತಾರಕಾಸುರನು, ತನ್ನ ಅಧಿಕಾರವನ್ನು ಲೋಕದಲ್ಲಿ ಶಾಶ್ವತಗೊಳಿಸಬೇಕೆಂದು ಸ್ಥಿರಸಂಕಲ್ಪಮಾಡಿದನು. ದಾನವರ ಚಕ್ರಾಧಿಪತ್ಯವು ಚಿರಜೀವಿಯಾಗಬೇಕಾಗಿದ್ದರೆ, ದಾನವ ಮುಖ್ಯನಾದ ತಾನು ಜರಾಮರಣ ರಹಿತನಾಗಿರಬೇಕಾದುದು ಅತ್ಯಾವಶ್ಯಕವೆನ್ನಿಸಿತು. ಒಡನೆ ಪಿತಾಮಹನಾದ ಬ್ರಹ್ಮದೇವನನ್ನು ಆರಾಧಿಸಿ ಅಂತಹ ಅಲೌಕಿಕ ವರವನ್ನೊಂದನ್ನು ಪಡೆಯಬೇಕೆಂದು ಸಂಕಲ್ಪಿಸಿ, ತಪೋನಿರತನಾಗಿ ಕುಳಿತನು. ಮಹಾ ಬಲಿಷ್ಠನೂ ತೇಜಸ್ವಿಯೂ ಆದ ತಾರಕನ ತಪಸ್ಸು ದಿನದಿನಕ್ಕೆ ಉಗ್ರತರವಾಗತೊಡಗಿತು. ಆ ತಪೋಜ್ವಾಲೆಗೆ ಮೂರು ಲೋಕವೂ ತಲ್ಲಣಿಸಿಹೋಯಿತು. ಇಂದ್ರಾದಿ ದೇವತೆಗಳಾದರೋ ಮಹಾ ದು

ರುಳನಾದ ಈ ದೈತ್ಯನು, ತ್ರಿಮೂರ್ತಿಗಳಲ್ಲಿ ದಾನವಾಂತಕನಾದ ವಿಷ್ಣುವೊಬ್ಬನನ್ನು ಬಿಟ್ಟು, ಮಿಕ್ಕ ಇಬ್ಬರಲ್ಲಿ ಯಾರನ್ನು ಕುರಿತು, ಇಷ್ಟು ಅಗಾಧ ತಪಸ್ಸನ್ನು ಮಾಡುತ್ತಿರುವನೋ, ಆತನನ್ನು ಪ್ರತ್ಯಕ್ಷೀಕರಿಸಿಕೊಂಡು ಏನು ವರವನ್ನು ಬೇಡಲಿರುವನೋ? ಅದರಿಂದ ಲೋಕದಮೇಲೆ ಮತ್ತಾವ ಅನಿಷ್ಟವೊದಗಲಿರುವುದೋ? ಎಂದು ಮಹಾಚಿಂತಾಕ್ರಾಂತರಾಗಿದ್ದರು. ತಾರಕಾಸುರನು ಹೀಗೆ ಬಹುಕಾಲಗಳವರೆಗೆ ಮಾಡಿದ ತಪಸ್ಸಿಗೆ ಮೆಚ್ಚಿ, ಬ್ರಹ್ಮದೇವನು ಪ್ರತ್ಯಕ್ಷನಾಗಿ ಬಂದು-'ವತ್ಸ ತಾರಕಾ, ಕಠಿಣವಾದ ತಪಸ್ಸಿನಿಂದ ಬಹುಮಟ್ಟಿಗೆ ನೊಂದಿರುವೆ. ನಿನ್ನ ಈ ತಪಸ್ಸಿಗೆ ಮೆಚ್ಚಿ ನಿನ್ನ ಇಷ್ಟಾರ್ಥವನ್ನು ಪೂರೈಸಲಿಕ್ಕಾಗಿ ಇಗೋ ಬಂದಿದ್ದೇನೆ. ನಿನಗೆ ಸಂತೋಷತೋರುವ ವರಗಳನ್ನು ಬೇಡಿಕೋ ಕೊಡುತ್ತೇನೆ' ಎಂದು ನುಡಿದನು.

ತಾರಕಾಸುರನಿಗೆ ಪರಮಾನಂದವಾಯಿತು. ಬ್ರಹ್ಮದೇವನಿಗೆ ನಮಸ್ಕಾರಮಾಡಿ,-'ಸ್ವಾಮೀ ಪಿತಾಮಹ, ನೀನು ನನ್ನಲ್ಲಿ ಸಂತುಷ್ಟನಾಗಿಯೂ ಸುಪ್ರೀತನಾಗಿರುವ ಭಾಗದಲ್ಲಿ ನನಗೆ ಅಮರತ್ವವನ್ನು ದಯಪಾಲಿಸು. ನಾನು ಎಂದಿಗೂ ಸಾಯದಿರುವಿಕೆಯನ್ನು ಮಾತ್ರವಲ್ಲ-ಯಾರಿಗೂ ಯುದ್ಧದಲ್ಲಿ ಸೋಲದಿರುವಿಕೆಯನ್ನೂ ಅನುಗ್ರಹಿಸು' ಎಂದು ಕೇಳಿಕೊಂಡನು. ಅದನ್ನು ಕೇಳಿ ಬ್ರಹ್ಮದೇವನು ನಸುನಕ್ಕು-'ಎಲೈ, ಅಸುರೇಶ್ವರಾ, ಲೋಕದಲ್ಲಿ ಹುಟ್ಟಿದವರೆಲ್ಲರೂ ಸತ್ತೇತೀರಬೇಕೆಂಬ ವಿಧಿನಿಯಮವಿರುವುದನ್ನು ನೀನು ಅರಿತಿಲ್ಲವೆ? ಹೀಗಿರುವಲ್ಲಿ ನಿನಗೆ ಅಮರತ್ವವನ್ನು ಕೊಡಲು ಹೇಗೆ ಸಾಧ್ಯವಾದೀತು? ಇಂತಹ ಅಸಾಧ್ಯ ವರಗಳನ್ನೇಕೆ ಕೇಳುತ್ತಿರುವೆ! ಎಂದನು. ಅವನಿಗೆ ಬ್ರಹ್ಮದೇವನ ಮಾತು ತಪ್ಪೆನ್ನಿಸಲಿಲ್ಲ. ಅದಕ್ಕೆ ಪ್ರತ್ಯುತ್ತರ ಕೊಡುವುದೂ ಸಾಧ್ಯವೆಂದು ತೋರಲಿಲ್ಲ. ಆದರೆ ಇಷ್ಟುಕಾಲ ಘೋರವಾದ ತಪಸ್ಸುಮಾಡಿದುದರ ಸಾರ್ಥಕ್ಯವೇನು? ದೈತ್ಯಶೇಖರನಾದ ತಾನು ಚಿರಜೀವಿಯಾಗಿರದಿದ್ದರೆ, ಅವನ ಆಧಿಪತ್ಯವಾದರೂ ಲೋಕದಲ್ಲಿ ಹೇಗೆ ನೆಲೆಗೊಂಡೀತು!' ಎಂದು ಮುಂತಾಗಿ ಯೋಚಿಸಿಕೊಂಡು, ಬ್ರಹ್ಮದೇವನನ್ನು ಕುರಿತು-'ಪಿತಾಮಹ ನನಗೆ ಅಮರತ್ವವನ್ನು ಕೊಡಲಾಗದಿದ್ದಲ್ಲಿ, ಮತ್ತೊಂದು ವರವನ್ನು ಅನುಗ್ರಹಿಸು. ನಾನು ಪರಶಿವನ ಔರಸ ಪುತ್ರನಿ

ಗಲ್ಲವೆ ಮತ್ತಾರಿಗೂ ಯುದ್ಧದಲ್ಲಿ ಸೋಲಲಾರದಂತಹ ಅಜೇಯತ್ವವನ್ನಾ ದರೂ ಅನುಗ್ರಹಿಸು. ಅವನಿಂದಲ್ಲದೆ ಮತ್ತಾರಿಂದಲೂ ನನಗೆ ಮರಣವಾ ಗದಿರಲಿ' ಎಂದು ಬೇಡಿಕೊಂಡನು.

ಬ್ರಹ್ಮದೇವನು 'ತಥಾಸ್ತು' ವೆಂದು ನುಡಿದು ತನ್ನ ಲೋಕವನ್ನು ಕುರಿತು ಪ್ರಯಾಣಮಾಡಿದನು. ತಾರಕನು-'ಇನ್ನು ತನಗೆ ಎದುರಾಗುವ ಧೀರನಾರು?' ಎಂದು ಆರ್ಭಟಿಸುತ್ತಾ, ತನ್ನ ಸ್ನೇಹಿತರೂ ಆಪ್ತರೂ ಆದ ದಾನವ ಶ್ರೇಷ್ಠರನ್ನು ಕುರಿತು ತನ್ನ ವಿಜಯವಾರ್ತೆಯನ್ನು ಬಹು ಅಟ್ಟ ಹಾಸದಿಂದ ತಿಳಿಸಿದನು. ಅದನ್ನು ಕೇಳಿದ ಅವರು-'ಅಯ್ಯಾ ದೈತ್ಯಶೇಖ ರನೇ, ನಮ್ಮ ವಂಶದ ಕೀರ್ತಿಯನ್ನು ಕೋರಿ ನೀನು ಕೈಕೊಂಡು ನೆರವೇರಿ ಸಿದ, ಈ ಅಗಾಧ ಕಾರ್ಯಕ್ಕಾಗಿ, ಮಹಾಮತಿಯಾದ ನಿನ್ನನ್ನು ನಾವೆಲ್ಲ ರೂ ಅಭಿನಂದಿಸುತ್ತೇವೆ. ಆದರೆ, ಮಹಾದೇವನ ಆತ್ಮಜನಿಂದ ಮಾತ್ರವೇ ನಿನಗೆ ಮರಣವಾಗಬೇಕೆಂದು ಕೇಳಿಕೊಂಡುದರಲ್ಲಿ ನಿನ್ನ ಆಶಯವೇನೆಂ ಬುದು ತೋರಲಿಲ್ಲ. ಸಾಂಬಸದಾಶಿವನು ನಮ್ಮ ಕುಲಸ್ವಾಮಿಯಲ್ಲವೆ? ಆತನ ಪುತ್ರನು ನಿನ್ನನ್ನು [illegible] ನಿನ್ನ [illegible] ಪುತ್ರ ಸಂತತಿಯನ್ನೂ ಕೊಲ್ಲುವುದೆಂದರೆ ಅರ್ಥವೇನು? ನಮ್ಮ ಕುಲದೈವವನ್ನು ಆರಾಧಿಸಿ ಶ್ರೇಯಸ್ಸಂಪಾದನೆಮಾಡುವುದನ್ನು ಬಿಟ್ಟು, ಆತನೊಂದಿಗೆ ದ್ವೇಷಸಾಧನೆ ಮಾಡಬಹುದೆ?' ಎಂದು ಪ್ರಶ್ನಿಸಿದರು. ಆಗ ತಾರಕಾ ಸುರನು-'ಕೇಳಿ ಮಿತ್ರವರ್ಯರೇ, ಬ್ರಹ್ಮದೇವನು-ಎಲ್ಯೆ ತಾರಕನೇ ನಿನಗೆ ಅಮರತ್ವವನ್ನು ಕೊಡಲು ಸಾಧ್ಯವಿಲ್ಲ. ನಿನಗೆ ಮಂಗಳಕರವೆನ್ನಿಸುವ ಮತ್ತಾವುದಾದರೊಂದು ವರವನ್ನು ಕೇಳಿಕೊಳ್ಳೆಂದನು. ಆಗ ನಾನು ಹೀಗೆ ಯೋಚಿಸಿದೆನು. ಪರಶಿವನು, ತನ್ನ ಪತ್ನಿಯಾದ ದಾಕ್ಷಾಯಣೀ ದೇವಿಯು ನಷ್ಟವಾದಂದಿನಿಂದ ಲೋಕವಿಚಾರದಲ್ಲಿ ನಿರಾಸೆಯನ್ನು ವಹಿಸಿ, ತೀವ್ರ ವಿರಕ್ತಭಾವದಿಂದ ಹಿಮಾಲಯದ ತಟದಲ್ಲಿ ತಪೋನಿರತನಾಗಿ ಕುಳಿತುಬಿಟ್ಟಿರುವನು. ಆತನನ್ನು ಆ ಧ್ಯಾನಸಮಾಧಿಯಿಂದ ಬಹಿರ್ಮುಖ ನನ್ನಾಗಿ ಮಾಡಿಸುವುದಾಗಲೀ, ಅಥವ ಆತನು, ದಾಕ್ಷಾಯಣೀ ದೇವಿ ಯಂತಹ ಮನೋಹಾರಿಣಿಯಾದ ಪತ್ನಿಯನ್ನು ಕಳೆದುಕೊಂಡು ಪುನಃ ಮತ್ತೊಬ್ಬ ಸ್ತ್ರೀಯನ್ನು ಪತ್ನಿಯಾಗಿ ವರಿಸುವುದಾಗಲೀ, ಹಾಗೊಂದು

ವೇಳೆ ವರಿಸಿದ ಕಾಲಕ್ಕೂ,-ಅವರ ಉದರದಲ್ಲಿ ಪುತ್ರನು ಉದಯಿಸಿ ಅವನು ದೇವಸೈನ್ಯವನ್ನು ನಡೆಯಿಸಿದ ಕಾಲಕ್ಕಲ್ಲನೆ ನಾನು ಅವನಿಂದ ಜಯಿಸಲ್ಪಡತಕ್ಕದು. ಇದು ಅಸಂಭವನೆಂದೇ ಹೇಳಬೇಕಾಗುತ್ತದೆ. ಒಂದುವೇಳೆ ಸಂಭವಿಸುವುದೆನ್ನಬಹುದಾದರೂ ಅದು ಈ ಕಲ್ಪದ ವಿಚಾರವಾಗಲಾರದು. ಹೀಗೆ ದೀರ್ಘಾಲೋಚನೆಮಾಡಿ, ಅಷ್ಟುಕಾಲದವರೆಗಂತೂ ದಾನವಸೈನ್ಯವು ನನ್ನ ಆಧಿಪತ್ಯದಲ್ಲಿ ಅಜೇಯವಾಗಿರುವುದಲ್ಲವೆ ? ಎಂದು ಯೋಚಿಸಿದ್ದೇನೆ' ಎಂದು ನುಡಿದನು.

ತಾರಕಾಸುರನ ಆ ವಾರ್ತೆಯು ದಾನವರಿಗೆಲ್ಲರಿಗೂ ಪರಮಾನಂದವನ್ನುಂಟುಮಾಡಿತು. ತಮ್ಮ ಕುಲದ ಮೇಲ್ಮೆಗಾಗಿ ಆತನು ಸ್ವಯಂ ಪರಿಶ್ರಮದಿಂದ ಅಷ್ಟುಮಟ್ಟಿನ ಪ್ರಾಭಸ್ಯವನ್ನು ಪಡೆದುದು ಎಲ್ಲರಿಗೂ ಅತಿಶಯ ಸೌಭಾಗ್ಯಪ್ರದವೆನ್ನಿಸಲು, ಎಲ್ಲರೂ ಮಹೋತ್ಸವಗಳನ್ನು ನಡೆಯಿಸಿ, ಆ ನಮುಚಿ ಕುಮಾರನಿಗೆ ದಾನವಸೈನ್ಯದ ಸರ್ವಾಧಿಪತ್ಯವನ್ನೂ ವಹಿಸಿದರು. ತಾರಕಾಸುರನು, ಪ್ರತಿಸ್ಪರ್ಧಿನಿಸ್ಸಿ ಮಹಾ ಪರಾಕ್ರಮಿಯಾಗುದರಿಂದ ಯಾರ ಲಕ್ಷ್ಯವೂ ಇಲ್ಲದೆ, ದೇವತೆಗಳನ್ನೂ ಋಷಿಮುನಿಗಳನ್ನೂ, ಮಾನವ ಕುಲವನ್ನೂ ಚಿತ್ರವಿಚಿತ್ರ ಹಿಂಸೆಗಳಿಂದ ಬಾಧಿಸುತ್ತಾ, ತ್ರಿಲೋಕಕಂಟಕನಾಗಿದ್ದನು.

---

## ಅಧ್ಯಾಯ ೨. 'ಜನನ-ಬಾಲ್ಯ-ವಿದ್ಯಾಭ್ಯಾಸ.'

ಪರಶಿವನು ತೀವ್ರತರ ವಿರಕ್ತಿಯನ್ನು ಕೈಕೊಂಡು ತಪೋನಿರತನಾಗಿ ಕುಳಿತುಬಿಟ್ಟುದರಿಂದ ತಾರಕಾಸುರನಿಗೆ ಮೂರುಲೋಕಗಳನ್ನೂ ತನ್ನ ಮನಬಂದಂತೆ ಪೀಡಿಸಲು ನಿರಾತಂಕವಾಯಿತು. ಅಪಾರಸೈನ್ಯದೊಂದಿಗೆ ಎಲ್ಲೆಗೆಂದರಲ್ಲಿಗೆ ದಂಡೆತ್ತಿ ನಡೆದು ತಪೋನಿರತರಾಗಿ ಕುಳಿತ ಋಷಿಮುನಿಗಳನ್ನು ಹಿಂಸೆಗೊಳಿಸುವನು. ಅವರ ಆಶ್ರಮಗಳಲ್ಲಿ ಗೋವಧೆ ಮುಂತಾದ ಅಶುಚಿ ಕಾರ್ಯಗಳನ್ನು ನಡೆಯಿಸಿ ಅಪವಿತ್ರಗೊಳಿಸುವನು. ಆಶ್ರಮದ ಪುಷ್ಪ

ಫಲಭರಿತವಾದ ಲತೆಗಳನ್ನೂ ವೃಕ್ಷಗಳನ್ನೂ ಕಡಿದು ಧ್ವಂಸಗೊಳಿಸುವನು. ಸಾಧುವೃತ್ತಿಯ ಬ್ರಾಹ್ಮಣರನ್ನು ಎಲ್ಲಿ ಕಂಡರಲ್ಲಿ ಪರಿಪರಿಯ ಕಿರುಕುಳಗಳಿಗೆ ಈಡುಮಾಡಿ, ಅವರು ವ್ಯಥೆಪಡುತ್ತಿದ್ದರೆ, ಆ ದುರುಳನು ಕೋಲಾಹಲ ಧ್ವನಿಯಿಂದ ನಕ್ಕು ಆನಂದಗೊಳ್ಳುವನು. ಸಾಧುಗಳ ವಾಸಸ್ಥಾನಗಳಲ್ಲಿದ್ದ ಸುಂದರವಾದ ದೇವಾಲಯ, ಮಂಟಪ, ವೃಂದಾವನ, ಕೆರೆಕೊಳ ಮುಂತಾದುವೆಲ್ಲಾ ಆ ದುರುಳನ ಕೈಗೆ ಬಿದ್ದು ನಾಶವಾಗಿ ಹೋದುವು. ಸಜ್ಜನರೂ ಧೈವಭಕ್ತರೂ ಆದ ಜನರಿಗೆ ಮಾತ್ರವಲ್ಲ ಪಶುಪಕ್ಷಿಗಳಿಗೂ ಆ ದುರುಳನಿಂದ ಕ್ಷೇಮವಿರಲಿಲ್ಲ. ಊರುಗಳಲ್ಲಿದ್ದ ಗೋವುಗಳೂ, ಕಾಡುಗಳಲ್ಲಿ ವಾಸಿಸುತ್ತಿದ್ದ ಜಿಂಕೆ ನವಿಲು ಗಿಳಿ ಅಳಿಲು ಮುಂತಾದ ಸಾಧು ಪ್ರಾಣಿಗಳೂ ಅವನ ಹಾವಳಿಯಿಂದ ಉಳಿಗಾಲವಿಲ್ಲದೆ ನಾಶಹೊಂದುತ್ತಿದ್ದುವು. ಮದೋನ್ಮತ್ತನಾದ ತಾರಕಾಸುರನ ಹಾವಳಿಯು ಅಪರಿಮಿತವಾಯಿತು.

ಲೋಕಪಾಲಕರಾದ ದೇವೇಂದ್ರಾದಿಗಳು ಇವನ ಬಾಧೆಯಿಂದ ಲೋಕವನ್ನು ಕಾಪಾಡುವ ಮಾರ್ಗವರಿಯದೆ ಮುಂದೆ ಸತ್ಯಲೋಕದ ಬ್ರಹ್ಮದೇವನಲ್ಲಿ ಹೋಗಿ ಮೊರೆಯಿಟ್ಟರು. ಆಗ 'ಎಲೈ ದೇವತೆಗಳಿರಾ, ಹಿಮಾಚಲದಲ್ಲಿ ತಪೋನಿರತನಾಗಿ ಕುಳಿತಿರುವ ಪರಶಿವನ ಉದರದಲ್ಲಿ ಜನಿಸುವ ಮಹಾಬಲಶಾಲಿಯಾದ ಮಗನೊಬ್ಬನಿಗೆ ಮಾತ್ರವೇ ಅವನನ್ನು ಕೊಲ್ಲಲು ಸಾಧ್ಯವಿರುವುದು. ಆದುದರಿಂದ ಆತನು ಕುಟುಂಬವಂತನಾಗುವಂತೆ ಪ್ರಯತ್ನಿಸಿರಿ. ಮುಂದೆ ಎಲ್ಲಾ ಕಾರ್ಯಗಳೂ ಸುಲಲಿತವಾಗುವುವು' ಎಂದು ಹೇಳಿದಂತೆ ಒಂದು ಆಕಾಶವಾಣಿ ಕೇಳಿಸಿತು. ಅದನ್ನು ಕಿವಿಗೊಟ್ಟು ಕೇಳಿದ ದೇವತೆಗಳು, ಸ್ವಲ್ಪ ಸಮಾಧಾನಗೊಂಡು, ಹಿಮಾಚಲಪ್ರಾಂತಕ್ಕೆ ಬಂದು, ಆ ನಗಾಧಿಪನಾದ ಹಿಮವಂತನನ್ನು ಕಂಡು ವಂದಿಸಿ-'ಎಲೈ ಪುಣ್ಯಶೀಲನೇ! ತಾರಕಾಸುರನ ಬಾಧೆಯು ಲೋಕದಲ್ಲಿ ದಿನದಿನಕ್ಕೆ ಹೆಚ್ಚುತ್ತಿದೆ. ನಾವು ಬ್ರಹ್ಮದೇವನನ್ನು ಕುರಿತು ಪ್ರಾರ್ಥಿಸಲು, ಹಿಮಾಲಯದಲ್ಲಿ ತಪಸ್ಸು ಮಾಡಿಕೊಂಡು ಕುಳಿತಿರುವ ಪರಶಿವನು ಕುಟುಂಬಿಯಾಗುವಂತೆ ಪ್ರಯತ್ನಿಸಿರಿ. ಆತನ ಔರಸ ಪುತ್ರನಿಂದಲೇ ತಾರಕನು ವಧ್ಯನಾಗತಕ್ಕವನೆಂದು ಬ್ರಹ್ಮನ ವರವಿರುವುದು' ಎಂದು ಆಕಾಶವಾಣಿಯಾಗಿದೆ. ಈಗ ನೀನು,

ಪರಶಿವನಿಗೆ ಪತ್ನಿಯಾಗಲು ಯೋಗ್ಯಳಾದ ಒಬ್ಬ ಕನ್ಯೆಯನ್ನು ಪಡೆಯ
ಬೇಕು’ ಎಂದರು. ಹಿಮವಂತನು ದೇವತೆಗಳ ಆ ಸಂದೇಶವನ್ನು ಕೇಳಿ,
ಅದರಂತೆ ನಡೆಯಿಸಲು ಸಿದ್ಧನಾದನಾದರೂ, ಅದಕ್ಕಾಗಿ ತಾನು ಮಾಡಬೇ
ಕಾದುದೇನೆಂದು ತೋರಲಿಲ್ಲ. ಆಗ ದೇವಗುರುಗಳಾದ ಬೃಹಸ್ಪತ್ಯಾ
ಚಾರ್ಯರು-‘ಅಯ್ಯಾ ಹಿಮಗಿರೀಶಾ, ಪರಶಿವನು ಪೂರ್ವದಲ್ಲಿ, ದಕ್ಷಯಜ್ಞ
ದಲ್ಲಿ ದೇಹತ್ಯಾಗಮಾಡಿದ ತನ್ನ ಪತ್ನಿ ದಾಕ್ಷಾಯಣಿಯ ಅಗಲಿಕೆಯಿಂದಲೇ
ತೀವ್ರವಿರಕ್ತಿಯನ್ನು ವಹಿಸಿ ಅಂತರ್ಮುಖನಾಗಿ ತಪಸ್ಸುಮಾಡತೊಡಗಿರ
ತಕ್ಕುದು. ಈಗಲೂ ನೀನು ದಾಕ್ಷಾಯಣೀ ದೇವಿಯನ್ನು ಆರಾಧಿಸಿ,
ಆಕೆಯನ್ನು ಮಗಳಾಗಿ ಪಡೆ. ಮುಂದೆ ಆಕೆಯೇ ಪರಶಿವನನ್ನು ಸೇವಿಸಿ
ಆತನ ಅನುಗ್ರಹಕ್ಕೆ ಪಾತ್ರಳಾಗಿ ಪತ್ನಿಯಾಗುವಳು. ತರುವಾಯ ಇತರ
ಕಾರ್ಯಗಳೆಲ್ಲವೂ ಸುಲಭವಾಗಿ ನೆರವೇರುವುವು’ ಎಂದು ನುಡಿದರು.
ಆ ಮಾತು ಎಲ್ಲರಿಗೂ ಯುಕ್ತವೆಂದು ತೋರಿತು. ನೆರೆದ ದೇವತೆಗಳೆಲ್ಲರೂ
‘ತಥಾಸ್ತು ಹಾಗೇ ಆಗಬೇಕು’ ಎಂದರು. ಹಿಮವಂತನು ಅವರೆಲ್ಲರ
ಸನ್ನಿಧಿಯಲ್ಲೇ ಪತ್ನೀಸಮೇತನಾಗಿ, ಕೆಲವುಕಾಲ ದಾಕ್ಷಾಯಣೀ ದೇವಿ
ಯನ್ನು ಶ್ರದ್ಧಾಭಕ್ತಿಗಳಿಂದ ಪೂಜಿಸಿ, ಅನೇಕ ಬಗೆಯಿಂದ ಪ್ರಾರ್ಥಿಸಿ
ಕೊಂಡನು. ಏಕನಿಷ್ಠೆಯಿಂದ ಮಾಡಿದ ಆತನ ಪೂಜೆಯು ಫಲದಾಯಕ
ವಾಯಿತು.—ತಪಸ್ಸು ಸಾರ್ಥಕವಾಯಿತು. ದೇವಿಯು ಪ್ರತ್ಯಕ್ಷಳಾಗಲು-
ಹಿಮವಂತನು ಪತ್ನಿಯೊಂದಿಗೆ ನಮಸ್ಕಾರಮಾಡಿ-‘ತಾಯೇ ದೀನನಾದ
ನನ್ನಲ್ಲಿ ಲೋಕಜನನಿಯಾದ ನೀನೇ ಪುತ್ರೀಸ್ವರೂಪದಿಂದ ಅವತಾರಮಾಡಿ
ನನ್ನ ಮನಸ್ಸನ್ನು ಆನಂದಗೊಳಿಸಬೇಕು’ ಎಂದು ವಿನಯ ವಿಧೇಯತೆ
ಗಳಿಂದ ಪ್ರಾರ್ಥಿಸಿದನು. ದೇವಿಯೂ, ಮಹಾದೇವನನ್ನಗಲಿ ಬಹುಕಾಲ
ವಾಗಿದ್ದುದರಿಂದ, ಭವಿಷ್ಯದ್ವೃತ್ತಾಂತವನ್ನೆಲ್ಲ ಜ್ಞಾನದೃಷ್ಟಿಯಿಂದ ತಿಳಿ
ದು-ತನ್ನ ಅವತಾರಕ್ಕೆ ಅದು ಯೋಗ್ಯಕ್ಷೇತ್ರವೆಂದುಕೊಂಡು-‘ತಥಾಸ್ತು’
ವೆಂದು ನುಡಿದು ಅಂತರ್ಧಾನವಾದಳು.

ಹಿಮವಂತನ ಪತ್ನಿ ಮೇನಕಾದೇವಿಯು, ಮುಂದೊಂದು ಶುಭದಿನದ
ಶುಭಮುಹೂರ್ತದಲ್ಲಿ ಗರ್ಭಧಾರಣೆ ಮಾಡಿದಳು. ಆ ಗರ್ಭದಲ್ಲಿ ಶಿವಸತಿ
ಯಾದ ದಾಕ್ಷಾಯಣೀ ದೇವಿಯ ಪವಿತ್ರಚೇತನವು ಪ್ರವೇಶಿಸಿ ದಿನದಿನ

ಕ್ಕೂ ಶುಕ್ಲಪಕ್ಷದ ಚಂದ್ರಕಳೆಯಂತೆ ಬೆಳೆದು ಪ್ರಕಾಶಿಸುತ್ತಿದ್ದಿತು. ಮಹಾ ತೇಜಸ್ವಿಯಾದ ಆ ಗರ್ಭವು ವೃದ್ಧಿಹೊಂದುತ್ತಿದ್ದಂತೆಲ್ಲಾ, ಮೇನಕಾ ದೇವಿಯೂ ಕಳೆಯೇರುತ್ತಿದ್ದಳು. ದಿನದಿನಕ್ಕೆ ತ್ರಿವಳಿಗಳಡಗಿದುವು. ಗತಿ ಮಂದವಾಯಿತು. ಉದರಭಾಗವು ಸ್ಥೂಲವಾಗತೊಡಗಿತು. ಹೊಸಹೊಸ ಬಯಕೆಗಳು ಮನಸ್ಸಿನಲ್ಲಿ ಉದ್ಭವಿಸತೊಡಗಿದುವು. ಸಾಕ್ಷಾತು ಶಿವನ ಅರ್ಧಾಂಗಿಯೇ ಗರ್ಭಸ್ಥಳಾಗಿರುವಲ್ಲಿ ಮುಂದೆ ಹೇಳಬೇಕಾದುದೇನು? ಮೇನಕಾದೇವಿಯ ಮನಸ್ಸು ಸದಾ ಭಕ್ತಿಶ್ರದ್ಧೆಗಳಿಂದ ಶಿವಾರ್ಚನೆ, ಭಗವದುಪಾಸನೆ, ಶಿವಧ್ಯಾನ ಮುಂತಾದುವುಗಳಲ್ಲಿ ಎಡೆಗೊಳ್ಳುವುದಾಯಿತು. ಪ್ರಾಪಂಚಿಕವಾದ ತಿನಿಸುಉಣಿಸುಗಳಲ್ಲೂ, ನಗೆನೋಟಗಳಲ್ಲೂ ಉಡಿಗೆ ತೊಡಿಗೆಗಳಲ್ಲೂ ಬೇಸರತೋರಿತು. ಮನಸ್ಸು ಯಾವಾಗಲೂ ವಿರಕ್ತಭಾವವನ್ನಾಶ್ರಯಿಸಿ-ಸ್ವಸುಖದ ಮೇಲೆ ಗಮನವಿಲ್ಲದೆ, ಸದಾ ಲೋಕಕ್ಷೇಮವನ್ನೇ ಕುರಿತು ಗಮನಿಸುವುದಾಯಿತು. ಲೋಕಮಾತೆಯಾದ ಅನ್ನಪೂರ್ಣಾ ದೇವಿಯನ್ನೇ ಗರ್ಭದಲ್ಲಿ ಧರಿಸಿದ್ದ ಮೇನಕೆಗೆ ಇಂತಹ ಶುಭೇಚ್ಛೆಗಳುಂಟಾದುದರಲ್ಲಿ ಆಶ್ಚರ್ಯವೇನು?

ಹೀಗೆ ಆ ಪುಣ್ಯಗರ್ಭವು ನವಮಾಸಗಳು ಸುರಕ್ಷಿತವಾಗಿ ಬೆಳೆದು, ಮುಂದೊಂದು ಶುಭನಕ್ಷತ್ರದಲ್ಲಿ ಕನ್ಯಾಶಿಶುವು ಜನನವಾಯಿತು. ಹಿಮವಂತನು ಪ್ರಸವಗೃಹದಲ್ಲಿದ್ದ ಆ ಶಿಶುವನ್ನು ಸಂದರ್ಶಿಸಿ, ತನ್ನ ಜನ್ಮವೂ ವಂಶವೂ ಪಾವನವಾಯಿತೆಂದುಕೊಂಡು ಪರಮಾನಂದಭರಿತನಾದನು. ಶ್ರೀ ದಾಕ್ಷಾಯಣೀ ದೇವಿಯೇ ಶಿಶುರೂಪಿನಿಂದ ಅವತರಿಸಿದ್ದಾಳೆಂಬ ಸಂಗತಿಯು ಆತನ ಮನಸ್ಸಿಗೆ ಗೋಚರವಿದ್ದರೂ, ಭಗವನ್ಮಾಯೆಯಿಂದ ಮರೆವುಂಟಾಗಿ ಸಂತಾನವ್ಯಾಮೋಹವು ಉದಯವಾಗಿ, ಶಿಶುವು ತನ್ನದು-ತನ್ನ ತನುಸಂಭೂತವಾದುದು ಎಂಬ ಮುಂತಾದ ಭಾವಗಳು ಮನಸ್ಸನ್ನು ಆಕ್ರಮಿಸಿದುವು. ಹೀಗೆ ತನ್ನದೆಂಬ ಅಭಿಮಾನವು ಉತ್ಪನ್ನವಾದೊಡನೆಯೇ ಗಿರಿರಾಜನು, ಶಿಶುವಿಗೆ ಜಾತಕರ್ಮಾದಿಗಳೆಲ್ಲವೂ ತನ್ನ ಪದವಿಗೆ ತಕ್ಕಂತೆ ಬಹು ಅಟ್ಟಹಾಸದಿಂದಲೇ ನಡೆಯಬೇಕೆಂದು ಉದ್ದೇಶಿಸಿದನು. ಹಿಮವಂತನ ಆ ರಾಜಧಾನಿಯಲ್ಲಿ ಅಂದು ಸಕ್ಕರೆಯು ಬಂಡಿಬಂಡಿಗಳಲ್ಲಿ ಬೀರಿಸಲ್ಪಟ್ಟಿತು. ನಗರವೆಲ್ಲವೂ ತಳಿರುತೋರಣಾದಿಗಳಿಂದ ಅಲಂಕೃತವಾಗಿ,

ಪ್ರಕಾಶಿಸತೊಡಗಿತು. ಮಂಗಳ ವಾದ್ಯಗಳೂ, ಭೂಸುರರ ವೇದಮಂತ್ರಗಳೂ ಸುಮಂಗಲೆಯರ ದಿವ್ಯಗೀತೆಗಳೂ ಕರ್ಣಾನಂದಕರವಾಗಿರಲು ಹಿಮವಾನ್ ರಾಜನು ನಾಮಕರಣ ಮಹೋತ್ಸವವನ್ನು ನಡೆಯಿಸಿ ನೆರೆದ ಬಂಧುಬಾಂಧವರಿಗೂ ಆಪ್ತೇಷ್ಟರಿಗೂ ಪರಿವಾರ ಜನಕ್ಕೂ ಮೃಷ್ಟಾನ್ನಭೋಜನಗಳನ್ನಿಟ್ಟು ತಣಿಸಿದನು. ಸುಮಂಗಲೆಯರು ಆ ದಿನ ರಾತ್ರೆ ಶಿವಾನುರೂಪೆಯಾದ ಆ ಶಿಶುವನ್ನು ರತ್ನಖಚಿತವಾದ ತೊಟ್ಟಿಲಲ್ಲಿಟ್ಟು, ಜೋಗುಳವನ್ನು ಹಾಡಿ ಪರ್ವತ ರಾಜರಾಜೇಶ್ವರನಾದ ಹಿಮಾಚಲಾಧಿಪನ ಪುತ್ರಿಯಾದ ಆ ಶಿಶುವನ್ನು **ಪಾರ್ವತಿ**' ಎಂದು ಕರೆದರು. ಮತ್ತೊಬ್ಬ ವೃದ್ಧ ಸುಮಂಗಲೆಯು ಶಿಶುವಿನ ದೇಹಚ್ಛಾಯೆಯು ಉಜ್ವಲವಾದ ಜ್ಯೋತಿಯಂತೆ ಕಾಂತಿಮಯವಾಗಿದ್ದುದರಿಂದ ಅದನ್ನು '**ಗೌರಿ**' ಎಂಬ ಹೆಸರಿನಿಂದ ಕರೆದು ಒಂದುಬಾರಿ ತೊಟ್ಟಿಲನ್ನು ತೂಗಿದಳು. ಮತ್ತೊಬ್ಬಾಕೆಯು, ಆ ದಿವ್ಯಶಿಶುವನ್ನು '**ಉಮಾ**' ಎಂದು ಸಂಬೋಧಿಸಿದಳು. ಬೇರೊಬ್ಬ ಸೌಭಾಗ್ಯವತಿಯು '**ಕಾತ್ಯಾಯನೀ**' ಎಂದು ಕರೆದು ಒಂದು ಬಾರಿ ತೊಟ್ಟಿಲನ್ನು ತೂಗಿದಳು. ಇನ್ನೊಬ್ಬಳು '**ಹೈಮವತೀ**' ಎಂದು ಕರೆದಳು. ಹೀಗೆ ಬಹು ಸಂಭ್ರಮದಿಂದ ನಾಮಕರಣ ಮಹೋತ್ಸವವನ್ನು ನೆರವೇರಿಸಿ, ಪ್ರತಾಪೀ ಹಿಮವಾನ್ ರಾಜೇಂದ್ರನು, ಶಿಶುವನ್ನು ಅತಿಶಯ ಪ್ರೇಮದಿಂದ ಕಾಪಾಡತೊಡಗಿದನು.

ಎಂದು ಆದಿಶಕ್ತಿ ಉಮಾದೇವಿಯು ಲೋಕದಲ್ಲಿ ಮನುಷ್ಯರೂಪವನ್ನೆತ್ತಿ ಉದ್ಭವಿಸಿದಳೋ ಅಂದು ಜಗತ್ತು ಮಹದಾನಂದಗೊಂಡಿತು. ತಿಳಿಗೊಳಗಳುಕ್ಕಿದುವು. ದಿಕ್ಕುಗಳು ಸುಪ್ರಸನ್ನವಾದುವು. ಗಿಡವೃಕ್ಷಗಳು ಅಕಾಲದಲ್ಲಿ ಚಿಗುರು-ಮೊಗ್ಗೆಗಳನ್ನು ಪ್ರಕಟಿಸಿ, ಲೋಕಮಾತೆಯ ಜನನದಿಂದ ತಮಗಾದ ಆನಂದವನ್ನು ವ್ಯಕ್ತಪಡಿಸಿದುವು. ಮಂದಮಾರುತನು ಪುಷ್ಪಪರಿಮಳವನ್ನು ಎಲ್ಲೆಲ್ಲೂ ಹರಡಿದನು. ಪಶುಪಕ್ಷಿಗಳೂ ತಮಗುಂಟಾದ ಸಂತೋಷವನ್ನು ವಿವಿಧ ರೀತಿಗಳಿಂದ ಪ್ರಕಟಿಸಿದುವು. ರಾತ್ರೆಯಲ್ಲಿ ಚಂದ್ರಕಾಂತಿಯು ಅತ್ಯಂತ ಮನೋಹರವಾಗಿರುವುದು. ಆ ಜಗದಂಬೆಯ ಅವತಾರದಿಂದ ಜಗತ್ತಿಗೆ ಶುಭವಾಗುವುದೆಂಬುದನ್ನು ಈ ಸೂಚನೆಗಳು ತಪ್ಪದೆ ವ್ಯಕ್ತಗೊಳಿಸುತ್ತಿದ್ದುವು.

ಮಾತಾಪಿತೃಗಳಾದ ಗಿರಿರಾಜ ಮೇನಕೆಯರು, ಆ ಶಿಶುವನ್ನು ಅತಿಶಯ ಪ್ರೇಮಾದರಗಳಿಂದ ಪೋಷಿಸುತ್ತಿದ್ದರೆಂದು ಹೇಳಬೇಕಾದುದೇನು ? ಶಿಶುವು ಶುಕ್ಲಪಕ್ಷದ ಚಂದ್ರಕಳೆಯಂತೆ ದಿನದಿನಕ್ಕೆ ಹೆಚ್ಚುಹೆಚ್ಚು ಪ್ರಕಾಶಮಾನವಾಗತೊಡಗಿತು. ಮಗುವಿನ ಅಂಬೆಗಾಲು ತಪ್ಪುಹೆಜ್ಜೆಗಳೂ, ಜೊಲ್ಲು ಸುರಿಸಿಕೊಂಡು-ಮುದ್ದುಮುದ್ದಾಗಿ ಆಡುವ ತೊದಲ್ನುಡಿಗಳೂ, ಆ ಮಾತಾಪಿತೃಗಳನ್ನು ಮಹದಾನಂದ ಶರಧಿಯಲ್ಲಿ ಮಗ್ನರನ್ನಾಗಿಮಾಡುವುವು. ಆ ಬಾಲಿಕೆಯ ವಿವಿಧ ಬಾಲಲೀಲೆಗಳನ್ನು ಕಂಡು ಆ ದಂಪತಿಗಳು ತಮ್ಮ ಸಮಾನ ಧನ್ಯರು ಮೂರುಲೋಕದಲ್ಲಿ ಯಾರೂ ಇಲ್ಲವೆಂದು ಕೊಳ್ಳುವರು.

ಕ್ರಮಕ್ರಮವಾಗಿ ಬಾಲ್ಯವಯಸ್ಸು ಕಳೆಯುತ್ತಾ ಬಂತು. ಪಾರ್ವತಿಯು ಮಾತಾಪಿತೃಗಳ ಆಜ್ಞೆಯನ್ನನುಸರಿಸಿ ವಿದ್ಯಾಗುರುಗಳನ್ನಾಶ್ರಯಿಸಿ ಸಂಗೀತ ಸಾಹಿತ್ಯಾದಿ ಕುಶಲಕಲೆಗಳನ್ನು ಅಭ್ಯಾಸಮಾಡತೊಡಗಿದಳು. ಪೂರ್ವಜನ್ಮ ಸಂಸ್ಕಾರವೋ ಎನ್ನುವಂತೆ, ಯಾವ ವಿಷಯವನ್ನಾಗಲೀ ಒಮ್ಮೆ ಕೇಳಿದಳೆಂದರೆ ಅದು ಒಡನೆಯೇ, ಆಕೆಯ ಮನೋಭಿತ್ತಿಯಲ್ಲಿ ಚಿತ್ರಿತವಾಗಿ ಹೋಗುವುದು. ಸ್ವಲ್ಪಕಾಲದಲ್ಲೇ ನಾಟಕಾಂತ ಸಾಹಿತ್ಯಭಾಗವನ್ನೂ ಅಭ್ಯಸಿಸಿ ಪಾರ್ವತೀದೇವಿಯು ತನ್ನ ವಿದ್ಯಾಪ್ರೌಢಿಮೆಯಿಂದ ಹಿಮವಂತರಾಜನಿಗೆ ಪರಮಾಶ್ಚರ್ಯವನ್ನುಂಟು ಮಾಡಿದಳು. ಸಂಗೀತವಿದ್ಯೆಯಲ್ಲಂತೂ ಆಕೆಗೆ ಸಮಾನರಾದವರು ಯಾರೂ ಇಲ್ಲವೆಂಬಷ್ಟು ಮಟ್ಟಿನ ಪಾಂಡಿತ್ಯವು ಪ್ರಾಪ್ತವಾಯಿತು. ಕೋಗಿಲೆಯನ್ನು ನಾಚಿಸುವ ಆಕೆಯ ಕಂಠಸ್ವರವೂ, ವೀಣಾ ಮತ್ತು ವೇಣು ಮುಂತಾದುವುಗಳನ್ನು ನುಡಿಸುವುದರಲ್ಲಿ ಆಕೆಗಿದ್ದ ಪ್ರೌಢಿಮೆಯೂ ಅನ್ಯಾದೃಶವಾಗಿದ್ದುವು. ಇನ್ನು ಬಾಲ್ಯತಳೆದು ಯೌವನದ ಪ್ರಾರಂಭದೆಸೆಯಲ್ಲಿದ್ದ ಆಕೆಯ ದೇಹಸೌಂದರ್ಯವನ್ನೂ, ವಾಙ್ಮಾಧುರ್ಯವನ್ನೂ, ತಾರುಣ್ಯಲಾವಣ್ಯಾದಿಗಳನ್ನೂ, ವಿನಯ ವಿಧೇಯತೆಗಳನ್ನೂ, ಆಕೆಯ ಹೃದಯ ಮಾರ್ದವವನ್ನೂ, ಭೂತದಯೆ ಪಶ್ಚಾತ್ತಾಪಾದಿಗಳನ್ನೂ ವರ್ಣಿಸಲೆಳಸುವುದು ಅಸಾಧ್ಯವು. ಲೋಕದಲ್ಲಿ ಉತ್ತಮ ವಸ್ತುಗಳೆಂಬುವು ಎಲ್ಲೆಲ್ಲಿ ಏನೇನಿರಬಹುದೋ ಅವುಗಳ ಸತ್ವಸಾರವನ್ನೂ ಏಕತ್ರ ಸಂಗ್ರಹಿಸಿ, ಸೃಷ್ಟಿಕರ್ತನು ಈ ಅಪೂರ್ವ

ವ್ಯಕ್ತಿಯನ್ನು ಸೃಷ್ಟಿಸಿರುವನೋ ಎಂಬಂತಿದ್ದಿತು. ಆಕೆಯ ವಿದ್ಯಾ ವಿನಯ ಸಂಪನ್ನತೆಗಳನ್ನು ಕಂಡು ಮಾತಾಪಿತೃಗಳು, ಆ ಕನ್ಯೆಯನ್ನು ಹೆತ್ತು ತಮ್ಮ ಕುಲಕೋಟಿಯೆಲ್ಲವೂ ಉದ್ಧಾರವಾಯಿತು ಎಂದು ಪರಮಾನಂದಗೊಂಡರು.



## 'ಮದನರಾಜ.'

ಇತ್ತ ಗಿರಿರಾಜನ ಅರಮನೆಯಲ್ಲಿ ಪಾರ್ವತೀದೇವಿಯು ದಿನದಿನಕ್ಕೆ ಅಭಿವೃದ್ಧಿಯಾಗುತ್ತಿದ್ದಳು. ಅತ್ತ ಸಾಂಬಶಿವನು ಧ್ಯಾನಾರೂಢನಾಗಿ ಬಹಿರ್ಲೋಕದ ವಿಚಾರವೇ ಇಲ್ಲದೆ ಅಂತರ್ಮುಖಿಯಾಗಿ ತಪಸ್ಸು ಮಾಡುತ್ತಾ ಇದ್ದುಬಿಟ್ಟನು. ಪಾರ್ವತಿಗಾದರೋ ಬಾಲ್ಯಾವಸ್ಥೆಯು ಕಳೆದು, ಯೌವನಾವಸ್ಥೆಯ ಚಿಹ್ನೆಗಳು ದೇಹದ ಅಂಗಾಂಗಗಳಲ್ಲಿ ಸ್ಪಷ್ಟವಾಗಿ ಕಾಣುತ್ತಲಿದ್ದುವು. ಗಿರಿರಾಜನು, ತ್ರಿಲೋಕಸುಂದರಿಯಾದ ಆ ಅಪೂರ್ವ ಕನ್ನಿಕೆಯನ್ನು ವಿವಾಹವಾಗಲು ಯಾವ ಪುರುಷಶ್ರೇಷ್ಠನನ್ನು ವಿಧಾತನು ಎಲ್ಲಿ ಸೃಷ್ಟಿಸಿರುವನೋ ಎಂದು ಚಿಂತಿಸಲಾರಂಭಿಸಿದನು. ಪಾರ್ವತಿಯು, ಎರಳೆಯಂತೆ ವಿಶಾಲವಾದ ತನ್ನ ನೇತ್ರಗಳಿಂದ ತನ್ನನ್ನು ದೃಷ್ಟಿಸಿ ಯಾವ ಕಾರಣಕ್ಕಾಗಿಯಾದರೂ ಮಾತನಾಡಿಸಿದಾಗಲೆಲ್ಲ, ಹಿಮವಂತನಿಗೆ--ಅಕ್ಕಟಾ ತಾನು ಆ ಕನ್ಯೆಗೆ ಯೋಗ್ಯವರನಿಗಾಗಿ ಇನ್ನೂ ಪ್ರಯತ್ನಿಸಿಲ್ಲವಲ್ಲಾ, ತನ್ನಲ್ಲಿ ಕರ್ತವ್ಯಲೋಪವುಂಟಾಯಿತಲ್ಲಾ ಎಂದು ಮನಸ್ಸಿನಲ್ಲೇ ಕೊರೆದಂತಾಗುವುದು. ಆಕೆಯೊಂದಿಗೆ ಮುಖಕೊಟ್ಟು ಮಾತನಾಡುವುದು ಸಹ ಆತನಿಂದ ಸಾಧ್ಯವಾಗುತ್ತಿರಲಿಲ್ಲ. ಏಕಾಂತವಾಗಿಯೇ ಗಂಡಹೆಂಡಿರಿಬ್ಬರೂ ಚಿಂತಾಕ್ರಾಂತರಾಗಿ ತಮ್ಮ ಚಿಂತಾವಿಚಾರವ, ತಮ್ಮ ಮಗಳಿಗೆ ಗೋಚರವಾಗದಂತೆ, ಜಾಗರೂಕರಾಗಿ ಮುಂದೆ ಏನು ಮಾಡಬೇಕು, ಎಲ್ಲಿ ಹುಡುಕಬೇಕು-ಎಂಬ ವಿಚಾರಗಳು ಮನಸ್ಸಿಗೆ ಸ್ಫುಟವಾಗಿ ಹೊಳೆಯದೆ ಸ್ತಬ್ಧತೆಯಿಂದ ಹಾಗೇ ಕೆಲವು ದಿನಗಳನ್ನು ಕಳೆದರು.

ಹೀಗಿರುವಲ್ಲಿ ಒಂದುದಿನ ದೇವರ್ಷಿಗಳಾದ ನಾರದರು ಸ್ವರ್ಗ ಲೋಕದಿಂದ ಹೊರಟು ಗಿರಿರಾಜನ ಗೃಹವನ್ನು ಕುರಿತು ಪ್ರಯಾಣಮಾಡಿದರು. ಬ್ರಹ್ಮಮಾನಸಪುತ್ರರೂ ತ್ರಿಲೋಕಸಂಚಾರಿಗಳೂ ಆದ ಅವರಿಗೆ, ದೇವತೆಗಳಿಗೂ ಮೂರು ಲೋಕಗಳಿಗೂ ತಾರಕಾಸುರನಿಂದ ಪ್ರಾಪ್ತವಾಗಿದ್ದ ಮಹತ್ತಾದ ಆತಂಕವೂ, ಅದಕ್ಕೆ ಪರಿಹಾರವಾಗಿ ಬ್ರಹ್ಮದೇವನು ಹೇಳಿದ್ದ ಉಪಾಯವೂ ತಿಳಿದಿದ್ದುವು. ಅಲ್ಲದೆ ಇತ್ತ ಹಿಮಗಿರಿಯಲ್ಲಿ ಅಂತರ್ಮುಖಿಯಾಗಿ ತಪಸ್ಸುಮಾಡುತ್ತಾ ಕುಳಿತಿದ್ದ ಪರಮೇಶ್ವರನ ವಿಚಾರವೂ, ಮತ್ತು ಗಿರಿರಾಜನ ಗೃಹದಲ್ಲಿ ದಾಕ್ಷಾಯಣೀ ದೇವಿಯೇ ಗೌರಿಯೆಂಬ ಹೆಸರಿನಿಂದ ಹುಟ್ಟಿ ಅಪೂರ್ವ ರೂಪಲಾವಣ್ಯಾದಿಗಳಿಂದ ತ್ರಿಲೋಕಸುಂದರಿಯೆನ್ನಿಸಿ ತ[illegible]ಗೊಳ್ಳುತ್ತಿದ್ದ ಸಂಗತಿಯೂ ಅವರಿಗೇ ಪರಿಚಯವಿದ್ದುವು. ಆ ಸಂದರ್ಭದಲ್ಲಿ ಪಾರ್ವತೀದೇವಿಯನ್ನು ಪರಶಿವನ ಅರ್ಧಾಂಗಿಯನ್ನಾಗಿಸುವ ಉಪಾಯ ಒಂದು ನೆರವೇರಿದರೆ, ಮುಂದೆ ದೇವಕಾರ್ಯವು ಕೈಗೂಡಿ ಸುಭಿಕ್ಷವಾಗುವುದೆಂದು, ಅವರು ಯೋಚಿಸಿದರು. ಹೀಗೆ [illegible] ನಾರದರು, ಈ [illegible]ದಲ್ಲಿ ಗಿರಿರಾಜನು ಏನೆಂದು ಯೋಚಿಸುವನೋ ತಿಳಿಯಬೇಕೆಂದು, ಆತನ ರಾಜಧಾನಿಯನ್ನು ಸೇರಿ, ಅರಮನೆಯ ಆಸ್ಥಾನ ಮಂಟಪದಲ್ಲಿ ಪತ್ನಿಯಾದ ಮೇನಕೆಯೊಡನೆ, ಅದೇ ಚಿಂತೆಯಲ್ಲೀ ಮಗ್ನನಾಗಿ ಕುಳಿತಿದ್ದ ಆತನನ್ನು ಕಂಡರು.

ತನ್ನ ಅರಮನೆಗೆ ಅಕಸ್ಮಾತ್ತಾಗಿ ದೇವರ್ಷಿ ಶ್ರೇಷ್ಠರಾದ ನಾರದ ಮಹಾಮುನಿಗಳು ದಯಮಾಡಿಸಿರುವುದನ್ನು ತಿಳಿದು ಗಿರಿರಾಜನು, ಪರಮ ಸಂಭ್ರಮದಿಂದ ತನ್ನ ಆಸನದಿಂದ ಥಿಗ್ಗನೆದ್ದು ಮುಂದೆ ಬಂದು ಸಾಷ್ಟಾಂಗ ನಮಸ್ಕಾರಮಾಡಿ, ತರುವಾಯ ಹಸ್ತಲಾಘವವನ್ನಿತ್ತು ಕರೆದೊಯ್ದು ತನ್ನ ಸಿಂಹಾಸನದ ಮೇಲೆಯೇ ಕೂರಿಸಿ, ಪತ್ನಿಯೊಂದಿಗೆ ಆ ಮಹನೀಯರನ್ನು ಅರ್ಘ್ಯಪಾದ್ಯಾದಿ ಷೋಡಶೋಪಚಾರಗಳಿಂದ ಸತ್ಕರಿಸಿದನು. ನಾರದರು, ಗಿರಿರಾಜನ ವಿನಯ ವಿಧೇಯತೆಗಳನ್ನು ಕಂಡು ಪರಮ ಸಂತೋಷಭರಿತರಾದರು. ಹಾಗೆ ಸತ್ಕರಿಸಲ್ಪಟ್ಟು ಪ್ರಸನ್ನವದನರಾಗಿ ಕುಳಿತಿದ್ದಾಗ, ನಾರದರು ಆತನ ಕ್ಷೇಮಲಾಭಾದಿಗಳನ್ನು ವಿಚಾರಿಸಿ, ಅಲ್ಲೀ-ತಾಯಿತಂದೆ

ಗಳ ಸಮೀಪದಲ್ಲೇ ನಿಂತಿದ್ದ ಪಾರ್ವತಿಯನ್ನು ಕಂಡು-'ಹಿಮಾಚಲಾಧಿಪಾ, ನಿನಗೆ ಗಂಗೆಗೌರಿಯರೆಂಬ ಇಬ್ಬರು ಹೆಣ್ಣುಮಕ್ಕಳಿರುವರಲ್ಲವೆ? ಅವರಲ್ಲಿ ಒಬ್ಬಳನ್ನಂತೂ ಸಾಗರನಿಗೆ ಕೊಟ್ಟು ಲಗ್ನಮಾಡಿದೆ. ಮತ್ತೊಬ್ಬಳಿಗೆ ಯಾವ ವರನನ್ನು ನೋಡಿದ್ದೀಯೆ! ಕನ್ಯಾಪಿತೃತ್ವವೆಂಬುದು ಸಾಮಾನ್ಯ ಉತ್ತರವಾದಿತ್ವದ ಕಾರ್ಯವಲ್ಲ. ನೂರಾರು ವರ್ಷಕಾಲ ಒಮುಕಿ ಬಾಳಿ ಸಂತಾನಗಳನ್ನು ಪಡೆದು ಒಂದು ವಂಶವನ್ನೇ ಸೃಷ್ಟಿಸತಕ್ಕ ಈ ವಿವಾಹ ಸಂಬಂಧವನ್ನು ಮಕ್ಕಳಾಟಿಕೆಯಂತೆ ವಿನೋದ ಕಾರ್ಯವೆಂದು ಎಂದಿಗೂ ಆಚರಿಸಲಾಗದು. ಈ ಕನ್ಯೆಯೂ ವಿವಾಹಯೋಗ್ಯ ವಯಸ್ಕಳಾಗಿದ್ದಾಳೆ. ಎಲ್ಲಾದರೂ ವರಾನ್ವೇಷಣ ಕಾರ್ಯವನ್ನು ಕುರಿತು ಪ್ರಯತ್ನಿಸಿದ್ದೀಯಾ?" ಎಂದು ಕೇಳಿದರು.

ನಾರದ ಮಹರ್ಷಿಗಳ ಮಾತನ್ನು ಕೇಳಿ ಹಿಮವಂತನು, ಪುನಃ ಚಿಂತಾಕ್ರಾಂತನಾದನು.—'ಮೌನೀಂದ್ರಾ, ಹಿರಿಯ ಮಗಳಾದ ಗಂಗೆಯ ವಿಷಯದಲ್ಲಿ ನನಗಿನ್ನು ಯೋಚನೆಯಿಲ್ಲ. ಅವಳು, ತ್ರಿಲೋಕ ಪಾವನೆಯೆನ್ನಿಸಿ ತನ್ನ ಸಚ್ಚರಿತ್ರೆಯಿಂದ ಬ್ರಹ್ಮೇಂದ್ರಾದಿಗಳ ಪ್ರಶಂಸೆಗೂ ಪಾತ್ರಳಾಗಿ ರತ್ನಾಕರನ ಗೃಹವನ್ನು ಸೇರಿ, ಅಲ್ಲಿ ಸೌಭಾಗ್ಯವತಿಯಾಗಿ ವಿರಾಜಿಸುತ್ತಿರುವಳು. ಇನ್ನು ನನಗೆ ಅವಳ ಯೋಚನೆಯಿಲ್ಲ. ಈಗತಾನೇ ತಾವು ಅಪ್ಪಣೆ ಕೊಡಿಸಿದಂತೆ, ಈ ಎರಡನೆಯ ಕುಮಾರಿಯಾದ ಗೌರಿದೇವಿಯ ಯೋಚನೆಯೇ ನನಗೆ ವಿಶೇಷವಾಗಿದೆ. ಈ ಕನ್ಯಾಶಿರೋಮಣಿಗೆ ಯೋಗ್ಯ ವರನನ್ನು ವಿಧಾತನು ಎಲ್ಲಿ ಸೃಷ್ಟಿಸಿರುವನೋ ತಿಳಿಯದು. ತ್ರಿಲೋಕ ಸಂಚಾರಿಗಳೂ, ತ್ರಿಕಾಲಜ್ಞರೂ ಆದ ತಮ್ಮ ದೃಷ್ಟಿಗೆ ಯಾವುದೂ ಅಗೋಚರವಾಗಿರಲಾರದಲ್ಲವೆ? ದೇವರ್ಷಿವರ್ಯರೇ, ತಾವು ದಯವಿಟ್ಟು ಈ ವಿಷಯದಲ್ಲಿ ನನ್ನ ಮನಸ್ಸಿಗೆ ಅಂಟಿರುವ ವ್ಯಥೆಯನ್ನು ಪರಿಹರಿಸಿ, ಧನ್ಯನನ್ನಾಗಿಸಬೇಕು' ಎಂದು ಪ್ರಾರ್ಥಿಸಿದನು. ಪುತ್ರಿಯ ಶ್ರೇಯಶ್ಚಿಂತನೆಯಿಂದ ಹಾಗೆ ಅಂಗಲಾಚಿಕೊಳ್ಳುತ್ತಿದ್ದ ಆ ವೃದ್ಧರಾಜನನ್ನು ಕಂಡು ನಾರದರು 'ಕನಿಕರಗೊಂಡು-'ನಗರಾಜಾ, ಕುಲಾಚಲ ಸಾರ್ವಭೌಮನಾದ ನೀನು ಹೀಗೆ ಅಧೀರನಾಗಬಾರದು. ನಿನ್ನೀ ಮಗಳು, ಸಮಸ್ತ ವಿಧ ಶುಭಲಕ್ಷಣಗಳಿಂದಲೂ ಕೂಡಿ, ಸ್ವರ್ಗಮರ್ತ್ಯ ಪಾತಾಳಲೋಕಗಳಲ್ಲಿರುವ

ಕನ್ಯಾಜಗತ್ತಿಗೆಲ್ಲಾ ಶಿರೋಮಣಿ ಪ್ರಾಯಳಾಗಿರುವಳು. ಇಂತಹ ಲೋಕೋತ್ತರ ಕನ್ಯಾರತ್ನದ ಪಾಣಿಗ್ರಹಣಮಾಡುವ ಪುರುಷನಾದರೂ ಲೋಕೋತ್ತರ ವ್ಯಕ್ತಿಯೇ ಆಗಿರಬೇಕು. ಈ ವಿಷಯದಲ್ಲಿ ಸಂದೇಹಗೊಳ್ಳಬೇಡ. ಇಂತಹ ಪುರುಷನೇ ಈಕೆಗೆ ಪತಿಯಾಗುವನೆಂದು ನಿಶ್ಚಯಿಸಿ ಹೇಳಲಾರೆನು. ಆದರೆ, ತ್ರಿಲೋಕ ಪೂಜ್ಯನಾದ ಒಬ್ಬಾನೊಬ್ಬ ಮಹಾಮಹಿಮನನ್ನು ಈಕೆಯು ಸೇರತಕ್ಕವಳೆಂಬುದನ್ನು ಮಾತ್ರ ಜ್ಞಾನದೃಷ್ಟಿಯಿಂದ ಅರಿತೆನು. ಈಕೆಯಾದರೇನು ಸಾಮಾನ್ಯಳಲ್ಲ.—ಹಿಮಗಿರೀಂದ್ರಾ, ರಹಸ್ಯವಾದ ಈ ಮಾತನ್ನು ಕೇಳು. ಒಂದಾನೊಂದು ದೇವಕಾರ್ಯ ಸಾಧನೆಗಾಗಿ ಆದಿಶಕ್ತಿಯೇ ಕನ್ಯಾಸ್ವರೂಪದಿಂದ ನಿನ್ನ ಮನೆಯಲ್ಲಿ ಉದ್ಭವಿಸಿದ್ದಾಳೆಂದು ತಿಳಿ. ಜಗದಂಬೆಯು ಅವತಾರ ಸ್ವರೂಪಳಾದ ಈ ಕನ್ಯೆಯನ್ನು ಜಗದ ಸಾಮಾನ್ಯ ನಾರಿಯರಂತೆ ತಿಳಿಯಬೇಡ' ಎಂದು ನುಡಿದರು.

ನಾರದರ ವಾಕ್ಯಗಳನ್ನು ಕೇಳಿಕೇಳಿದಂತೆ ಹಿಮಗಿರೀಶನಿಗೆ ದೇಹದಲ್ಲಿ ಪುಳಕಗಳು ಉತ್ಪನ್ನವಾದವು. ಕಣ್ಣುಗಳಲ್ಲಿ ಆನಂದಬಾಷ್ಪವು ಸುರಿಯಿತು. ನಿನ್ನ ಮಗಳು-ಜಗದಂಬೆ, ಆದಿಶಕ್ತಿ-ಯೆಂಬ ಮಾತುಗಳನ್ನು ಕೇಳಿದಾಗಲಂತೂ ಆತನ ಮೈಯೆಲ್ಲವೂ ರೋಮಾಂಚವಾಯಿತು. ಆನಂದಾಧಿಕ್ಯದಿಂದ ಮಾತನಾಡಲು ಬಾಯಿಬಾರದೆ ಗಂಟಲು ಕಟ್ಟುತ್ತಿದ್ದರೂ ತಾನೇ ಸ್ವಲ್ಪಮಟ್ಟಿಗೆ ಸಮಾಧಾನಗೊಂಡು-'ಪೂಜ್ಯಪಾದರೇ, ತಮ್ಮ ಆಜ್ಞೆಯು ನನಗೆ ಶಿರಸಾ ಮಾನ್ಯವು. ಶೈಶವಾವಸ್ಥೆಯಿಂದಲೂ ಈ ಕನ್ನಿಕೆಯನ್ನು ವಿಶೇಷ ಜಾಗರೂಕತೆಯಿಂದಲೇ ನೋಡಿಕೊಂಡು ಬರುತ್ತಿದ್ದೇನೆ. ತಾವು ಹೇಳಿದಂತೆ, ಅಂತಹ ಲೋಕೋತ್ತರ ಪುರುಷನು ನಮಗೆ ಲಭ್ಯವಾಗುವ ಮಾರ್ಗವಾವುದು, ಅದಕ್ಕಾಗಿ ನನ್ನ ಕರ್ತವ್ಯವೇನು ? ದಯವಿಟ್ಟು ಅಪ್ಪಣೆಕೊಡಿಸಬೇಕು' ಎಂದು ಪ್ರಾರ್ಥಿಸಿದನು. ಆದರೆ ನಾರದರು ಅಷ್ಟು ಸುಲಭರಲ್ಲ.—'ಗಿರಿರಾಜಾ ಆತುರಗೊಳ್ಳಬೇಡ. ಆ ಪುರುಷನು ಇಂಥವನೇ ಎಂಬ ಸಂಗತಿಯು ನನಗೂ ತಿಳಿಯದು. ಆದರೆ ನಿನಗೊಂದು ದೇವತಾ ರಹಸ್ಯವನ್ನು ಹೇಳುವೆನು ಕೇಳು. ಈ ನಿನ್ನ ಹಿಮಾಚಲದ ತಪ್ಪಲು ಪ್ರದೇಶದಲ್ಲೇ ಸಾಕ್ಷಾತ್ಪರಶಿವನು ತಪೋಮಗ್ನನಾಗಿ ಕುಳಿತಿರುವನು. ಪ್ರತಿದಿನವೂ ಸಮಿತ್ಕುಶಗಳು ದೂರ್ವಾದಿ ಪೂಜಾಸಾಮಗ್ರಿ

ಗಳು ಪುಷ್ಪಫಲಾದಿಗಳು ಮುಂತಾದ ತಪಸ್ವಿಗಳಿಗೆ ಯೋಗ್ಯವಾದ ವಸ್ತುಗಳನ್ನು ತಂದಿತ್ತು, ಆ ಮಹಾನುಭಾವನ ಸೇವೆಮಾಡಿಕೊಂಡಿರುವಂತೆ ನಿನ್ನಮಗಳಿಗೆ ನಿಯಮಿಸು. ಮಹಾದೇವನ ಕೃಪಾಕಟಾಕ್ಷವು ಆಕೆಯ ಮೇಲೆ ಪ್ರಸರಿಸುವಂತಾದರೆ ಮುಂದೆ ಎಲ್ಲಾ ಕಾರ್ಯಗಳೂ ಸುಲಲಿತವಾಗಿ ನೆರವೇರುವುವು. ನಿಮಗೆ ಶುಭವಾಗಲಿ. ನಾನಿನ್ನು ಹೋಗಿಬರುವೆವು' ಎಂದು ನುಡಿದು ನಾರದ ಮಹರ್ಷಿಗಳು ಹರಿಭಜನತತ್ಪರರಾಗಿ ಆಕಾಶಮಾರ್ಗದಲ್ಲಿ ಪ್ರಯಾಣಮಾಡಿದರು.

ದೇವರ್ಷಿ ನಾರದರು ಹೊರಟುಹೋದ ತರುವಾಯ, ಗಿರಿರಾಜ-ಮೇನಕೆಯರು, ಗೌರಿಗಾಗಿ ಇಂತಹ ಪುರುಷನೇ ತಮ್ಮ ಬಾಲಿಕೆಗೆ ರಮಣನಾಗುವನೆಂಬ ಸ್ಪಷ್ಟೋಕ್ತಿಯು ತಿಳಿಯದಿದ್ದರೂ, ನಾರದರು ಅವನು 'ಲೋಕೋತ್ತರ ಪುರುಷನು' ಎಂದು ಹೇಳಿದಮೇಲೆ ಇನ್ನು ಸಂಶಯವೇಲೆ, ನಿಮಿತ್ತವೇನಿದೆ? ನಿಶ್ಚಿಂತರಾಗಿರೋಣ. ಭಗವಚ್ಚಿತ್ತಕ್ಕೆ ಬಂದಂತಾಗಲಿ. ಅವರು ಹೇಳಿರುವಂತೆ, ಪಾರ್ವತಿಯು ಮಹಾದೇವನ [illegible] ಸೇವೆಮಾಡಿಕೊಂಡಿರುವಂತೆ ನಿಯಮಿಸಬೇಕೆಂದು ಆ ಮುನಿಪುಂಗವರು ಎಚ್ಚರಿಸಿರುವರಲ್ಲವೆ! ಅದೊಂದು ಕಾರ್ಯವನ್ನು ಮಾಡಿಬಿಡೋಣ' ಎಂದುಕೊಂಡರು. ಮತ್ತು ತಮ್ಮ ಪ್ರಿಯಪುತ್ರಿ ಪಾರ್ವತಿಯನ್ನು ಕರೆದು,–'ಮಗೂ ಗೌರಿದೇವಿ, ಈಗ ತಾನೆ ಬಂದಿದ್ದ ನಾರದ ಮಹರ್ಷಿಗಳು, ನಮ್ಮ ಪರ್ವತದ ತಪ್ಪಲು ಪ್ರದೇಶದಲ್ಲಿ ದೇವದೇವನಾದ ಶಂಕರನು ತಪೋನಿರತನಾಗಿ ಕುಳಿತಿರುವನೆಂದು ತಿಳಿಸಿಹೋದರು. ನಮ್ಮ ಪ್ರಾಂತ್ಯಕ್ಕೆ ಆ ಪಾವನಮೂರ್ತಿಯು ಆಗಮಿಸಿದ ವೃತ್ತಾಂತವನ್ನು ತಿಳಿಯದ ನಮ್ಮ ಜಾಗರೂಕತೆಗಾಗಿ ಎಷ್ಟು ಚಿಂತಿಸಿದರೂ ಸ್ವಲ್ಪವೇ ಇದೆ. ಆ ಸಂಗತಿಯು ತಿಳಿದ ತರುವಾಯ ಇನ್ನು ಅದನ್ನು ಮಾನಸಿಕ ಮಾಡುವುದು ಉಚಿತವಲ್ಲ. ಯೋಗ್ಯ ಪೂಜಾಸಾಮಗ್ರಿಗಳನ್ನು ಕೊಂಡುಹೋಗಿ ಆತನನ್ನು ಸೇವಿಸಿ ಬರತಕ್ಕುದು ಕರ್ತವ್ಯವು' ಎಂದು ನುಡಿದು ಎಲ್ಲರೊಂದಿಗೆ, ಪರಶಿವನು ತಪೋಮಗ್ನನಾಗಿ ಕುಳಿತಿದ್ದ ಪ್ರದೇಶಕ್ಕೆ ಬಂದನು.

ಅಲ್ಲಿ ಯೋಗಾಸನಾಸೀನನಾಗಿ, ಗಜಚರ್ಮಾಂಬರಧಾರಿಯಾಗಿ, ಭಸ್ಮೋದ್ಧೂಳಿತ ಗಾತ್ರನಾಗಿ, ಚಂದ್ರಚೂಡನಾಗಿ, ಭೋಗಿಭೂಷಣನಾಗಿ

ಕುಳಿತಿದ್ದ ತ್ರಿಲೋಚನನಾಗ ಸದಾಶಿವನನ್ನು ಕಂಡು, ಗಿರಿರಾಜನು ಪಾರ್ವತಿಯೊಡನೆ ಪೊಡಮಟ್ಟು, ಆ ತೇಜೋಮಯ ಮೂರ್ತಿಯನ್ನು ಭಕ್ತಿಭಾವದಿಂದ ಸೇವಿಸಿ, ಪಾರ್ವತಿಯನ್ನು ಕುರಿತು-'ಮಗೂ ನಿನ್ನ ಮೇಲೆ ದಿನವೂ ಸಮಿತ್ತು ಕುಶಾದಿಗಳನ್ನೂ ಅರ್ಘ್ಯೋದಕಾದಿಗಳನ್ನೂ ಫಲಪುಷ್ಪಾದಿಗಳನ್ನೂ ತಂದಿತ್ತು, ಪರಮೇಶ್ವರನನ್ನು ಸೇವಿಸುತ್ತಿರು. ಮಹಾನುಭಾವನಾದ ಆತನ ಅನುಗ್ರಹದಿಂದ ನಿನಗೆ ತಪ್ಪದೆ ಕಲ್ಯಾಣವಾಗುವುದು' ಎಂದು ನುಡಿದನು. ಪಾರ್ವತಿಯೂ, ಅಂದು ಪರಶಿವನ ದರ್ಶನವಾದ ಒಡನೆಯೇ ಪೂರ್ವಜನ್ಮದ ಸಂಸ್ಕಾರವು ಸೇರಿಬಂದಿತೋ ಎಂಬಂತೆ, ಅದು ಮೊದಲು ಆ ಸ್ಥಳವನ್ನು ಬಿಟ್ಟುಹೋಗಲು ಇಚ್ಛೆಯೇ ಉಂಟಾಗದೆ, ಹಗಲು ರಾತ್ರಿಗಳೆನ್ನದೆ ನಿದ್ರಾಹಾರಾದಿಗಳನ್ನು ಅಪೇಕ್ಷಿಸದೆ, ಸದಾ ಆ ಅಪೂರ್ವ ತಪಸ್ವಿಯ ಸೇವೆಯಲ್ಲಿ ನಿರತಳಾಗಿ ಅಲ್ಲೇ ನಿಂತುಬಿಟ್ಟಳು. ಆತನು ಬಹಿರ್ಮುಖನಾದಾಗ್ಗೆ, ಪಾದಪ್ರಕ್ಷಾಲನಾದಿಗಳನ್ನು ಮಾಡಿ, ಪುಷ್ಪಾದಿಗಳಿಂದ ಅರ್ಚಿಸಿ, ಕಂದಮೂಲ ಫಲಾದಿಗಳನ್ನಿತ್ತು ಉಪಚರಿಸುವಳು. ಸಮಿತ್ತುಗಳಿಂದ ಅಗ್ನಿಯನ್ನು ರಕ್ಷಿಸಿಟ್ಟು ಚಳಿಯುಂಟಾಗದಂತೆ ಉಷ್ಣವನ್ನು ಕಲ್ಪಿಸುವಳು. ತಪೋಮಗ್ನನಾಗಿ ಅಂತರ್ಮುಖನಾಗಿ ಕುಳಿತಾಗ್ಗೆ ಆತನಿಗೆ ಗಾಳಿಯನ್ನು ಬೀಸಿ ತಾಪಶಾಂತಿಯನ್ನುಂಟು ಮಾಡುವಳು. ಅಲ್ಲದೆ, ಆ ಆಶ್ರಮ ಪ್ರಾಂತ್ಯವನ್ನು ಗುಡಿಸಿ ಕಶ್ಮಲವನ್ನು ದೂರಕ್ಕೆ ಸಾಗಿಸಿ ಆ ಸ್ಥಳವನ್ನೆಲ್ಲಾ ನೀರು ಚಿಮುಕಿಸಿ ತಂಪಾಗಿರಿಸುವಳು. ಈಶ್ವರನು ಆಗಾಗ ಬಹಿರ್ಮುಖನಾದಾಗ ಅನಪೇಕ್ಷಿತವಾಗಿ ಈ ಬಗೆಯಿಂದ ತನ್ನನ್ನು ಸೇವಿಸುತ್ತಿರುವ ಈ ಯುವತಿ ಯಾರೆಂದುಕೊಳ್ಳುವನಾದರೂ, ಏಕಾಗ್ರಚಿತ್ತದಿಂದ ಆತ್ಮಚಿಂತಾಪರನಾದ ಆತನಿಗೆ ಆಕೆಯ ವಿಷಯದಲ್ಲಿ ಹೆಚ್ಚಾಗಿ ಯೋಚಿಸಿ ವಿಚಾರ ನಡೆಯಿಸಲು ಇಚ್ಛೆಯುಂಟಾಗಲಿಲ್ಲ. ಪಾರ್ವತಿಯು ದಿನದಿನವೂ ಬೇಸರವಿಲ್ಲದೆ ಸೇವೆಮಾಡುತ್ತಲೇ ಇದ್ದಳು. ಪರಮೇಶ್ವರನು ಯಾವ ವಿಚಾರವೂ ಇಲ್ಲದೆ, ಎಂದಿನಂತೆ ತನ್ನ ಮಟ್ಟಿಗೆ ತಾನು ತಪೋನಿರತನಾಗಿಯೇ ಇದ್ದುಬಿಟ್ಟನು.

ಹೀಗೆ ಅನೇಕ ದಿನಗಳು ಕಳೆದುಹೋಗುವುವು. ನವಯೌವನವತಿಯಾದ ಗೌರೀದೇವಿಯು ಸಮೀಪದಲ್ಲಿದ್ದು, ಪುಕ್ಕದಾಡಿ, ಪಾದಪ್ರಕ್ಷಾಳ

ನಾದಿ ಕಾರಣಗಳಿಂದ ದೇಹವನ್ನು ಸ್ಪರ್ಶಿಸಿ, ಮೃದುಮಧುರವಾದ ತನ್ನ ವಚನಗಳಿಂದ ಚಿತ್ತಹರಣಮಾಡಿ ಪರಶಿವನ ಮನಸ್ಸಿನಲ್ಲಿ ವಿಷಯಾಭಿಲಾಷೆಯನ್ನು ಉತ್ಪನ್ನಮಾಡಬಹುದು; ವಿವಾಹಾಭಿಲಾಷೆಯು ಹಾಗೆ ಉತ್ಪನ್ನವಾದೊಡನೆಯೇ ಎದುರಿಗೇ ಇರುತ್ತಿದ್ದ ನವಯೌವನವತಿಯೂ ಸೌಂದರ್ಯಾಧಿದೇವತೆಯೂ ಆದ ಪಾರ್ವತಿಯನ್ನು ಆತನು ವರಿಸಬಹುದು-ಎಂದು ಮುಂತಾಗಿ ಎಣಿಸಿ ನಾರದರ ಮೂಲಕ ಪರ್ವತರಾಜನಿಗೆ ಹೇಳಿಸಿ, ಆಕೆಯನ್ನು ಆ ದೇವದೇವನ ಬಳಿ ಸೇವೆಗೆಂದು ನಿಲ್ಲಿಸಲು ಪ್ರಯತ್ನಿಸಿದ ದೇವತೆಗಳ ಈ ಉದ್ದೇಶವು ಪ್ರಯೋಜಕವಾಗಲಿಲ್ಲ. ಜಿತೇಂದ್ರಿಯ ಸಾರ್ವಭೌಮನಾದ ಆತನ ಚಿತ್ತವು ಚಲನೆಹೊಂದಲಿಲ್ಲ. ಪಾರ್ವತಿಯು ಸಮೀಪದಲ್ಲೇ ಇದ್ದಾಗಲೂ ಆಕೆಯ ಕಡೆಗೆ ದೃಷ್ಟಿಹೋಗಲಿಲ್ಲ. ಒಂದು ವೇಳೆ ಆಕೆಯನ್ನು ಒಂದೆರಡು ಬಾರಿ ನೋಡಿದ್ದಿರಬಹುದಾದರೂ ಆ ನೋಟದಲ್ಲಿ ವಿಷಯಾಭಿಲಾಷೆಯು ಪ್ರವೇಶಗೊಂಡಿರಲಿಲ್ಲ. ಪರಶಿವನು ಎಂದಿನಂತೆ ನಿರ್ಲಿಪ್ತನಾಗಿಯೇ ಇದ್ದುಬಿಟ್ಟನು. ಪಾರ್ವತಿಯಾದರೋ ಮನಸ್ಸಿನಲ್ಲೆ ಆತನ [illegible] ಆಸ್ವಾದಿಸುತ್ತಲೆ, [illegible], ಮತ್ತೊಂದನ್ನು ಬಯಸದೆ, ಸದಾ ಸೇವಾಸಕ್ತಳಾಗಿ ಇದ್ದುಬಿಟ್ಟಳು. ಹೀಗೆ ಬಹುಕಾಲ ಕಳೆದುಹೋಯಿತು.

ಅತ್ತ ತಾರಕಾಸುರನ ಬಾಧೆಯಿಂದ ಮೂರುಲೋಕವೂ ತಲ್ಲಣಿಸಿ ಹೋಯಿತು. ದೇವತೆಗಳು ಅವನೊಂದಿಗೆ ಕಾದಾಡಿ ಜರ್ಝರಿತರಾಗಿ ಹೋದರು. ಇತ್ತ ಪರಶಿವನ ಜಿತೇಂದ್ರಿಯತ್ವವು ಬಲಗೊಳ್ಳುತ್ತಿದ್ದಂತೆಲ್ಲ, ಅತ್ತ ಆ ನೀಚನು, ತನ್ನನ್ನು ಎದುರಿಸುವ ಧೀರನಾವನು ಈ ಲೋಕದಲ್ಲಿರುವನು ಎಂದು ವಿಜೃಂಭಿಸುತ್ತಾ ಇಂದ್ರಾದಿಗಳಿಗೂ ಕೂಡ ದುಸ್ಸಾಧ್ಯನಾಗಿ ಲೋಕಭೀಕರನಾಗಿ ಪರಿಣಮಿಸಿದನು. ಅಷ್ಟದಿಕ್ಪಾಲಕರೂ, ಅವನ ಹಾವಳಿಯಿಂದ ಲೋಕವನ್ನು ಕಾಪಾಡುವ ಉಪಾಯ ತೋರದವರಾಗಿ ಚಿಂತಿಸತೊಡಗಿದರು. ಮೂರುಲೋಕವೂ ಅನಾಯಕವಾದಂತಾಯಿತು. ಎಲ್ಲೆಲ್ಲಿಯೂ ಹಾಹಾಕಾರವು ಮಿತಿಮೀರಿತು. ಆಗ ದೇವರಾಜನು ಉಪಾಯ ತೋರದವನಾಗಿ, ದೇವಗುರುಗಳಾದ ಬೃಹಸ್ಪತ್ಯಾಚಾರ್ಯರನ್ನು ಸುಧರ್ಮಸಭೆಗೆ ಬರಮಾಡಿಕೊಂಡು, ಅವರನ್ನು ಕುರಿತು,-ಪರಮೇಶ್ವರನಲ್ಲಿ ಚಿತ್ತ

ಚಾಂಚಲ್ಯವನ್ನುಂಟುಮಾಡಿ ಆತನ ಮನಸ್ಸಿನಲ್ಲಿ ಕಾಮೇಚ್ಛೆಯನ್ನು ಹುಟ್ಟಿಸಲು ಮಾರ್ಗವೇನು-ಎಂದು ಪ್ರಶ್ನಿಸಿದನು. ಬೃಹಸ್ಪತ್ಯಾಚಾರ್ಯರು,-'ದೇವರಾಜಾ, ಭಯಪಡಬೇಡ. ಸದ್ಯಃ ಪರ್ವತ ರಾಜಕುವರಿಯಂತೂ, ಅಲ್ಲಿ ಪರಶಿವನ ಸನ್ನಿಧಿಯಲ್ಲೇ ವಾಸಿಸುತ್ತಿರುವಳಲ್ಲವೆ! ಆಕೆಯೇನು ಸಾಮಾನ್ಯಳಲ್ಲ! ಮೂಲತಃ ಸ್ತ್ರೀಯೇ ತಪೋವಿಘ್ನಕಾರಿಣಿಯು. ಅದರಲ್ಲೂ ತ್ರಿಲೋಕ ಸುಂದರಿಯಾಗಿ ಪುಷ್ಪಬಾಣನ ಸಮ್ಮೋಹನಾಸ್ತ್ರದಂತೆಯೂ ಮದನರಾಜನ ಮದಗಜದಂತೆಯೂ, ಮನೋಹಾರಿಣಿಯಾಗಿರುವ ಆಕೆಯು ಬಳಿಯಲ್ಲೇ ಇರುತ್ತಿರುವುದರಿಂದ ಇಂದಲ್ಲ ನಾಳೆಯಾದರೂ ಈಶ್ವರನು ವಿಷಯೇಂದ್ರಿಯಗಳ ಸೆಳೆತಕ್ಕೆ ಒಳಪಟ್ಟೇ ತೀರಬೇಕು. ಕಾಲ ಸ್ಥೈರಿಸಿಕೊಂಡಿರು' ಎಂದು ಸಮಾಧಾನ ಹೇಳಿದರು.

ಆದರೆ ಆ ಗುರುವಾಕ್ಯವು ಇಂದ್ರನ ಮನಸ್ಸಿನ ಕಳವಳವನ್ನು ಶಾಂತಗೊಳಿಸಲಾರದಾಯಿತು. — 'ಗುರುಸತ್ತ್ವಮಾ, ಪಾರ್ವತಿಯು ಈಗಾಗಲೇ ಬಹುದಿನಗಳಿಂದ ಶಿವನ ಸಮೀಪದಲ್ಲೇ ಇದ್ದು ಸೇವೆಮಾಡುತ್ತಿರುವಳು. ಆದರಿಂದ ಪರಮೇಶ್ವರನ ಚಿತ್ತವೃತ್ತಿಯು ಯಾವ ಬಗೆಯ ವ್ಯತ್ಯಾಸಕ್ಕೂ ಒಳಪಟ್ಟಿಲ್ಲ. ಆದರೆ ತಾವೀಗ ಪ್ರಸಂಗವಶದಿಂದ ಪುಷ್ಪಬಾಣ-ಮದನರಾಜ ಎಂಬ ಹೆಸರುಗಳನ್ನು ಉಪಯೋಗಿಸಿದಿರಲ್ಲವೆ? ಆ ಮನ್ಮಥನಿಂದಲೇ ಸದ್ಯಃ ಈ ಕಾರ್ಯವು ನೆರವೇರಬಹುದೆಂದು ನನ್ನ ಮನಸ್ಸಿನಲ್ಲಿ ಒಂದು ಆಸೆಯು ಅಂಕುರಿಸುತ್ತಿದೆ. ಆ ಕಾಮದೇವನೇ ಸ್ವಯಂ ಪುಷ್ಪಬಾಣ ಪ್ರಯೋಗಮಾಡಿ ಪರಮೇಶನ ಮನಸ್ಸಿನಲ್ಲಿ ಕಾಮೇಚ್ಛೆಯನ್ನುಂಟುಮಾಡಲು ಪ್ರಯತ್ನಿಸಿದರೆ, ಆದೀತು ಮಾಡಿಕೊಂಡು ಸಾಧ್ಯವಾಗಬಹುದೆಂದು ತೋರುತ್ತದೆ. ಆಗಲಿ ಪ್ರಯತ್ನಿಸೋಣ' ಎಂದುಕೊಂಡು ಒಡನೆ ಮನ್ಮಥನನ್ನು ಕರೆದುತರಬೇಕೆಂದು ದೂತರನ್ನಟ್ಟಿದನು. ಮನ್ಮಥನು ಪತ್ನಿಯಾದ ರತಿದೇವಿಯೊಂದಿಗೂ ಮಿತ್ರನಾದ ವಸಂತನೊಂದಿಗೂ ಕೂಡಿ ಒಡನೆ ದೇವೇಂದ್ರನ ಆಸ್ಥಾನಕ್ಕೆ ಬಂದು, ಗುರುಗಳಾದ ಬೃಹಸ್ಪತ್ಯಾಚಾರ್ಯರಿಗೂ, ದೇವೇಂದ್ರನಿಗೂ ವಂದಿಸಿ ಆತನಿಂದ ಕೊಡಲ್ಪಟ್ಟ ಉಚಿತಾಸನದಲ್ಲಿ ಕುಳಿತನು.

ಒಡನೆ ದೇವಗುರುವು-'ಕಾಮರಾಜಾ, ತ್ರಿಲೋಕ ವಿಜಯನಾದ ನಿನ್ನಿಂದ ಈಗ ಬಹು ಮಹತ್ವದ ಒಂದು ದೇವಕಾರ್ಯವು ನೆರವೇರಬೇಕಾ

ಗಿದೆ. ಅದಕ್ಕಾಗಿಯೇ ಇಂದ್ರನು ಈಗ ನಿನ್ನನ್ನು ಬರಮಾಡಿಕೊಂಡಿದ್ದಾನೆ' ಎಂದು ತಿಳಿಸಿದನು. ತನ್ನಿಂದ ದೇವರಾಜನಿಗೂ ಅಸಾಧ್ಯವಾದ ಒಂದು ಕಾರ್ಯವು ಸಾಧನೆಯಾಗಬೇಕೆಂಬುದನ್ನು ಕೇಳಿದೊಡನೆಯೇ ಮದನನ ಮನಸ್ಸಿನಲ್ಲಿ ಅಹಂಕಾರವು ಉತ್ಪನ್ನವಾಯಿತು. ತಕ್ಷಣವೇ ಆತನು ಒಡಲರಿಯದವನಾಗಿ-'ಪ್ರಭೋ! ತ್ರಿಲೋಕನಾಥನಾದ ನಿನಗೆ, ಅಲ್ಪನಾದ ನನ್ನಿಂದ ಆಗಬೇಕಾದ ಕಾರ್ಯವೇನಿದ್ದೀತು? ಸಮಸ್ತದೆಸೆಗಳನ್ನು ಪ್ರಕಾಶಗೊಳಿಸುವ ಸೂರ್ಯನಿಗೆ ದೀಪದ ಆವಶ್ಯಕವಿದ್ದೀತೆ? ಆದರೂ ನನ್ನಿಂದ ಆಗಬೇಕಾದ ಕಾರ್ಯವೇನೋ ಅಪ್ಪಣೆಯಾಗಲಿ. ಸಿದ್ಧನಾಗಿದ್ದೇನೆ' ಎಂದು ಬಿನ್ನವಿಸಿದನು. ಆಗ ಬೃಹಸ್ಪತ್ಯಾಚಾರ್ಯರು—'ಮದನಾ, ತ್ರಿಲೋಕದಲ್ಲೂ ಅಸಾಧಾರಣವೆನ್ನಿಸಿದ ಪುಷ್ಪಬಾಣಗಳನ್ನು ಧರಿಸಿ, ಪ್ರಾಣಿಗಳ ಚಿತ್ತಹರಣಮಾಡುವ ಕಲೆಯಲ್ಲಿ ಅಗಾಧ ಕೌಶಲವನ್ನು ಸಂಪಾದಿಸಿರುವ ನಿನಗೆ ಇದಿರಾಗತಕ್ಕವರಾರು' ಎಂದು ಹೊಗಳಿದರು. ದೇವೇಂದ್ರನು-'ಕಂದರ್ಪಾ, ಶೌರಿಯ ಚಕ್ರಾಯುಧಕ್ಕಿಂತಲೂ ತೀಕ್ಷ್ಣವೆಂದೆನಿಸಿದ ನನ್ನ ವಜ್ರಾಯುಧಕ್ಕೂ ಸಾಧ್ಯವಾಗದ ಕಾರ್ಯವನ್ನು ನಿನ್ನಪುಷ್ಪಬಾಣವು ನೆರವೇರಿಸಲು ಸಮರ್ಥವಾಗಿರುವುದ. ನಿನಗೆ ಸಮಾನರಾರು!' ಎಂದು ಪ್ರಶಂಸೆಮಾಡಿದನು. ಈ ವಾಕ್ಯಗಳನ್ನು ಕೇಳಿಕೇಳಿದಂತೆ ಮನ್ಮಥನಿಗೆ ತನ್ನ ಪ್ರತಾಪವು ಅತಿಶಯವಾದುದೆಂಬ ಅಹಂಕಾರವು ನೆತ್ತಿಗೇರಿ ಮಿತಿಮೀರಿತು. ಒಡನೆ ಹಿಂದೆಮುಂದೆ ಯೋಚಿಸದೆ 'ದೇವರಾಜಾ ಶಂಕಿಸುವೆಯೇಕೆ? ಹೇಳು, ನಿನಗೆ ವಿರೋಧಿಯಾಗಿರತಕ್ಕವನೇನು ದನುಜನೋ ಮನುಜನೋ ಅಥವ ಅಗಾಧ ತಪೋನಿರತನಾದ ಯಾವನೊಬ್ಬ ಋಷಿಯೋ ಅಲ್ಲದಿದ್ದರೆ, ಆ ಚಂದ್ರಮೌಳಿಯೋ ಯಾರು ಹೇಳು! ಅವನು ಯಾರಾದರಾಗಿರಲಿ. ಅವನನ್ನು ನನ್ನ ಬಾಣಪ್ರಯೋಗದಿಂದ ಕ್ಷಣಮಾತ್ರದಲ್ಲಿ ಅಪ್ಸರೆಯರ ಕಟಾಕ್ಷವೆಂಬ ಪಾಶಕ್ಕೆ ಒಳಪಡಿಸಿ ನಿನಗೆ ಪಾದಾಕ್ರಾಂತನನ್ನಾಗಿ ಮಾಡುತ್ತೇನೆ' ಎಂದು ನುಡಿದು ಅಟ್ಟಹಾಸ ಮಾಡಿದನು.

ಆಗ ದೇವಗುರುಗಳು-'ಮನ್ಮಥಾ ಈಗ ನೀನು-ಚಂದ್ರಮೌಳಿಯೋ-ಎಂದು ಯಾರನ್ನು ಕೊನೆಯಲ್ಲಿ ಹೆಸರಿಸಿದೆಯೋ ಆತನು ಸದ್ಯಃ ಇಲ್ಲೇ

ಹಿಮಾಚಲದ ತಪ್ಪಲಿನಲ್ಲಿ ಲೋಕಭೀಕರವಾದ ತಪಸ್ಸನ್ನಾಚರಿಸುತ್ತಿರುವನು. ಆತನನ್ನು ಸೌಂದರ್ಯಾಧಿ ದೇವತೆಯೋ ಎಂಬಂತಿರುವ ಗಿರಿರಾಜ ತನುಜೆ ಪಾರ್ವತಿಯು ಸೇವೆಮಾಡುತ್ತಿರುವಳು. ಮದನರಾಜಾ, ಪರಶಿವನು ಆಕೆಯಲ್ಲಿ ಮೋಹಿತನಾಗಿ ವಿವಾಹಿತನಾಗುವಂತಾದರೆ ದೇವಕಾರ್ಯವು ಸಿದ್ಧಿಯಾಗುವುದು. ಆ ತ್ರಿಲೋಕ ಕಲ್ಯಾಣಕಾರ್ಯವು ಸಮರ್ಥನಾದ ನಿನ್ನನ್ನು ಆಶ್ರಯಿಸಿರುವುದು' ಎಂದು ನುಡಿದು ಸುಮ್ಮನಾದರು.

ಆತ್ಮಪ್ರಶಂಸೆಯಲ್ಲಿ ತಾನು ಮುಂದರಿಯದವನಾಗಿ, ಸ್ವಯೋಗ್ಯತೆಯ ಬೆಲೆಯನ್ನರಿಯದೆ ಮಾಡಿಕೊಂಡ ಪ್ರತಿಷ್ಠೆಯು ಎಷ್ಟುಮಟ್ಟಿನ ಅನರ್ಥಕ್ಕೆ ಕಾರಣವಾಯಿತೆಂಬುದು ಮನ್ಮಥನಿಗೆ ಆಗ ಗೋಚರವಾಯಿತು. ತಪೋನಿರತನಾಗಿ ಕುಳಿತಿರುವ ಚಂದ್ರಶೇಖರನನ್ನು ಕೆಣಕಿ ಬದುಕುವನಾರು! ಆದರೂ ಈಗ ಮಾಡತಕ್ಕುದೇನಿದೆ? ಕೆಲಹೊತ್ತು ಯೋಚನಾಮಗ್ನನಾಗಿದ್ದು, ತರುವಾಯ [illegible] ಕಾರ್ಯವೇನೋ ಮಹಾ ಅಪಾಯಕಾರಿಯಾದುದು. ಆದರೂ ನನ್ನೊಬ್ಬನ ಪ್ರಾಣವೊಂದೆ ಆದ್ಯಂತ ದೇವಕುಲಕ್ಕೂ ಮೂರು ಲೋಕಕ್ಕೂ ಕ್ಷೇಮವಾಗುವ ಸಂಭವವಿರುವಾಗ ನಾನು ಹಿಂದೆಮುಂದೆ ನೋಡತಕ್ಕುದು ಧರ್ಮವಲ್ಲ. ಇಗೋ ನನ್ನ ಪ್ರಾಣವನ್ನಾದರೂ ಕೊಟ್ಟು ಈ ಕಾರ್ಯಸಾಧನೆಗಾಗಿ ಶಕ್ತಿಮೀರಿ ಶ್ರಮಿಸುವೆನು. ತಮ್ಮ ಆಶೀರ್ವಾದ ಮಾತ್ರವಿರಲಿ. ದೇಹದೊಂದಿಗೆ ಉಳಿದೆನಾದರೆ ಉತ್ತಮವೇ ಆಯಿತು. ಹಾಗಲ್ಲದೆ ಈ ಕಾರ್ಯದಲ್ಲಿ ದೇಹಪಾತವಾದರೆ, ಸ್ವಾಮಿಕಾರ್ಯಕ್ಕಾಗಿ ತನುವನ್ನೊಪ್ಪಿಸಿದೆನೆಂಬ ಧನ್ಯತೆ ಯುಂಟಾಗುವುದು' ಎಂದು ನುಡಿದನು.

ಆಗ ಸುರೇಶನೂ ಸುರಗುರುವೂ ಆತನ ಸ್ವಾರ್ಥತ್ಯಾಗ ಬುದ್ಧಿಯನ್ನು ಪ್ರಶಂಸಿಸಿ-'ಕಂದರ್ಪ ಕಾಮದೇವಾ ನಿನಗೆ ಮಂಗಳವಾಗಲಿ. ಈ ಕಾರ್ಯದಲ್ಲಿ ನಿನಗೆ ನಿರ್ವಿಘ್ನವಾಗಿ ಜಯವುಂಟಾಗಲಿ. ನಿನ್ನ ಯಶಸ್ಸು ಮೂರು ಲೋಕಕ್ಕೂ ವ್ಯಾಪಿಸಲಿ. ನಿನ್ನ ಶೌರ್ಯಪ್ರತಾಪಗಳು ಅಪ್ರತಿಹತವಾಗಿ ನಿನಗೆ ಸಹಾಯಕವಾಗಲಿ. ಲೋಕಕ್ಷೇಮ ಚಿಂತನೆಯಿಂದ ಕಾರ್ಯಪ್ರವೃತ್ತನಾಗುವ ನಿನಗೆ ಸಕಲ ಭೂತಗಳೂ ಸಹಾಯಕ

ಗಳಾಗಲಿ. ಹೋಗಿ ಬಾ. ನಿನಗೆ ಶುಭವಾಗುವುದು' ಎಂದು ಆಶೀರ್ವಾದ ಮಾಡಿ ವೀಳೆಯವನ್ನಿತ್ತು ಕಳುಹಿಸಿದರು.

ಮನ್ಮಥನು ರತಿವಸಂತರೊಂದಿಗೆ ವ್ಯಸನಭಾರದಿಂದ ದೇವಸಭೆಯಿಂದ ಹೊರಹೊರಟನು.



**ಅಧ್ಯಾಯ ೪.** **'ಕಾಮದಹನ.'**

ಲೋಕದಲ್ಲಿ ಕಾಮನಿಂದ ನಡೆವ ಕಾರ್ಯವು ಅಪರಿಮಿತವಾಗಿರುವುದು. ಜಗತ್ಕಾರಣ ಕಾರ್ಯದಲ್ಲಿ ಕಾಮದೇವನ ಕಾರ್ಯವೇ ಅತಿಮುಖ್ಯವಾದುದು. ತ್ರಿಮೂರ್ತಿಗಳಲ್ಲಿ ಬ್ರಹ್ಮನು ಸೃಷ್ಟಿಕರ್ತನೆಂದೂ ಶಿವನು ಲಯಕರ್ತನೆಂದೂ ವಿಷ್ಣುವು ಸ್ಥಿತಿಕರ್ತನೆಂದೂ ಹೇಳಲ್ಪಟ್ಟಿದೆಯಲ್ಲವೆ? ಈ ತತ್ವವು ಬಹು ಅರ್ಥಗರ್ಭಿತವಾಗಿದೆ. ಯಾವುದೊಂದು ಪದಾರ್ಥವನ್ನು ನಿರ್ಮಿಸುವುದಕ್ಕೆ ಒಬ್ಬನಿಗೆ ಬುದ್ಧಿಶಕ್ತಿಯು ಸಹಾಯವು ಅತ್ಯಾವಶ್ಯಕವಷ್ಟೆ! ಹೀಗಿರುವಲ್ಲಿ ಅಣುರೇಣುವಿನಿಂದ-ಮನುಷ್ಯ ದೇವ ಗಂಧರ್ವರವರೆಗಿನ ಸ್ಥಾವರ ಜಂಗಮಾತ್ಮಕವಾದ ಅದ್ಭುತ ಸೃಷ್ಟಿಯನ್ನೂ ಪಂಚಭೂತಗಳನ್ನೂ ಸೃಷ್ಟಿಸಲು, ವಿದ್ಯಾಬುದ್ಧಿಗಳಿಗೆ ಅಭಿಮಾನ ದೇವತೆಯಾದ ಸರಸ್ವತಿಯ ಸಹಾಯಗೊಂಡ,-ಆಕೆಯನ್ನು ಅರ್ಧಾಂಗಿಯನ್ನಾಗಿ ಪಡೆದ ಬ್ರಹ್ಮದೇವನೇ ಶಕ್ತನು. ಲಯಕಾರ್ಯಕ್ಕೆ ಆದಿಶಕ್ತಿ ಸ್ವರೂಪಿಣಿಯಾದ ಕಾಳಿಕಾದೇವಿಯನ್ನು ಪತ್ನಿಯನ್ನಾಗಿ ಕೈಕೊಂಡ ಶಿವನೇ ತಕ್ಕ ದೈವವು. ಇನ್ನು ಸ್ಥಿತಿಕಾರ್ಯವಲ್ಲವೆ? ಸೃಷ್ಟಿಯಾದ ಯಾವುದೊಂದು ವಸ್ತುವು ಬೆಳೆದು ಬದುಕಲು ಲಕ್ಷ್ಮಿಯು ಸಹಾಯವಿರಬೇಕಾದುದು ಅತ್ಯವಶ್ಯಕ. ಲಕ್ಷ್ಮಿಯೆಂದರೆ, ಧನ-ಧಾನ್ಯಗಳೆಂಬ ಅಷ್ಟುಮಾತ್ರವಲ್ಲ. ಪ್ರಕೃತಿ ಸಂಬಂಧವಾದ ಪ್ರತಿಯೊಂದು ವಸ್ತುಸಾಮಗ್ರಿಯೂ ಲಕ್ಷ್ಮೀ ಸಾನ್ನಿಧ್ಯದಿಂದ ಕೂಡಿದುದೇ! ಪ್ರಕೃತಿಯ ಸಹಾಯವಿಲ್ಲದಿದ್ದಲ್ಲಿ ಸೃಷ್ಟವಾದ ಯಾವ ಪ್ರಾಣಿಯು, ಯಾವ ವನಸ್ಪತಿಯು, ಯಾವುದೊಂದು ವಸ್ತುವಿನ

ಬಾಳ್ವೆಯಾಗಲೀ ಬೆಳೆವಣಿಗೆಯಾಗಲೀ ಮುಂದೆ ಸಾಗಲು ಅವಕಾಶವಿರುವುದು? ಹೀಗೆ ಲಕ್ಷ್ಮಿಯು ಎಂದರೆ ಪ್ರಕೃತಿಯು ನಾರಾಯಣನನ್ನು ಎಂದರೆ ಅಣುರೇಣು ತೃಣಕಾಷ್ಟಗಳಲ್ಲೂ ಅಂತರ್ಯಾಮಿಯಾಗಿ ಆದ್ಯಂತ ಜಗತ್ತನ್ನೂ ವ್ಯಾಪಿಸಿಕೊಂಡಿರುವ ವಿಷ್ಣುವನ್ನು ಎಡೆಬಿಡದೆ ಅವಲಂಬಿಸಿಕೊಂಡೇ ಇರುವಳು. ಕಾಮನು ಅಥವ ಮನ್ಮಥನು ಇಂತಹ ಲಕ್ಷ್ಮೀನಾರಾಯಣರ ಮಗನು. ಸ್ಥಿತಿಕಾರ್ಯಕ್ಕೆ ಲಕ್ಷ್ಮೀ ಸಹಾಯವು ಬೇಕಾದಂತೆಯೇ, ಸೃಷ್ಟಿಯಾದ ಯಾವುದೊಂದು ಕಾರ್ಯವು ಬೆಳೆದು ಅಭಿವೃದ್ಧಿಯಾಗಲಿಕ್ಕೂ, ಅಲ್ಲಿ ಆಸೆ ಅಭಿಮಾನಗಳಿಲ್ಲದಿದ್ದರೆ ಸಾಧ್ಯವೇ ಇಲ್ಲ. ಮನ್ಮಥ, ಎಂದರೆ ಮನಸ್ಸನ್ನು ಮಥಿಸುವವನು. ಮನಸ್ಸಿನಲ್ಲಿ ಕಾಮವು ಉತ್ಪನ್ನವಾದಲ್ಲದೆ ಯಾವುದೊಂದು ಕಾರ್ಯದಲ್ಲೂ ಅಪೇಕ್ಷೆಯುಂಟಾಗದು. ಅಪೇಕ್ಷೆಯಿಲ್ಲದಿದ್ದಲ್ಲಿ ಅಭಿಮಾನವಿರದು. ಆಸೆ ಅಪೇಕ್ಷೆ ಅಭಿಮಾನಾದಿಗಳಿಂದ ಕೂಡಿರದಿದ್ದರೆ ಯಾವುದೊಂದು ಕಾರ್ಯವೂ ಹುಟ್ಟಿಬೆಳೆಯದು-ಬದುಕದು. ಹೀಗೆ ವಿಷ್ಣುವಿನ ಸ್ಥಿತಿಕಾರ್ಯಕ್ಕೆ ಆತನ ಪತ್ನಿಯಾದ ಲಕ್ಷ್ಮಿಯೂ ಪುತ್ರನಾದ ಮನ್ಮಥನೂ ಅ[illegible] ಸಹಕಾರಿಗಳಾಗಿದ್ದಾರೆ.

ಇನ್ನು ಕಾಮವು ಬಂಧಕಸಾಮಗ್ರಿಗಳಲ್ಲಿ ಬಹು ಪ್ರಬಲವಾದುದೆಂದೂ, ಷಡ್ವೈರಿಗಳಲ್ಲಿ ಪ್ರಧಾನವಾದುದೆಂದೂ ಹೇಳುವುದುಂಟಲ್ಲವೆ? ಅದೇನು ಸುಳ್ಳಲ್ಲ. ಲೋಕದಲ್ಲಿ ನಮಗೆ ದೊರೆಯುತ್ತಿರುವ ಯಾವುದೊಂದು ವಸ್ತುವನ್ನೂ ಸತ್ಕಾರ್ಯ ದುಷ್ಕಾರ್ಯಗಳೆರಡಕ್ಕೂ ಉಪಯೋಗಿಸಲು ಅವಕಾಶವುಂಟಲ್ಲವೆ! ದೇಹಬಲವಿದ್ದ ಮನುಷ್ಯನು ಪರೋಪಕಾರಿಯಾಗಿ ಅಪರಿಮಿತ ಸತ್ಕಾರ್ಯಮಾಡಬಹುದು-ಅಥವ ಪರಹಿಂಸಕನಾಗಿ ಅಗಾಧ ದುಷ್ಕರ್ಮ ಮಾಡಲೂಬಹುದು. ವಿದ್ಯಾಬಲವುಳ್ಳವನು, ಅದನ್ನು ಸನ್ಮಾರ್ಗದಲ್ಲುಪಯೋಗಿಸಿ ಲೋಕಕ್ಕೆ ಜ್ಞಾನಬೋಧೆಮಾಡಿ ಮಹೋಪಕಾರಿಯಾಗಬಹುದು. ಅಥವ ಪರರ ಸರ್ವನಾಶಕ್ಕೂ ಕಾರಣನಾಗಿ ತನ್ನ ವಿದ್ಯಾಬಲದಿಂದ ಲೋಕದಲ್ಲಿ ಪ್ರಳಯವನ್ನೆಬ್ಬಿಸಿ ಬಿಡಲೂ ಸಾಧ್ಯವುಂಟು. ಕೈಯಲ್ಲೊಂದು ಕತ್ತಿಯಿದ್ದರೆ ಅದರಿಂದ ಹಣ್ಣನ್ನು ಕೊಯ್ದುಕೊಂಡು ತಿಂದು ಪ್ರಾಣಧಾರಣೆ ಮಾಡಿಕೊಳ್ಳಬಹುದು. ಅಥವ ಕತ್ತನ್ನೇ ಕೊಯ್ದುಕೊಳ್ಳಬಹುದು, ಅಲ್ಲವೆ? ಹಾಗೆಯೇ, ಕಾಮವನ್ನು ಧಾರ್ಮಿಕ ರೀತಿ

ಯಲ್ಲಿ ಮಿತಿಯನ್ನು ಮೀರದೆ ಉಪಯೋಗಿಸಿಕೊಂಡಲ್ಲಿ ಅದರಿಂದ ಅಗಾಧ ಲೋಕಸಂಗ್ರಹಣ ಕಾರ್ಯಮಾಡಿ, ಪುಣ್ಯಾರ್ಜನೆಮಾಡಿ ದೇಹಸಾರ್ಥಕ್ಯವನ್ನುಂಟು ಮಾಡಿಕೊಳ್ಳಲು ಅವಕಾಶವುಂಟು. ಹಾಗಲ್ಲದೆ, ದುರ್ಮಾರ್ಗದಲ್ಲಿಳಿದು ಅದೇ ಕಾಮವನ್ನೇ ದುರುಪಯೋಗಗೊಳಿಸಿಕೊಳ್ಳತೊಡಗಿದರೆ, ಅದು ಆತ್ಮನಾಶಕ ಸಾಮಗ್ರಿಗಳಲ್ಲಿ ಮೊದಲನೆಯದಾಗಿ ಪರಿಣಮಿಸಿ ಕರ್ತವ್ಯವನ್ನು ಅಂಧಕೂಪಕ್ಕೆ ತಳ್ಳುವುದು. ಕಾಮದ ದುರುಪಯೋಗದಿಂದಲೇ ಕ್ರೋಧ ಲೋಭ ಮೋಹ ಮದ ಮಾತ್ಸರ್ಯಾದಿಗಳೆಲ್ಲವೂ ಪ್ರಬಲಿಸುವುವು. ಕಾಮವೊಂದನ್ನು ಸದುಪಯೋಗದಲ್ಲಿಟ್ಟುಕೊಳ್ಳುವುದಾದರೆ, ನಾವು ಷಡ್ವೈರಿಗಳೆಂದು ಹೆದರುತ್ತಿರುವ ಕ್ರೋಧಾದಿ ಮಿಕ್ಕ ಯಾವ ಶತ್ರುವೂ ಬಳಿ ಸಾರಿಯುವುದಿಲ್ಲ. ಹೀಗೆ ಸದುಪಯೋಗಗೊಳಿಸಿಕೊಂಡ ಕಾಮವು ಸಕಲವಿಧ ಶ್ರೇಯಸ್ಸಿಗೂ ಮಾರ್ಗವನ್ನುಂಟು ಮಾಡುವುದು.—ಆ ಮಗನು ತನ್ನ ತಾಯಿ ತಂದೆಗಳನ್ನೂ ಆ ಮನೆಗೆ ಕರೆತಂದು ಆ ಕರ್ತವ್ಯನಿಷ್ಠ ಲೋಕಹಿತವನ್ನು ಸುಖಮಯವನ್ನಾಗಿಸುವನು.

ಪ್ರಕೃತ - ಕಾಮದೇವನು ರತಿವಸಂತರೊಂದಿಗೆ ಸ್ವರ್ಗಲೋಕದಿಂದ ದೇವೇಂದ್ರಸಭೆಯನ್ನು ಬಿಟ್ಟು ಹೊರಟು, ಸದಾಶಿವನು ತಪೋಮಗ್ನನಾಗಿ ಕುಳಿತಿದ್ದ ಹಿಮಾಚಲದ ತಪ್ಪಲು ಪ್ರದೇಶಕ್ಕೆ ಬಂದನು. ಪರಮ ವೈರಾಗ್ಯ ಚಕ್ರವರ್ತಿಯೂ ಜಿತೇಂದ್ರಿಯನೂ ವಿಷಯವಿಮುಖನೂ ಆದ ಆ ಪರಶಿವನನ್ನು ದೂರದಿಂದಲೇ ಕಂಡ ಮನ್ಮಥನಿಗೆ ಮನಸ್ಸಿನಲ್ಲಿ ಭಯ ಸಂಚಾರವಾಗದಿರಲಿಲ್ಲ. ಇಂದ್ರ ಬೃಹಸ್ಪತಿಗಳ ಮುಖಸ್ತುತಿಗೆ ಮರುಳಾಗಿ ಯೋಗಿವರ್ಯನಾದ ಪರಮೇಶ್ವರನನ್ನೂ ಒಬ್ಬ ಯಃಕಶ್ಚಿತ ಮುನಿಗೆ ಸಮಾನನೆಂದು ತಿಳಿದ ತನ್ನ ಅವಿವೇಕಕ್ಕಾಗಿ ಮನಸ್ಸಿನಲ್ಲೇ ತನ್ನನ್ನು ತಾನು ಎಷ್ಟೋ ಹಳಿದುಕೊಂಡನು. ಆದರೆ ಈಗ ಏನುಮಾಡಲೂ ಸಾಧ್ಯವಿಲ್ಲ. ಮುಂದೆ ಆಗಬೇಕಾದ ಕಾರ್ಯಮಾಡದಿದ್ದರೆ ವಿಧಿಯಿಲ್ಲವೆಂದು ತೋರಿತು. ಸರ್ವಸಜ್ಜಿತನಾಗಿ ಅಷ್ಟುದೂರ ಬಂದು ಆಗ ಬೆದರಿ ಹಿಂದಕ್ಕೆ ಹೋಗಲು ಸಾಧ್ಯವೆ ?-'ಆದುದಾಗಲಿ, ಪ್ರಾಣಾಂತ್ಯದವರೆಗೂ ಸಾಹಸಮಾಡಿ ಈ ಕಾರ್ಯವನ್ನು ಸಾಧಿಸಿಯೇ ಬಿಡಬೇಕು. ಇದರಿಂದ ಲೋಕಕ್ಕೆ ಶಾಶ್ವತವಾದ ಪ್ರಯೋಜನವುಂಟಾಗುತ್ತಿರುವಲ್ಲಿ,

ಜೀವಗಳ್ಳನಾಗಿ ಅಪಕೀರ್ತಿಯನ್ನು ಹೊತ್ತು ಬಾಳುವುದಕ್ಕಿಂತಲೂ ಈ ಕಾರ್ಯದಲ್ಲೇ ದೇಹಪಾತವಾದರೂ ಚಿಂತೆಯಿಲ್ಲ. ಸರ್ವಶಕ್ತಿಯನ್ನೂ ಉಪಯೋಗಿಸಿ ಪ್ರಯತ್ನಿಸಿ ಬಿಡುವುದೇ ಸರಿ!" ಎಂದು ನಿರ್ಧರಿಸಿದನು. ಒಡನೆ ವಸಂತನು, ಕಾಮದೇವನ ಇಚ್ಛೆಯನ್ನನುಸರಿಸಿ, ಆ ವನದಲ್ಲಿ ಆವಿರ್ಭವಿಸಿದನು. ಒಡನೆ ಕೇಳುವುದೇನು ? ಸಕಲ ವೃಕ್ಷಲತೆಗಳೂ ನವತಳಿರಿನಿಂದ ಶೋಭಿಸತೊಡಗಿದುವು. ದಿಕ್ಕುಗಳು ಸುಪ್ರಸನ್ನವಾದುವು. ತುಂಬಿಗಳು ಝೇಂಕರಿಸತೊಡಗಿದುವು. ಶುಕಪಿಕಾದಿಗಳ ಆಲಾಪನೆಯು ಪ್ರಾರಂಭವಾಯಿತು. ಸುವಾಸಿತವಾದ ಮಂದಮಾರುತವು ಮನೋಹರವಾಗಿ ಸುಳಿಯಿತು. ಲತೆಗಳೂ ವೃಕ್ಷಗಳೂ ಮೊಗ್ಗುಗಳಿಂದಲೂ ಹೂಗಳಿಂದಲೂ ತುಂಬಿ ಚಿತ್ತಾಕರ್ಷಕವಾದುವು. ಆ ವನದಲ್ಲಿ ಮಕರಂದರಸವು ವರ್ಷಧಾರೆಯಂತೆ ಸುರಿಯತೊಡಗಿತು. ಅಕಾಲದಲ್ಲಿ ಪ್ರಾಪ್ತನಾದ ಆ ವಸಂತಋತುವಿನ ವಿಚಿತ್ರ ಪರಿಸ್ಥಿತಿಯನ್ನು ಕಂಡು ಋಷಿಮುನಿಗಳು ಸಹ ಆಶ್ಚರ್ಯಗೊಂಡರು. ಆ ವನದಲ್ಲಿ ವಾಸಿಸಿದ್ದ ಪಶುಪಕ್ಷಿಗಳಾದಿಯಾದ ಸಕಲ ಪ್ರಾಣಿಗಳೂ, ಮನ್ಮಥಾವೇಶ ಪೂರಿತವಾಗಿ, ವಿಷಯಾಭಿಲಾಷೆಯಿಂದ ಕೂಡಿ ಭೋಗ ಸಂತೃಪ್ತಿಯಲ್ಲಿ ಮಗ್ನವಾದ ಚಿತ್ತವೃತ್ತಿಯಿಂದ ಅಲ್ಲಲ್ಲಿ ಸುತ್ತುತ್ತಿದ್ದುವು.

ವಸಂತ ಕಾಮದೇವರ ಆವಿರ್ಭಾವದಿಂದ ಆ ಕಾಡಿನ ಸ್ಥಾವರ ಜಂಗಮಾತ್ಮಕವಾದ ಸಮಸ್ತ ವಸ್ತುಗಳೂ ತಮ್ಮ ಸ್ಥಿತಿಯಲ್ಲಿ ಚಾಂಚಲ್ಯಹೊಂದಿದುವಾದರೂ, ಯೋಗಾಸನಬದ್ಧನಾಗಿ ಕುಳಿತು ಅಂತರ್ಮುಖಿಯಾಗಿದ್ದ ಸ್ಥಾಣುವು ಯಾವಬಗೆಯ ಚಿತ್ತವಿಕಾರಕ್ಕೂ ಒಳಪಡದೆ, ಸ್ಥಿರಾಸನನಾಗಿಯೇ ಇದ್ದನು. ಅದನ್ನು ಕಂಡು ಮನ್ಮಥನು, ಆ ಸಂದರ್ಭದಲ್ಲಿ ಮಾಡತಕ್ಕ ಕಾರ್ಯವೇನೆಂದು ಯೋಚಿಸುತ್ತಾ, ಅತ್ತಿತ್ತ ನೋಡುತ್ತಿರಲು, ಎಂದಿನಂತೆ ಪೂಜಾಸಾಮಗ್ರಿಗಳನ್ನು ತೆಗೆದುಕೊಂಡು,–ನಡೆದುಬರುತ್ತಿದ್ದ ಸುವರ್ಣಲತೆಯೋ ಎಂಬಂತಿದ್ದ ಜಗನ್ಮೋಹಿನಿಯಾದ ಪಾರ್ವತೀದೇವಿಯು ಕಣ್ಣಿಗೆ ಕಾಣಿಸಿದಳು. ಮನ್ಮಥನು ಆಕೆಯು ಸಕಾಲಕ್ಕೆ ಪ್ರಾಪ್ತವಾದಳೆಂದುಕೊಂಡು ಅಲ್ಲೇ ಮರೆಯಾಗಿರಲು, ಪಾರ್ವತೀದೇವಿಯು, ಪೂಜಾಸಾಮಗ್ರಿಗಳನ್ನು ತಂದಿಟ್ಟು ಪರಶಿವನನ್ನು ಪೂಜಿಸಿ, ಪ್ರದಕ್ಷಿಣೆ

ನಮಸ್ಕಾರಗಳನ್ನು ಮಾಡಿ ಸಮೀಪದಲ್ಲೇ ಕೈಮುಗಿದು ನಿಂತುಕೊಂಡಳು. ಕಾಮದೇವನು ಅದೇ ಸಮಯವೆಂದುಕೊಂಡು ಅರವಿಂದ, ಅಶೋಕ, ಚೂತ, ನವಮಲ್ಲಿಕಾ, ನೀಲೋತ್ಪಲಗಳೆಂಬ ತನ್ನ ಪಂಚಬಾಣಗಳನ್ನೂ ಹೆದೆಯೇರಿಸಿದ ತನ್ನ ಧನುಸ್ಸಿನಲ್ಲಿ ಸಂಧಿಸಿ ಆಕರ್ಣಾಂತವಾಗಿ ಸೆಳೆದು ಸಮ್ಮೋಹನಾಸ್ತ್ರದ ಮಂತ್ರಪುರಶ್ಚರಣೆಯಿಂದ ಅದನ್ನು ಅಭಿಮಂತ್ರಿಸಿ ಮಹಾಮಹಿಮೋಪೇತನಾದ ಆ ಯೋಗಿವರ್ಯನ ಹೃದಯಕ್ಕೆ ಅದನ್ನು ಗುರಿಯಿಟ್ಟು ಪ್ರಯೋಗಿಸಿಬಿಟ್ಟನು.

ಚಿತ್ತಚಾಂಚಲ್ಯವನ್ನುಂಟುಮಾಡುವ ವಾತಾವರಣವನ್ನು ಶತಾಂಶ ಸಂಪೂರ್ಣತೆಯಿಂದ ಸಿದ್ಧಗೊಳಿಸಿಕೊಂಡು ವಸಂತನೇ ಆವಿರ್ಭವಿಸಿದ್ದಾನೆ. ಪೂಜಾಸಾಮಗ್ರಿಗಳ ರೂಪದಿಂದ ಗಂಧಪುಷ್ಪಾಕ್ಷತಾದಿ ಸಮಸ್ತ ಭೋಗ ಸಾಮಗ್ರಿಗಳನ್ನೂ ಸಿದ್ಧಗೊಳಿಸಿಕೊಂಡು ಬಂದ ತ್ರಿಜಗನ್ಮೋಹಿನಿಯಾದ ನವಯುವತಿಯಾದ ಗಿರಿರಾಜ ನಂದನೆಯು ಹಸನ್ಮುಖಿಯಾಗಿ ಕಟಾಕ್ಷವನ್ನು ಬೀರುತ್ತಾ ಎದುರಾಗಿ ನಿಂತಿದ್ದಾಳೆ. ಮನಸ್ಸಮುದ್ರ ಮಥನ ಕ್ರಿಯೆಗೆ ಅಧಿದೇವತೆಯಾದ ಸಾಕ್ಷಾನ್ಮನ್ಮಥದೇವನೇ ದೇಹಧಾರಿಯಾಗಿ ಎದುರಿಗೆ ನಿಂತು, ಚಿತ್ತಾಕರ್ಷಕಗಳಾದ ಪಂಚಬಾಣಗಳನ್ನೂ ಪ್ರಯೋಗಿಸಿದ್ದಾನೆ. ಸರಿ! ಮುಂದೆ ಕೇಳುವುದೇನು! ಸಮ್ಮೋಹನಾಸ್ತ್ರಹತನಾದ ಪರಶಿವನಿಗೆ ತಪೋಭಂಗವಾಯಿತು. ಸಮಾಧಿಯು ಶಿಥಿಲವಾಯಿತು. ಮನಸ್ಸು ಚಾಂಚಲ್ಯ ಹೊಂದಿತು. ನಿರ್ವಿಕಲ್ಪ ಸಮಾಧಿಮಗ್ನನಾಗಿ ಆನಂದಪರವಶನಾಗಿ ಅಂತರ್ಮುಖಿಯಾಗಿ ಆತ್ಮಜ್ಯೋತಿಯನ್ನು ದರ್ಶಿಸುತ್ತಲಿದ್ದ ದೇವದೇವನು, ತನ್ನ ಚಿತ್ತಶಾಂತತೆಗೆ ಭಂಗವುಂಟಾದ ಕಾರಣವೇನೆಂದು ಒಡನೆ ಕಣ್ತೆರೆದನು. ಎದುರಿಗೆ ನಿಂತಿದ್ದ ತ್ರಿಭುವನೈಕ ಸುಂದರಿಯಾದ ಪಾರ್ವತಿಯು ಮತ್ತೊಮ್ಮೆ ಸಾಷ್ಟಾಂಗ ಪ್ರಣಾಮಮಾಡಿದಳು. ಆವರೆಗೆ ಆಕೆಯನ್ನು ಅಲ್ಲಿ ಅನೇಕವೇಳೆ ನೋಡಿದ್ದನಾದುದರಿಂದ, ಈ ದಿನ ಆಕೆಯ ಬರುವಿಕೆಯಿಂದ ತನ್ನ ಚಿತ್ತಚಾಂಚಲ್ಯವುಂಟಾಯಿತೆಂದು ಯೋಚಿಸಲಿಲ್ಲ. ಮತ್ತೇನು ಕಾರಣವಿರಬಹುದೆಂದು, ತನ್ನ ದೃಷ್ಟಿಯನ್ನು ಸುತ್ತಲೂ ಪ್ರಸರಿಸಿದನು. ಎದುರಿಗೆ ದೇವದಾರು ಮಂಟಪದಲ್ಲಿ, ಚಿತ್ರವಿಚಿತ್ರ ವರ್ಣಾತ್ಮಕವಾದ ವಸ್ತ್ರಗಳನ್ನು ಧರಿಸಿ, ವೀರಾಸನದಲ್ಲಿ ಕುಳಿತು,

ಇಕ್ಷುಚಾಪವನ್ನು ಎಡಗೈಯಲ್ಲಿ ಹಿಡಿದು, ಬಲಗೈಯಿಂದ ಪಂಚ-ಬಾಣ ಗಳನ್ನು ಸಂಧಿಸಿ, ನಾರಿಯನ್ನು ಆಕರ್ಣಾಂತವಾಗಿ ಸೆಳೆದು ತನ್ನ ಮೇಲೆ ಮತ್ತೊಮ್ಮೆ ಪ್ರಯೋಗಿಸಲು ಸಿದ್ಧನಾಗಿದ್ದ ಗಿರಿದೇವನನ್ನು ಪರಶಿವನು ಕಂಡನು. ತನ್ನಲ್ಲುಂಟಾದ ಚಿತ್ತಚಾಂಚಲ್ಯಕ್ಕೆ ದುರ್ಮಾರ್ಗಿಯಾದ ಆತನ ಕುಚೇಷ್ಟೆಯೇ ಕಾರಣವೆಂದು ಸ್ಪಷ್ಟವಾಯಿತು. ತನ್ನ ಮಟ್ಟಿಗೆ ತಾನು ತಪೋನಿರತನಾಗಿ ಕುಳಿತಿರುವಲ್ಲಿಗೆ ಅತಿಕ್ರಮ ಪ್ರವೇಶಮಾಡಿ, ವಿನಾ ಕಾರಣ ತನ್ನ ತಪಸ್ಸಿಗೆ ವಿಘ್ನವನ್ನಾಚರಿಸಿ, ತನ್ನ ಮನಸ್ಸಿನ ಶಾಂತತೆಗೆ ಭಂಗವನ್ನುಂಟುಮಾಡಿದ ಆ ಮನ್ಮಥನಮೇಲೆ ಪರಶಿವನಿಗೆ ಮಿತಿಮೀರಿದ ಕೋಪವುಂಟಾಯಿತು. ಕಣ್ಣುಗಳು ಕೆಂಪಾದುವು. ಹಲ್ಲುಗಳು ಕಟಕಟ ನೆಂದು ಮಸೆದುವು. ಕೇಶಗಳು ನಿಗುರಿನಿಂತುವು. ಕೋಪಾಧಿಕ್ಯದಿಂದ ವ್ಯಾಮೋಹಚನಾಯಿತು. ಅವನನ್ನು ಈಗಲೇ ದಹಿಸಿಬಿಡಬೇಕೆಂದು ಸಂಕಲ್ಪಿಸಿದನು. ಒಡನೆ, ಮೂರನೆಯದಾದ ಹಣೆಗಣ್ಣಿನ ಕವಾಟವು ತೆರೆಯಿತು. ಅದರಿಂದ ಸೂರ್ಯಾಗ್ನಿಗಳ ತೇಜಸ್ಸನ್ನೂ ಮೀರಿಸುವ ಅಲೌಕಿಕ-ಅಪೂರ್ವತೇಜಸ್ಸಿನ ಭಯಂಕರ ಜ್ವಾಲೆಯೊಂದು ಕಣ್ಣುಗಳು ಕೋರೈಸುವಂತೆ ಹೊರಟಿತು. ಪರಮೇಶ್ವರನು ಕಣ್ಣುಬಿಟ್ಟೊಡನೆಯೇ ತನಗೆ ಮೃತ್ಯುಸನ್ನಿಹಿತವಾಯಿತೆಂದು ತಿಳಿದು ಮನ್ಮಥನು ಗಡಗಡನೆಂದು ನಡುಗತೊಡಗಿದ್ದನು. ಕೈಯಲ್ಲಿದ್ದ ಬಿಲ್ಲುಬಾಣಗಳು ಜಾರಿಬಿದ್ದುಹೋ ದುವು. ಕಣ್ಣುಗಳು ಮಂಜುಮಂಜಾದುವು. ಬಾಯಲ್ಲಿನ ದ್ರವವಾರಿ ಹೋ ಯಿತು. ಅಷ್ಟರಲ್ಲೇ ಮೇಲೆ ಹೇಳಿದಂತೆ ಪರಶಿವನ ಹಣೆಗಣ್ಣಿನಿಂದ ಹೊರಟ ಆ ಅಪೂರ್ವತೇಜೋರಾಶಿಯು ಪ್ರಳಯಕಾಲಾಗ್ನಿಯಂತೆ ಹೊರಟು ಬಂದು, ಅವನನ್ನು ಸುತ್ತಿ ಆವರಿಸಿ ವಿದ್ಯುದ್ವೇಗದಿಂದ ದಹಿಸಿಬಿಟ್ಟಿತು. ಮನ್ಮಥನ ದೇಹವು ನಿಶ್ಶೇಷವಾಗಿ ದಹಿಸಿಹೋಯಿತು. ಅಂಗಜನು ಅನಂಗನಾದನು.— ನಾಮಾವಶೇಷನಾದನು.

ತನ್ನ ರಮಣನಾದ-ತ್ರಿಭುವನಮೋಹಕನಾದ ಕಾಮದೇವನು ಭಸ್ಮಾ ವಶೇಷನಾದುದನ್ನು ಕಂಡೊಡನೆಯೇ ರತಿಯು ಮೂರ್ಛೆಹೋಗಿಬಿದ್ದಳು. ವಸಂತನೂ ಮೈಮರೆದು ಬಿದ್ದಿದ್ದು ಸ್ವಲ್ಪಹೊತ್ತಿನಮೇಲೆ ಎಚ್ಚೆತ್ತು ರತಿಗೆ ಶೈತ್ಯೋಪಚಾರಮಾಡಿ ಎಚ್ಚರಗೊಳಿಸಿದನು. ರತಿಯು ಪತಿವಿರಹ

ವನ್ನು ತಾಳಲಾರದೆ ಪರಿಪರಿಯಿಂದ ವಿಲಪಿಸುತ್ತಿರಲು, ಸ್ವಲ್ಪಹೊತ್ತಿನೊಳ ಗಾಗಿಯೇ-'ಎಲೆ ರತಿದೇವಿಯೇ, ಸಮಾಧಾನಗೊಳ್ಳು. ಈ ಲೋಕದಲ್ಲಿ ವಿಧಿಯ ಗತಿಯನ್ನು ಮೀರುವರಾರಿದ್ದಾರೆ? ದೈವಯತ್ನದಿಂದ ನಡೆದುಹೋದ ಈ ಕಾರ್ಯಕ್ಕಾಗಿ ಅಳಲಬೇಡ. ಮುಂದೆ ಶಿವನು ಗಿರಿಸುತೆಯನ್ನು ವರಿಸಿ ಪಾಣಿಗ್ರಹಣ ಮಾಡುವಾಗ್ಗೆ, ಆತನ ಅನುಗ್ರಹದಿಂದ ನಿನ್ನ ಪತಿಯೂ ಪುನರ್ಜೀವಿತನಾಗುವನು, ಚಿಂತಿಸಬೇಡ' ಎಂದು ಒಂದು ಅಶರೀರವಾಣಿ ಯು ಕೇಳಿಸಿತು. ಅದರಿಂದ ಲೇಶಮಾತ್ರ ಸಮಾಧಾನಗೊಂಡ ರತಿವಸಂ ತರು ತಮ್ಮ ಮನೆಗೆ ಹೊರಟುಹೋದರು. ವಸಂತನ ಆವಿರ್ಭಾವದಿಂದ ಅತಿಶಯ ಸೊಬಗಿನಿಂದ ರಂಜಿಸುತ್ತಿದ್ದ ಆ ವನಪ್ರಾಂತವು ಕಾಮದಹನ ದೊಂದಿಗೆ ತನ್ನ ಶೋಭೆಯನ್ನೆಲ್ಲ ಕಳೆದುಕೊಂಡು ಎಂದಿನಂತೆ ಬೆಂಗಾ ಡಾಯಿತು.



**ಅಧ್ಯಾಯ ೫.** **'ಇಷ್ಟಾರ್ಥಸಿದ್ಧಿ'**

ಕಾಮದೇವನ ಪಾಂಚಭೌತಿಕ ದೇಹವು ತಪೋನಿಧಿಯಾದ ತ್ರಿಣೇ ತ್ರನ ಹಣೆಗಣ್ಣಿನಿಂದ ಭಸ್ಮವಾಯಿತೆಂಬುದು ಪುರಾಣಕಥೆ! ಆದರೆ ತಾ ತ್ವಿಕವಾಗಿ, ಯೋಗೀಶ್ವರನಾದ ಶಂಕರನು ಮೂರ್ತಿಯು-ಪಾರ್ವತಿಯೆಂಬ ಸ್ತ್ರೀ ವ್ಯಕ್ತಿಯ ದರ್ಶನಾದಿ ಸಂಗದಿಂದ ತನ್ನ ಮನಸ್ಸಿನಲ್ಲಿ ಅಲ್ಪವಾಗಿ ಉದ್ಭವಿ ಸಿದ್ದ ಕಾಮವನ್ನು ಹಾಗೆಯೇ ಬೆಳೆಯಲಿತ್ತರೆ, ಅದು ಕೊನೆಗೆ ಪ್ರಮಾದ ವನ್ನುಂಟುಮಾಡದಿರದೆಂದು ತಿಳಿದು, ಮನೋನಿಗ್ರಹಮಾಡಿ, ತನ್ನಲ್ಲುಂ ಟಾದ ಅಲ್ಪವಾದ ಆ ಕಾಮವನ್ನು ಜ್ಞಾನರೂಪೀ ತೇಜಸ್ಸಿನಿಂದ ನಿಗ್ರ ಹಿಸಿಬಿಟ್ಟನೆಂದು ಯೋಚಿಸಿದರೆ ಅದರಲ್ಲಿ ಅಪರಾಧವಿಲ್ಲವಲ್ಲವೆ? ಹೀಗೆ ಕಾಮ ನನ್ನು ದಹಿಸಿದ ತರುವಾಯ ನಾರೀಜನ ಸಂಪರ್ಕದಿಂದ ಕಲುಷಿತ ವಾತಾ ವರಣವುಳ್ಳ ಆ ಸ್ಥಳವು ಇನ್ನು ಮುಂದೆ ತಪಸ್ಸಿಗೆ ಯೋಗ್ಯವಾಗಲಾರ ದೆಂದುಕೊಂಡು, ತನ್ನ ಅನುಚರರಾದ ಸಮಸ್ತಭೂತಗಣಗಳಿಂದಲೂ ಕೂಡಿ

ಭೂತನಾಥನು ಅದೃಶ್ಯನಾಗಿ ಹೊರಟುಹೋದನು. ಆತನು ಎಲ್ಲಿಗೆ ಹೋದ ನೆಂಬುದು ಯಾರಿಗೂ ತಿಳಿಯಲಿಲ್ಲ. ಕಾಮದಹನದಿಂದ ತಮ್ಮ ಪ್ರಯತ್ನವು ಹಾಗೆ ನಿರರ್ಥಕವಾದುದನ್ನು ತಿಳಿದು ದೇವತೆಗಳು ಮುಂದೆ ಮಾಡಬೇಕಾದ ಕಾರ್ಯವೇನೆಂದು ತೋರದೆ ಅತಿಶಯ ಚಿಂತಾಕ್ರಾಂತರಾದರು.

ತನ್ನ ಹೃದಯದ ಆರಾಧ್ಯದೇವತೆಯನ್ನಾಗಿ ತಿಳಿದು ಪೂಜಿಸುತ್ತಿದ್ದ ಪರಶಿವನು ಅದೃಶ್ಯನಾದುದೂ, ಆತನ ಕಣ್ಣಿನಿಂದ ಅಪೂರ್ವವಾದ ತೇಜೋಮಯ ಜ್ವಾಲೆಯು ಹೊರಟು ಒಂದು ಭಸ್ಮರಾಶಿಯನ್ನು ಕಲ್ಪಿಸಿದುದೂ ಪಾರ್ವತಿಗೆ ಪರಮಾಶ್ಚರ್ಯವನ್ನುಂಟುಮಾಡಿದುವು. ಸ್ವಲ್ಪ ಹೊತ್ತಿನಮೇಲೆ ಚೆನ್ನಾಗಿ ದಿಟ್ಟಿಸಿನೋಡಲು ಆತನು ಆಸನಾಸೀನನಾಗಿ ಕುಳಿತಿದ್ದ ಪ್ರದೇಶವು ಶೂನ್ಯವಾಗಿದ್ದಿತು. ಪರಮೇಶ್ವರನು ತನ್ನ ದೃಷ್ಟಿಗೆ ಬೀಳದಂತೆ ಎಲ್ಲೋ ಅದೃಶ್ಯನಾಗಿ ಹೋದುದನ್ನು ತಿಳಿದು ತನ್ನ ಮನೋರಥವು ಹಾಗೆ ಭಗ್ನವಾದುದನ್ನು ಸಹಿಸಿಕೊಳ್ಳಲಾರದೆ ಪಾರ್ವತಿಯು ಮೂರ್ಛೆಹೋಗಿಬಿದ್ದಳು. ಸಖಿಯರು ಬಳಿಯ ಕೊಳದ ತಣ್ಣೀರೆರಚಿ, ಬೀಸಣಿಗೆಯಿಂದ ಬೀಸಿ, ಬಗೆಬಗೆಯಿಂದ ಉಪಚರಿಸಿದರು. ಆದರೂ ಏನೂ ಪ್ರಯೋಜನವಾಗಲಿಲ್ಲ. ಕೊನೆಗೆ ಒಬ್ಬಿಬ್ಬರು ಓಡಿಹೋಗಿ ಪರ್ವತರಾಜನಿಗೆ ಆ ಸಂಗತಿಯನ್ನು ತಿಳಿಸಿದರು. ಗಿರಿರಾಜನು ಪರಮದಾರುಣವಾದ ಆ ವಾರ್ತೆಯನ್ನು ಕೇಳಿ ಭಯಭ್ರಾಂತನಾಗಿ ಪತ್ನಿಯೊಡನೆ ಅಲ್ಲಿಗೆ ಬಂದು, ಮೈತಿಳಿಯದೆ ಬಿದ್ದಿದ್ದ ತನ್ನ ಸುಕುಮಾರಿಯನ್ನು ಎರಡು ತೋಳುಗಳಿಂದಲೂ ಎತ್ತಿಕೊಂಡು ತನ್ನ ಅರಮನೆಗೆ ಕರೆದೊಯ್ದು ಹಂಸತೂಲಿಕಾತಲ್ಪದಲ್ಲಿ ಮಲಗಿಸಿ ಮೂರ್ಛೆ ತಿಳಿಯುವುದಕ್ಕಾಗಿ ಪರಿಪರಿಯಿಂದ ಉಪಚರಿಸುತ್ತಿದ್ದನು.

ಅರಮನೆಗೆ ಕರೆದೊಯ್ಯಲ್ಪಟ್ಟ ಪಾರ್ವತಿಗೆ ಮುಂದೆ ನಾಲ್ಕಾರು ದಿನಗಳಲ್ಲಿ ದೇಹಾಯಾಸವು ಪರಿಹಾರವಾಗಿ ಆರೋಗ್ಯವುಂಟಾಯಿತು. ಆದರೇನು? ಚಿತ್ತವನ್ನು ಅಗಾಧ ಚಿಂತೆಯು ಆವರಿಸಿಕೊಂಡಿತು. ಇದುವರೆಗಾದರೆ ಪರಶಿವನು ಕಣ್ಣೆದುರಿಗಿದ್ದು ನಿತ್ಯವೂ ದರ್ಶಿಸಲಿಕ್ಕಾದರೂ ಅವಕಾಶವಿದ್ದಿತು. ಆ ಮನೋಹರ ಮೂರ್ತಿಯನ್ನು ಕೈದಣಿಯೆ ಪೂಜಿಸಿ, ಕಣ್ದಣಿಯೆ ನೋಡಿ, ಮನದಣಿಯೆ ಪ್ರಾರ್ಥಿಸಲು ಅವಕಾಶವಿದ್ದಿತು.

ಈಗ ಅದಕ್ಕೂ ಅವಕಾಶವಿಲ್ಲವಾಗಿದೆ. ಅದೃಶ್ಯನಾಗಿ ಹೊರಟುಹೋದ ಆ ಮಹಾದೇವನು ಎಲ್ಲಿದ್ದಾನೆಂಬುದನ್ನು ತಿಳಿಯುವುದು ಹೇಗೆ? ಇನ್ನು ಆತನನ್ನು ಪುನಃ ಕಾಣಲು ಸಾಧ್ಯವಾಗುವುದೆ? ಆತನನ್ನು ಒಲಿಸಲಾಗುವುದೆ? ಪರಶಿವನನ್ನು ಪತಿಯನ್ನಾಗಿ ಪಡೆಯುತ್ತೇನೆಂಬ ಬಯಕೆಯು, ದೈವಹೀನೆಯಾದ ತನಗೆ ಬಿಸಿಲ್ಗುದುರೆಯ ಜಲಪಾನದಂತೆ ನಿರರ್ಥಕವಲ್ಲವೆ? ಅಕ್ಕಟಾ ನನಗಿನ್ನೇನು ಗತಿ? ಮುಂದೇನು ಮಾಡಲಿ? ಹಾ, ನನಗೆ ಈ ಸಂದರ್ಭದಲ್ಲಿ ಮತ್ತಾರು ಒತ್ತಾಸೆಮಾಡುವರು' ಎಂದು ಮುಂತಾಗಿ ಪರಿಪರಿಯಾಗಿ ಹಲುಬಿದಳು. ನಿದ್ರಾಹಾರಾದಿಗಳಲ್ಲಿ ಮಮತೆಯುತಪ್ಪಿತು. ಗಂಧಪುಷ್ಪ ತಾಂಬೂಲಾದಿಗಳು ಅಸಹ್ಯವೆಂದು ತೋರಸಾಗಿದುವು. ದೇಹವು ಶುಷ್ಕವಾಗತೊಡಗಿತು. ಕಣ್ಣುಗಳು ಗುಣಿಬಿದ್ದುವು. ಪಾರ್ವತಿಯು ಒಂದು ಮಲಿನವಸ್ತ್ರವನ್ನು ಧರಿಸಿಕೊಂಡು ಕೆದರಿಹೋದ ಕೇಶರಾಶಿಯನ್ನು ಸಹ ಎತ್ತಿ ಬಾಚಿ ಕಟ್ಟಿಕೊಳ್ಳುವಷ್ಟು ಉತ್ಸಾಹವಿಲ್ಲದೆ-ಸದಾ ಕಣ್ಣೀರು ಸುರಿಸುತ್ತಾ,-'ಹಾ. ಅಯ್ಯೋ ನನಗಿನ್ನೇನು ಗತಿ, ಏನುಮಾಡಲಿ, ಎಲ್ಲಿಗೆ ಹೋಗಲಿ, ಪರಶಿವನೇ ಹೀಗೆ ಉದಾಸೀನಮಾಡಿ ಕೈಬಿಟ್ಟ ಮೇಲೆ ನಾನಿನ್ನು ಹೇಗೆ ಬಾಳ್ವೆಮಾಡಲಿ!' ಎಂದು ಮಹದ್ವ್ಯಸನಾಕ್ರಾಂತಳಾಗಿ ಕೊರಗತೊಡಗಿದಳು.

ಮೇನಕೆ ಹಿಮವಂತರು ಹೇಳಿದ ಸಮಾಧಾನ ವಚನಗಳೇನು ಪ್ರಯೋಜನಕ್ಕೂ ಬರಲಿಲ್ಲ. ಆಕೆಯ ಆಯಾಸ ಪರಿಹಾರಕ್ಕೆಂದೂ ವ್ಯಸನ ನಿವೃತ್ತಿಗೆಂದೂ ಅವರು ಒದಗಿಸಿಕೊಟ್ಟ ಸಾಧನಗಳನ್ನು ಆಕೆಯು ಯಾವ ಕಾರ್ಯಕ್ಕೂ ಉಪಯೋಗಿಸಿಕೊಳ್ಳಲಿಲ್ಲ. ಸಖಿಯರ ಉಪಚಾರಗಳನ್ನೂ ಕೈಕೊಳ್ಳಲಿಲ್ಲ. ಅವರೊಂದಿಗೆ ಮುಖಕೊಟ್ಟು ಮಾತನಾಡುತ್ತಿರಲಿಲ್ಲ. ಸುಕುಮಾರಿಯಾದ ಆಕೆಯ ಈ ಸ್ಥಿತಿಯನ್ನು ನೋಡಿ, ತಂದೆತಾಯಿಗಳು ಅಗಾಧ ಚಿಂತಾಕ್ರಾಂತರಾಗಿ, ಉಪಾಯತೋರದೆ, ಬಹಿರಂಗವಾಗಿ ಸುಮ್ಮನಿದ್ದರೂ ಒಳಗೊಳಗೇ ಅಸಹನೀಯ ಬೇಗೆಯಿಂದ ಬೇಯುತ್ತಿದ್ದರು.

ಗಿರಿಜೆಗೆ ಇನ್ನು ಮನೆಯಲ್ಲಿರುವುದು ಅಸಹ್ಯವೆನ್ನಿಸಿತು. ಒಡನೆ ಒಂದುದಿನ ತನ್ನ ತಾಯಿಯನ್ನು ಕುರಿತು-'ಅಮ್ಮಾ, ನನ್ನ ಹೃದಯವು ದುಃಖಾಗ್ನಿಯಿಂದ ಬೇಯುತ್ತಿದೆ. ಆ ಅಗ್ನಿಯು ಶಂಕರನ ಕೃಪಾಕಟಾಕ್ಷ

ದಿಂದಲ್ಲದೆ ಶಾಂತವಾಗದು. ಆ ದೇವದೇವನನ್ನು ಘೋರ ತಪಸ್ಯದಿಂದ ಪ್ರಸನ್ನೀಕರಿಸಿಕೊಳ್ಳಬೇಕೆಂದು ಸಂಕಲ್ಪಿಸಿದ್ದೇನೆ. ಈ ಮೂಲಕವಾಗಿ ನನ್ನೀದೇಹವು ನಾಶವಾಗಬೇಕೆಂದು ವಿಧಿಲಿಖಿತವಿದ್ದರೆ, ಅದು ಮನೆಯಲ್ಲಿ ರುವುದರಿಂದ ಉಳಿಯಲಾರದು. ನನ್ನ ಕರ್ತವ್ಯದಲ್ಲಿ ನಾನು ದೃಢನಿಶ್ಚಿತ ಳಾಗಿದ್ದೇನೆ. ನನಗೆ ಆಶೀರ್ವಾದಮಾಡಿ ಕಳುಹಿಸು ' ಎಂದು ಪ್ರಾರ್ಥಿಸಿ ದಳು. ಮಗಳ ಆ ಮಾತುಗಳು ಮೇನಕೆಯ ದುಃಖವನ್ನು ದ್ವಿಗುಣಿತ ವಾಗಿಸಿದುವು.—'ಸುಕುಮಾರಿಯಾದ ತನ್ನ ಮುದ್ದುಮಗಳು ಪರದೇಶಿಯಂತೆ ಏಕಾಂಗಿಯಾಗಿ ಕುಳಿತು ತಪಸ್ಸು ಮಾಡುವುದೆಂತು! ತಪಸ್ಸಿನ ಅಗಾಧ ಕಷ್ಟಗಳನ್ನೂ ತಾಪವನ್ನೂ ಸಹಿಸಿಕೊಳ್ಳುವುದೆಂತು! ಅಕ್ಕಟಾ, ದುರ್ವಿ ಧಿಯೇ, ಏನು ಗತಿಯನ್ನು ತಂದಿಟ್ಟೆ!' ಎಂದು ಅತಿಶಯ ಚಿಂತಾಪರವಶ ಳಾಗಿ, ಆ ಸಂಗತಿಯನ್ನು ಗಿರಿರಾಜನಿಗೆ ತಿಳಿಸಿದಳು. ಆತನೂ ಆ ಮಾತು ಗಳನ್ನು ಕೇಳಿ, ಬಹು ಗಾಬರಿಪಟ್ಟುದಲ್ಲದೆ, ಮಗಳನ್ನು ಕುರಿತು ಆ ಯೋಚನೆಯನ್ನು ತ್ಯಜಿಸೆಂದು ಎಷ್ಟೋ ಬಗೆಗಳಲ್ಲಿ ಬುದ್ಧಿವಾದ ಹೇಳಿದನು. ಆದರೂ ಅದು ಏನೂ ಪ್ರಯೋಜನಕ್ಕೆ ಬರಲಿಲ್ಲ. ಪಾರ್ವತಿಯು ಮಿತ ಪರಿವಾರಯುಕ್ತಳಾಗಿ ಅರಮನೆಯನ್ನು ಬಿಟ್ಟುಹೊರಟೇಬಿಟ್ಟಳು.

ಯಾವ ಸ್ಥಳದಲ್ಲಿ ಪರಮೇಶ್ವರನು ತನ್ನನ್ನು ನಿರಾಕರಿಸಿ ಅದೃಶ್ಯ ನಾಗಿ ಹೋಗಿದ್ದನೋ ಅದೇ ಸ್ಥಳಕ್ಕೆ-ಅದೇ ಸನ್ನಿವೇಶದಲ್ಲಿಗೆ ಆತನನ್ನು ಬರಮಾಡಿಕೊಂಡು, ತನ್ನವನನ್ನಾಗಿ ಮಾಡಿಕೊಳ್ಳದಿದ್ದರೆ, ತನ್ನನ್ನು ತನ್ನ ತಾಯಿಯು ಭೂಮಿಭಾರಕಳಾಗಿ ಹೆತ್ತಂತೆ ಆಗಲಾರದೆ!' ಎಂದುಕೊಂಡು, ಪಾರ್ವತೀದೇವಿಯು, ಹಿಂದೆ ಪರಶಿವನು ತಪಸ್ಸುಮಾಡುತ್ತಿದ್ದ ಪ್ರದೇಶ ವನ್ನು ಕುರಿತು ನಡೆದಳು. ಅಲ್ಲಿ, ಕಾಮದಹನವಾಗಿ ಅವನ ದೇಹವು ಭಸ್ಮಾ ವಶೇಷವಾಗಿ ಬಿದ್ದಿದ್ದ ಸ್ಥಳದಲ್ಲಿ-ಅವನ ಭಸ್ಮರಾಶಿಯ ಮೇಲೆಯೇ ಒಂದು ವೇದಿಕೆಯನ್ನು ನಿರ್ಮಿಸಿಕೊಂಡು, ಅದರಲ್ಲಿ ಭದ್ರಾಸನದಲ್ಲಿ ಕುಳಿತು ಶ್ವಾಸ ನಿರೋಧಮಾಡಿ ತಪಸ್ಸಿಗೆ ತೊಡಗಿದಳು. ಆದಿಶಕ್ತಿಯ ಅವತಾರಸ್ವರೂಪ ಳಾದ ಗಿರಿಜಾದೇವಿಯು ಮನಸ್ಸೊಂದು ಶಪಥಪೂರ್ವಕವಾಗಿ ತೊಡಗಿದ ತಪಸ್ಸು ಹೇಗಿದ್ದಿತೆಂದು ವರ್ಣಿಸಲಾದೀತು? ಬೇಸಗೆಯಲ್ಲಿ ನಾಲ್ಕುಕಡೆ ಗಳಲ್ಲೂ ಬೆಂಕಿಯನ್ನು ಪ್ರಜ್ವಲನಗೊಳಿಸಿ, ಮೇಲೆ ಮಧ್ಯಂಗತ ಮಾ

ಮಾರ್ತಾಂಡನ ಪ್ರಚಂಡ ಕಿರಣಗಳು ತಲೆಶಿಡಿದು ಹೋಗುವಂತೆ ಜ್ವಲಿಸುತ್ತಿ
ರಲು, ಸುಕುಮಾರಿಯಾದ ಪಾರ್ವತೀದೇವಿಯು ಕುಸುಮಕೋಮಲವಾದ
ತನ್ನ ದೇಹದ ಮೇಲಿನ ಮಮತೆಯನ್ನು ನೀಗಿ ಆ ಪಂಚಾಗ್ನಿ ಮಧ್ಯದಲ್ಲಿ
ಕುಳಿತು, ತನ್ನ ಹೃದಯಾಧಿದೇವತೆಯಾದ ಆ ಮಹಾದೇವನನ್ನು ಕುರಿತು
ಧ್ಯಾನಸಮಾಧಿಮಗ್ನಳಾಗಿ ಆರಾಧಿಸುತ್ತಿದ್ದಳು. ಮಳೆಗಾಲದಲ್ಲಿ ಕುಂಭ
ದ್ರೋಣವಾಗಿ ಸುರಿಯುತ್ತಿದ್ದ ವರ್ಷಧಾರೆಗೆ ದೇಹವನ್ನೊಡ್ಡಿ ಬಯಲು
ಪ್ರದೇಶದಲ್ಲಿ ಕುಳಿತು, ನಿಶ್ಚಲ ಮನೋಭಾವದಿಂದ ಶಂಕರನ ಪಾದಕಮಲ
ಗಳನ್ನು ಹೃದಯದಲ್ಲಿಟ್ಟು ಆರಾಧಿಸುತ್ತಿದ್ದಳು. ಚಳಿಗಾಲದಲ್ಲಿ, ದೇಹ
ರಕ್ತವೇ ಗಡ್ಡೆಕಟ್ಟಿಹೋಗುವಂತಹ ಚಳಿಯನ್ನು ಪ್ರತಿಭಟಿಸಿ ಸರೋವರ
ದಲ್ಲಿ ಕುತ್ತಿಗೆಮಟ್ಟದ ನೀರಿನಲ್ಲಿ ಕುಳಿತು, ಧ್ಯಾನಪರವಶಳಾಗಿ ತಪಸ್ಸು
ಮಾಡಿದಳು. ಐಶ್ವರ್ಯದ ಅರಮನೆಯಲ್ಲಿ ದಾಸದಾಸೀ ಜನರ ಸೇವೆಗೊಂಡು
ರಾಜಭೋಗದಲ್ಲಿ ಬೆಳೆದ ಆ ಸುಕುಮಾರಾಂಗಿಯು ಮಾಡುತ್ತಿದ್ದ ಆ ಕಠಿಣ
ತಪ ತಪಶ್ಚರ್ಯೆಯನ್ನು ಕಂಡು ಬಹುಕಾಲದಿಂದಲೂ ತಪೋನಿರತರಾಗಿ
ಕುಳಿತಿದ್ದ ಅನೇಕ ತಪಸ್ವಿಗಳೂ ಪರಮಾಶ್ಚರ್ಯಪಟ್ಟರು. ಮೇನಕೆ ಹಿಮ
ವಂತರೂ, ಪಾರ್ವತಿಯ ಸಖಿಯರೂ ಆಕೆಯು ಪಡುತ್ತಿದ್ದ ಈ ಕಷ್ಟ
ವನ್ನು ಕಣ್ಣಿನಿಂದ ನೋಡಲಾರದೆ ಮಹಾ ವ್ಯಸನಾಕ್ರಾಂತರಾಗಿ-ಪ್ರತೀ
ಕಾರ ಉಪಾಯವನ್ನರಿಯದೆ ಅತಿಶಯ ಸಂಕಟಕ್ಕೊಳಗಾಗಿದ್ದರು.

ಹೀಗೆ ಬಹುದಿನಗಳು ಕಳೆದುವು. ಪರ್ವತರಾಜನಂದನೆಯು ತನ್ನ
ನ್ನು ಒಲಿಸಿಕೊಳ್ಳುವ ಉದ್ದೇಶದಿಂದ ಅತಿ ಘೋರವಾದ ತಪಶ್ಚರ್ಯೆ
ಯಲ್ಲಿ ತೊಡಗಿದ್ದ ಸಂಗತಿಯು ಸರ್ವಜ್ಞನಾದ ಶಂಕರನಿಗೆ ಈ ಮೊದಲೇ
ಗೋಚರವಾಗಿದ್ದಿತು. ಆಕೆಯ ದಾರ್ಢ್ಯವನ್ನು ಪರೀಕ್ಷಿಸುವುದಕ್ಕಾಗಿ ಕೆಲವು
ದಿನಗಳವರೆಗೆ ಹಾಗೆ ಸುಮ್ಮನಿದ್ದು ಪರೀಕ್ಷಿಸಿದುದಾಯಿತು. ಗಿರಿಜೆಯು
ಆ ಪರೀಕ್ಷೆಯಲ್ಲಿ ಜಯಶಾಲಿನಿಯಾದಳು. ಮಾತ್ರವಲ್ಲ, ಸಾವಕಾಶವಾ
ದಂತೆಲ್ಲಾ ದಿನದಿನಕ್ಕೆ ಇನ್ನೂ ಕಠಿಣತರವಾದ ನಿಯಮಗಳನ್ನು ಕಲ್ಪಿಸಿ
ಕೊಂಡು ದೇಹಶೋಷಣೆಮಾಡಿಕೊಳ್ಳತೊಡಗಿದಳು. ಮಿತಾಹಾರ, ಅಲ್ಪಾ
ಹಾರ, ಏಕಭುಕ್ತ, ಫಲಾಹಾರ, ಪರ್ಣಾಹಾರ, ಕೇವಲ ಜಲಪಾನ,
ವಾಯ್ವಾಹಾರ, ನಿರಾಹಾರ ಮುಂತಾದ ವ್ರತಗಳನ್ನು ಅವಲಂಬಿಸಿ ಕ್ರಮ

ಪಟ್ಟಳು. ಅಷ್ಟು ದಿನಗಳಾದರೂ ಶಂಕರನ ಕೃಪೆಯುಂಟಾಗಲಿಲ್ಲವೆಂಬುದು ಆಕೆಗೆ ಅತಿಶಯ ಸಂತಾಪವನ್ನುಂಟುಮಾಡಿತು. ಕುಳಿತು ಧ್ಯಾನಿಸಿದುದು ಇನ್ನು ಸಾಕೆಂದು ಎದ್ದುನಿಂತಳು. ಹಾಗೂ ಕೆಲವು ದಿನಗಳು ಕಳೆದುವು. ತರುವಾಯ ಏಕಪಾದದಮೇಲೆ ನಿಂತಳು. ಅದರಿಂದಲೂ ಪರಮೇಶ್ವರನು ಪ್ರಸನ್ನನಾಗಲಿಲ್ಲ. ಕೊನೆಗೆ ಅಂಗುಷ್ಟವನ್ನು ಮಾತ್ರ ಭೂಮಿಯಲ್ಲೂರಿ, ಕೈಗಳನ್ನು ಮೇಲಕ್ಕೆತ್ತಿ ನಿಂತಳು. ಇನ್ನು ಉದಾಶೀನತೆಯಿಂದ ಇರುವುದು ಶಂಕರನಿಗೆ ಸಾಧ್ಯವೆನ್ನಿಸಲಿಲ್ಲ. ಏಕಾಗ್ರಚಿತ್ತದಿಂದ ಮಾಡುತ್ತಿದ್ದ ಆಕೆಯ ಈ ಘೋರ ತಪಶ್ಚರ್ಯೆಯ ತೇಜಸ್ಸು ಶಿವನ ಗಮನವನ್ನು ಆಕರ್ಷಿಸಿತು. ದುರ್ಲಭನಾದ ಆತನು ಉಪಾಯರಹಿತನಾಗಿ ಆ ಗಿರಿರಾಜನಂದನೆಯ ಪ್ರೇಮಮಯ ಪಾಶಕ್ಕೆ ಒಳಪಡದಿದ್ದರೆ ವಿಧಿಯಿಲ್ಲವಾಯಿತು. ಆಕೆಗೆ ದರ್ಶನ ಕೊಡಬೇಕೆಂದುಕೊಂಡನು.

ಆದರೆ ತತ್ಪೂರ್ವದಲ್ಲಿ ಮತ್ತೊಂದು ಬಗೆಯಿಂದ ಆಕೆಯನ್ನು ಪರೀಕ್ಷಿಸಬೇಕೆಂದೂ ಇಚ್ಛೆಯಾಯಿತು. ಗಜಚರ್ಮಾಂಬರಧಾರಿಯೂ, ಭಸ್ಮೋದ್ಧೂಳಿತಗಾತ್ರನೂ, ರುಂಡಮಾಲಾಲಂಕೃತನೂ, ಸ್ಮಶಾನವಾಸಿಯೂ ಆದ ತನ್ನ ವಿಚಾರದಲ್ಲಿ ಆಕೆಗೆ ಯಾವ ಬಗೆಯ ಅಭಿಪ್ರಾಯವಿದೆಯೋ ತಿಳಿಯಬೇಕೆನ್ನಿಸಿತು. ಒಡನೆ, ತಾನು ಅವರೆಗೆ ಅಜ್ಞಾತವಾಗಿ ವಾಸಿಸುತ್ತಿದ್ದ ಸ್ಥಳವನ್ನು ಬಿಟ್ಟು, ಒಬ್ಬ ಬ್ರಹ್ಮಚಾರಿಯಂತೆ ರೂಪವನ್ನು ಧರಿಸಿ, ಪಾರ್ವತೀದೇವಿಯು ತಪಸ್ಸುಮಾಡುತ್ತಿದ್ದ ಸ್ಥಳಕ್ಕೆ ಬಂದನು. ಆ ದಿನ ಗೌರಿದೇವಿಯು ಪ್ರಾತಃಕಾಲ ಧ್ಯಾನಸಮಾಧಿಯಲ್ಲಿದ್ದು ಶ್ರಾಂತಳಾಗಿದ್ದುದರಿಂದ, ವಿಶ್ರಾಂತಿಗೆಂದು ಕುಳಿತಿದ್ದಳು. ಆಕೆಯನ್ನು ಆಕೆಯ ಸಖಿಯರು ಉಪಚರಿಸುತ್ತಿದ್ದರು.

ಆಕಸ್ಮಿಕವಾಗಿ ತಮ್ಮ ಆಶ್ರಮಕ್ಕೆ ಬಂದ ಆ ತೇಜಸ್ವೀ ಬ್ರಹ್ಮಚಾರಿಯನ್ನು ಕಂಡೊಡನೆಯೇ ಗಿರಿಜೆಯು ಸಖಿಯರು ತಟ್ಟನೆ ಮೇಲಕ್ಕೆದ್ದು, ಕುಶಲಪ್ರಶ್ನೆಮಾಡಿ, ಉಚಿತಾಸವನ್ನಿತ್ತು ಅರ್ಘ್ಯಪಾದ್ಯಾದಿಗಳಿಂದ ವಿಧ್ಯುಕ್ತವಾದ ಅತಿಥಿಪೂಜೆಗಳನ್ನು ಸಲ್ಲಿಸಿದರು. ಅವರ ಆದರೋಪಚಾರಗಳಿಂದ ಸುಪ್ರೀತನಾದ ಆ ಕಪಟ ಬ್ರಹ್ಮಚಾರಿಯು, ಕುಶಾಸನದಲ್ಲಿ ವಿಶ್ರಮಿಸಿಕೊಂಡು, ಪರಮಾಶ್ಚರ್ಯಗೊಂಡವನಂತೆ, ಅವರನ್ನು ಕುರಿತು—'ಎಲಾ ತರುಣಿ

ಯರೇ, ಈ ನಿರ್ಜನವಾದ ಅರಣ್ಯಮಧ್ಯದಲ್ಲಿ ನೀವು ಮೂರು ನಾಲ್ಕು ಮಂದಿ ಎಳೆಯಪ್ರಾಯದ ಹೆಣ್ಣುಮಕ್ಕಳೇ ಇದ್ದುಕೊಂಡು ಏನುಮಾಡು ತ್ತಿರುವಿರಿ? ಈಕೆಯನ್ನು ನೋಡಿದರೆ ರಾಜಪುತ್ರಿಯೆಂಬಂತೆ ತೋರುತ್ತಿ ರುವುದು, ಈಕೆ ಯಾರು? ಯಾರ ಮಗಳು? ಈ ಸುಕುಮಾರಿಯು ಈ ಪ್ರಾಯದಲ್ಲಿ ಅನುರೂಪ ವರನನ್ನು ಲಗ್ನವಾಗಿ ಭೋಗಭಾಗ್ಯಗಳನ್ನನುಭವಿ ಸುವುದನ್ನು ತ್ಯಜಿಸಿ, ತಪಸ್ವಿಜನ ಸಾಮಾನ್ಯವಾದ ಈ ಕಷ್ಟಗಳಿಗೆ ಒಳ ಪಟ್ಟು ನರಳುತ್ತಿರುವಳೇಕೆ? ಹೀಗೆ ತಪಶ್ಚರ್ಯವನ್ನು ಕೈಕೊಂಡುದರಲ್ಲಿ ಈಕೆಯ ಅಪೇಕ್ಷೆಯೇನು? ರೂಪ, ಗುಣ, ಐಶ್ವರ್ಯ ಮುಂತಾದ ಯಾವ ಸುಖಸಾಧನೆಗೂ ಕೊರತೆಯಿಲ್ಲದಿರುವ ಈಕೆಯು ಈ ಬಗೆಯ ಕಠಿಣ ತಪ ಶ್ಚರ್ಯೆಗೆ ದೇಹವನ್ನು ಒಳಪಡಿಸಿ ನರಳುವುದೇಕೆ?' ಎಂದು ಪ್ರಶ್ನಿಸಿದನು.

ವಟುರೂಪಧಾರಿಯಾದ ಪರಮೇಶ್ವರನ ಪ್ರಶ್ನೆಗೆ ಉತ್ತರವಾಗಿ ಸಖಿ ಯ[illegible] ಹೇಳಿದರು. ಈಕೆಯು ನಮ್ಮ ಸಖಿ. ಹಿಮವಂತನ ಮಗಳು. ಪಾರ್ವತಿಯೆಂಬ ಹೆಸರುಳ್ಳಾಕೆ. ಈಕೆಯು ತನಗೆ ಅನುರೂಪ ನಾದ ವರನನ್ನು ಪಡೆಯಬೇಕೆಂದು ತಪೋನಿರತಳಾಗಿರುವಳು. ಈಕೆಯ ಅಪೇಕ್ಷೆಗೆ ವಿಷಯನಾಗಿರುವ ಮಹಾಪುರುಷನು ಆ ಸಾಕ್ಷಾತ್ಪರಮೇಶ್ವ ರನೇ! ಆತನನ್ನು ಹೊಂದಬೇಕೆಂಬುದಕ್ಕಾಗಿಯೇ ಈ ಕಠಿಣ ತಪಶ್ಚರ್ಯೆ ಯಲ್ಲಿ ತೊಡಗಿರುವಳು' ಎಂದರು. ಆ ಮಾತನ್ನು ಕೇಳಿದ ಆ ಕಪಟಬ್ರಹ್ಮ ಚಾರಿಯು-'ಎಲೈ ಮಂಗಳಗಾತ್ರೆಯರೇ, ನನಗೆ ಸಂಬಂಧಪಡದಿದ್ದರೂ ಸಂದರ್ಭವಶವಾಗಿ ಪ್ರಾಪ್ತವಾಗಿರುವ ಈ ವಿಚಾರದಲ್ಲಿ ಒಂದೆರಡುಮಾತು ಗಳನ್ನು ಹೇಳಬೇಕಾಗಿದೆ. ಇದೇನಿದು, ನಿಮ್ಮ ಸಖಿಯ ಮನೋಭಿ ಲಾಷೆಯು! ಈಕೆಯು ಸುಕುಮಾರಾಂಗಿಯಾದ ದಿವ್ಯಸುಂದರ ವಿಗ್ರಹ ಳಾದ ರಾಜಪುತ್ರಿ! ಆ ಪರಶಿವನಾದರೋ ಪರಮ ಅಮಂಗಳ ಸ್ವರೂಪಿ ಯು. ಈಕೆಯು ದಿವ್ಯಪುಷ್ಪಹಾರಗಳನ್ನೂ ದಿವ್ಯವಸ್ತ್ರಾಭರಣಗಳನ್ನೂ ದಿವ್ಯ ಗಂಧಪರಿಮಳಗಳನ್ನೂ ಧರಿಸಿ ಶೋಭಿಸುವವಳಾದರೆ, ಆತನು ಮೈ ಕೈಗಳಿಗೆಲ್ಲಾ ಹಾವುಗಳನ್ನು ಸುತ್ತಿಕೊಂಡು, ರುಂಡಮಾಲೆ ರುದ್ರಾಕ್ಷೆ ಗಳನ್ನು ಧರಿಸಿಕೊಂಡು, ಮೈಗೆ ಸ್ಮಶಾನದ ಭಸ್ಮವನ್ನು ಲೇಪಿಸಿಕೊಂಡು ಹುಲಿದೊಗಲನ್ನು ಸುತ್ತಿಕೊಂಡಿರುವ ಅಶುಭಮೂರ್ತಿಯು. ಆಗರ್ಭ

ಶ್ರೀಮಂತಳಾಗಿ ಶೃಂಗಾರ ಪ್ರಾಸಾದಗಳಿಂದ ಸುಮನೋಹರವಾಗಿರುವ ದಿವ್ಯಸೌಧಗಳಲ್ಲಿ ದಾಸದಾಸೀಜನ ಸೇವಿತಳಾಗಿ ವಾಸಿಸುವ ಈ ಸುಕುಮಾರಾಂಗಿಯು, ಭಿಕ್ಷುಕನೂ ಸ್ಮಶಾನವಾಸಿಯೂ ಭೂತಗಣ ಪರಿವೇಷ್ಟಿತನೂ ಆದ ಆ ಮರುಳುಗಳೊಡೆಯನನ್ನು ಏನೆಂದು ಮೆಚ್ಚಿರುವಳೋ ನಾನರಿಯೆ! ವಿವಾಹವಾಗಲು ಕನ್ಯೆಗೆ ವರಸಾಮ್ಯವಿರಬೇಡವೆ? ರೂಪ ವಿಚಾರವಂತಿರಲಿ. ವಧೂವರರಲ್ಲಿ ಗುಣಸಾಮ್ಯವಾದರೂ ಇಲ್ಲದಿದ್ದಲ್ಲಿ ಮುಂದೆ ಅನುಕೂಲ ದಾಂಪತ್ಯವು ಏರ್ಪಡುವ ಮಾರ್ಗವಾವುದು? ಈ ಅನುಚಿತ ವಿಚಾರವನ್ನು ಹೃದಯದಿಂದ ಕಿತ್ತೊಗೆದು, ಪರಮ ಸುಂದರರೂ ಶೃಂಗಾರಪ್ರಿಯರೂ, ಭೋಗೇಚ್ಛೆಯುಳ್ಳವರೂ ಆದ ದೇವಗಂಧರ್ವಾದಿಗಳಲ್ಲಿ ಅನುರೂಪನಾದ ಯಾವನಾದರೊಬ್ಬನನ್ನು ವರಿಸಲಿ! ನವಯೌವನವತಿಯಾದ ಈ ರಾಜಪುತ್ರಿಯು ವೈರಾಗ್ಯಚಕ್ರವರ್ತಿಯೂ ಭಿಕ್ಷುಕ ಸಾರ್ವಭೌಮನೂ ಆದ ಆತನನ್ನು ಕಟ್ಟಿಕೊಂಡು ಏನು ಸುಖ......... ....' ಎಂದು ಮುಂತಾಗಿ ನುಡಿಯುತ್ತಿದ್ದನು.

ಆ ಕಪಟ ಬ್ರಹ್ಮಚಾರಿಯು ಮಾತನಾಡುವುದಕ್ಕೆ ಆರಂಭಿಸಿದಾಗಿನಿಂದಲೂ ಮನಸ್ಸಿನಲ್ಲಿ ಅಸಮ್ಮತಿಯನ್ನೇ ಪ್ರಕಟಿಸುತ್ತಾ, ಪ್ರಕಾಶವಾಗಿ ಆತನಿಗೆ ವಿರೋಧಹೇಳಿ ಅಪರಿಚಿತನಾದ ಅತಿಥಿಗೆ ಏಕೆ ಮನನೋಯಿಸಬೇಕೆಂದೆಣಿಸಿದ್ದ ಪಾರ್ವತಿಯು-ಮುಂದೆ ಆತನ ಆ ಅಸಂಬದ್ಧ ಪ್ರಲಾಪಗಳನ್ನು ಕೇಳಲಾರದೆ, ತನ್ನ ಸಖಿಯರನ್ನು ಗದರಿಸಿಕೊಂಡು, ಆತನು ಮಾತನಾಡುತ್ತಿದ್ದಾಗಲೇ ನಡುವೆ ಬಾಯಿಹಾಕಿ-'ಸಾಕುಸಾಕು, ಇನ್ನು ಬಹಳವಾಯಿತು. ಮುಂದೆ ಈ ದುರ್ವಾರ್ತೆಗಳನ್ನು ಸಹಿಸಲಾಗದು. ಶಾಂತಂ ಪಾಪಂ, ಎಂದು ಸಖಿಯರಕಡೆ ತಿರುಗಿ ಬೇಸರಗೊಂಡು,-'ಎಲೆ ಸಖಿಯರಿರಾ, ಈತನಾರು! ಮಹಾಮಹಿಮನಾದ ಪರಶಿವನ ವಿಚಾರವನ್ನು ಈತನು ಏನೆಂದು ತಿಳಿದಿರುವನು? ಎಷ್ಟು ತಿಳಿದಿರುವನು? ತ್ರಿಲೋಕೇಶ್ವರನೂ ಭುಜಗಭೂಷಣನೂ ಭಸ್ಮವಿಲೇಪಿತ ಮಂಗಳಾಂಗನೂ ಸ್ಮಶಾನವಾಸಿಯೂ ರುಂಡಮಾಲಾಲಂಕೃತನೂ ಆದ ಆ ಶಂಕರನ ಮಹಿಮೆಯು ಹುಲುಮಾನವರಿಗೇನು ತಿಳಿಯುವುದು? ಅಜೇಯವಾದ, ನಿತ್ಯವಾದ, ಅವ್ಯಯವಾದ ಯೋಗೈಶ್ವರ್ಯದಿಂದ ಕೂಡಿ ತ್ರಿಲೋಕವಂದ್ಯನಾದ ಆ ಜಗತ್ಪ್ರಭುವಿನ

ಚರಿತ್ರೆಯನ್ನು ತಿಳಿಯಲಾರದವರು ಆತನನ್ನು ಹೀಗೆಲ್ಲ ನಿಂದಿಸುವುದು ಸ್ವಾಭಾವಿಕವು. ಸೃಷ್ಟಿಸ್ಥಿತಿಲಯಾಧಿಕಾರಿಗಳಲ್ಲಿ ಒಬ್ಬನಾಗಿ, ಸಮಸ್ತದೇವ ಕುಲದಿಂದಲೂ ಕೈಯೆತ್ತಿ ವಂದಿಸಿಕೊಳ್ಳುತ್ತಿರುವ ದೇವೋತ್ತಮನಾದ ಪರಮೇಶ್ವರನನ್ನು ಈ ಅಪ್ರಬುದ್ಧನು ಭಿಕ್ಷುಕನೆಂದು ಮುಂತಾಗಿ ನಿರಂಕುಶತೆಯಿಂದ ದೂಷಿಸುತ್ತಿರುವನಲ್ಲ. ಇದನ್ನು ನಾವು ಕೇಳಿ ಸಹಿಸಬಹುವೆ? ಶಿವನಿಂದೆಯನ್ನು ಕೇಳುವುದು ಅಧಿಕ ಪಾಪಸಾಧನವು. ಅತಿಥಿಯಾದ ಈತನಿಗೆ ಸತ್ಕಾರಮಾಡಿ ಕಳುಹಿಸಿಬಿಡಬೆ ಈತನೊಂದಿಗೆ ಸಂಭಾಷಣಗೆ ತೊಡಗದಿರೇಕೆ? ನಡೆಯಿರಿ. ಇನ್ನಿಲ್ಲಿ ನಿಲ್ಲಲಾಗದು!' ಎಂದು ನುಡಿದು ಅತಿಶಯ ವಿಷಾದ ಮನೋಭಾವದಿಂದ ಬೇರೆಡೆಗೆ ಹೋಗಲು ಹೊರಟಳು.

ಆಕೆಯ ಮನೋದಾರ್ಢ್ಯವನ್ನು ಪರೀಕ್ಷಿಸಲೆಳಸಿ ತಾನಾಡಿದ ಮಾತುಗಳು ಆಕೆಯ ಮನಸ್ಸಿಗೆ ವಿಶೇಷ ಆಯಾಸವನ್ನುಂಟು ಮಾಡಿದುವೆಂದು ವಟುರೂಪಧಾರೀ ಶಂಕರನು ತಿಳಿದನು. ಇನ್ನು ಆಕೆಯನ್ನು ಹೆಚ್ಚು ತಾಪಗೊಳಿಸದೆ ಸಮಾಧಾನಗೊಳಿಸಬೇಕೆಂದು ಇಚ್ಛೆಯಾಯಿತು. ಸ್ಥಳಾಂತರವನ್ನು ಕುರಿತು ಹೋಗಬೇಕೆಂದು ಹೊರಟ ಆಕೆಯ ಕೈಹಿಡಿದು ನಿಲ್ಲಿಸಿದನು. ವಟುರೂಪಧಾರಿಯಾದ ಆ ಅಪರಿಚಿತನು ಅತ್ಯಾಚಾರಕ್ಕೆ ತೊಡಗಿ ಅಕಸ್ಮಾತ್ತಾಗಿ ತನ್ನ ಕೈಹಿಡಿದುದನ್ನು ತಿಳಿದು ಪಾರ್ವತಿಯು ಭಯವಿಷಾದಗಳಿಂದ ಆತನ ಕಡೆಗೆ ತಿರುಗಿನೋಡಿದಳು. ಆಶ್ಚರ್ಯವಾಶ್ಚರ್ಯವು! ಆವರೆಗೆ ಅಲ್ಲಿ ನಿಂತಿದ್ದ ಬ್ರಹ್ಮಚಾರಿಯು ಅದೃಶ್ಯನಾಗಿ ಆ ಸ್ಥಳದಲ್ಲಿ ಚಂದ್ರಚೂಡನೂ, ಗಂಗಾಧರನೂ, ವಿಭೂತಿ ರುದ್ರಾಕ್ಷಿಮಾಲೆಗಳಿಂದ ಅಲಂಕೃತನಾದ ದಿವ್ಯಮಂಗಳ ವಿಗ್ರಹನೂ, ಗಜಚರ್ಮಾಂಬರಧಾರಿಯೂ ಆದ ಪರಮೇಶ್ವರನು, ತನ್ನ ಹಸ್ತವನ್ನು ಹಿಡಿದು ನಿಂತಿದ್ದುದನ್ನು ಪಾರ್ವತಿಯು ಕಂಡಳು. ಒಡನೆ, ಲಜ್ಜೆಯಿಂದಲೂ ಭಯದಿಂದಲೂ ಆಕೆಯ ಮುಖವು ತಗ್ಗಿತು. ಆ ಸ್ಪರ್ಶದಿಂದ ಆಕೆಯ ದೇಹವೆಲ್ಲವೂ ಪುಳಕಗೊಂಡು ರೋಮಾಂಚವಾಯಿತು. ಅಷ್ಟುದಿನದ ತಪಸ್ಸು ಸಾರ್ಥಕವಾಯಿತೆಂಬ ಸಂತೋಷದಿಂದ ಆನಂದಬಾಷ್ಪಗಳುದುರಿದುವು. ತಮ್ಮ ಸಖಿಯ ಇಷ್ಟಾರ್ಥಸಿದ್ಧಿಯಾದುದಕ್ಕಾಗಿ ಪಾರ್ವತಿಯ ಸಖಿಯರೂ ಪರಮ ಸಂತುಷ್ಟರಾದರು.

ಒಡನೆ ಇನ್ನು ಸಾವಕಾಶವೇಕೆಂದು ಅರಮನೆಗೆ ನಡೆದು ಹಿಮವಂತ ಮೇನಕಾದೇವಿಯರಿಗೆ ಆ ಶುಭವಾರ್ತೆಯನ್ನು ನಿವೇದಿಸಿದರು.



## ಅಧ್ಯಾಯ ೬. 'ಗಿರಿಜಾಕಲ್ಯಾಣ ಮಹೋತ್ಸವ'

'ದೇವೀ ಗಿರಿಜಾ, ಕಠಿಣ ತಪಶ್ಚರ್ಯದಿಂದ ಬಹು ಆಯಾಸಪಟ್ಟೆ! ಇಷ್ಟುಕಾಲವಿಲಂಬಮಾಡಿದ ನನ್ನನ್ನು ಕ್ಷಮಿಸು. ಎಲೆ ಮನೋಹಾರಿಣೀ ಇದೋ ನಿನ್ನ ಪವಿತ್ರಪ್ರೇಮ, ಪ್ರಬಲತಮನಿಷ್ಠೆ, ಅಸ್ಖಲಿತ ತಪಶ್ಚರ್ಯ, ನನ್ನಲ್ಲಿಟ್ಟಿದ್ದ ದೃಢತರ ವಿಶ್ವಾಸ ಇವುಗಳಿಗೆ ಬಲಿಯಾಗಿ ನಾನು ಇಂದು ನನ್ನ ತೀವ್ರ ವೈರಾಗ್ಯಕ್ಕೆ ತಿಲಾಂಜಲಿಯಿತ್ತು, ನಿನಗೋಸ್ಕರವಾಗಿ ಗೃಹಸ್ಥಧರ್ಮ ಸ್ವೀಕಾರಮಾಡಲು ಸಿದ್ಧನಾಗಿ ಬಂದಿದ್ದೇನೆ. ಚಾರುಮಂಗಳಗಾತ್ರೀ, ಇನ್ನು ನನ್ನನ್ನು ಗಾಂಧರ್ವವಿವಾಹ ವಿಧಿಯಿಂದ ವರಿಸಿ, ನನ್ನ ಮನಸ್ಸಿಗೆ ಹರ್ಷವನ್ನುಂಟುಮಾಡು. ಇನ್ನುಮೇಲೆ ನಿನ್ನ ವಿಯೋಗದಿಂದ ಜೀವಿಸುವುದು ನನ್ನಿಂದಾಗದು' ಎಂದು ನುಡಿದನು. ಕರ್ಣಾನಂದಕರಗಳಾದ ಶಂಕರನ ಆ ಮಾತುಗಳನ್ನು ಕೇಳುತ್ತಿದ್ದಂತೆ ಪಾರ್ವತಿಯ ಕಣ್ಣುಗಳಿಂದ ಆನಂದಬಾಷ್ಪವು ಧಾರಾಳವಾಗಿ ಹರಿದು ಸುರಿದುಹೋಯಿತು. ಆಕೆಯ ಮನಸ್ಸಿನಲ್ಲುಂಟಾದ ಭಾವೋದ್ರೇಕವನ್ನು ಮಾತುಗಳಿಂದ ವ್ಯಕ್ತಗೊಳಿಸಲು ಸಾಧ್ಯವಾಗದೆ, ಸತೀಮಣಿಯಾದ ಆಕೆಯು, ಕೇವಲ ತನ್ನ ನೋಟವೊಂದರಿಂದಲೇ ತನ್ನ ಮನೋಭಾವವನ್ನು ಪ್ರಕಟಿಸಿ, ಹಸನ್ಮುಖದಿಂದ ಕೈಬಿಡಿಸಿಕೊಂಡು, ಪಾದಾಭಿವಾದನಮಾಡಿ-'ಪ್ರಭೋ ಜೀವಿತೇಶ, ದಾಸಿಯಾದ ನನ್ನೀ ಮನೋವಾಂಛಿತವನ್ನು ಪೂರ್ಣಗೊಳಿಸಲು ಇಷ್ಟುದಿನಗಳ ಮೇಲಾದರೂ ಕರುಣಾಳುವಾದ ತಮಗೆ ಇಚ್ಛೆಯುಂಟಾಯಿತಲ್ಲ.— ಅದು ನನ್ನ ಸೌಭಾಗ್ಯವಲ್ಲವೆ? ಅದಕ್ಕಾಗಿ ತಮ್ಮ ಪಾದಕ್ಕೆ ವಿಶೇಷ ಕೃತಜ್ಞಳಾಗಿದ್ದೇನೆ. ಇಷ್ಟುಕಾಲ ಮಾಡಿದ ತಪಸ್ಸು ಸಾರ್ಥಕವಾಯಿತು. ಗಾಂಧರ್ವವಿವಾಹ ಪದ್ಧತಿಯಿಂದ ವರಿಸಲು ಆಕ್ಷೇಪವಿಲ್ಲ. ಆದರೆ, ನನಗೆ

ಪೂಜ್ಯರಾದ ಮಾತಾಪಿತೃಗಳದ್ವಾರೆಯಾಗಿ ಅವರಿಂದ ಕನ್ಯಾದಾನ ಪೂರ್ವಕ ನನ್ನನ್ನು ಸ್ವೀಕಾರಮಾಡುವುದು ಉತ್ತಮವೆಂದು ಅಭಿಪ್ರಾಯಪಡುತ್ತೇನೆ. ಈ ವಿಷಯದಲ್ಲಿ ಅನ್ಯಥಾ ಯೋಚಿಸಬಾರದು. ಮನ್ನಿಸಬೇಕು' ಎಂದು ಪ್ರಾರ್ಥಿಸಿದಳು. ಶಂಕರನಿಗೂ ಆ ಮಾತು ಸಮಂಜಸವೆಂದು ತೋರಿತು. ಹಾಗಾಗಲೆಂದನು. ತರುವಾಯ ಎಲ್ಲರೂ ಸ್ವಸ್ಥಾನಗಳನ್ನು ಕುರಿತು ಹೊರಟು ನಡೆದರು.

ತಮ್ಮ ಕನ್ಯೆ ಪಾರ್ವತೀದೇವಿಯು ದುರ್ಜಯನಾದ ಪರಶಿವನ ಹೃದಯವನ್ನು ಸ್ವಾಧೀನಪಡಿಸಿಕೊಂಡಳೆಂಬ ವಾರ್ತೆಯನ್ನು ಕೇಳಿದ ಹಿಮವಂತ ಮೇನಕೆಯರು ಪರಮ ಸಂಭ್ರಮದಿಂದ ಆಕೆಯನ್ನು ಅರಮನೆಗೆ ಕರೆದು ತರಬೇಕೆಂದು ಯೋಚಿಸಿದರು. ಅಷ್ಟರಲ್ಲಿ ಆಕೆಯೇ ಸಖಿಯರೊಂದಿಗೆ ಹೊರಟು ಕೃತಕೃತ್ಯಳಾದುದರಿಂದ ಮುಖದಲ್ಲಿ ಮಂದಹಾಸವು ಸೂಸುತ್ತಿರಲು, ಮಂದಗಮನದಿಂದ ನಡೆದು ಬಂದು ಮಾತಾಪಿತೃಗಳೀರ್ವರಿಗೂ ನಮಸ್ಕರಿಸಿದಳು. ಮಹರ್ಷಿಜನಗಳಿಗೂ ದುರ್ಘಟವಾದ ಅಗಾಧ ತಪಶ್ಚರ್ಯದಿಂದ, ದೇಹವು ಬಾಡಿಹೋಗಿ ಕಳೆಗುಂದಿದ್ದ ತಮ್ಮ ಮುದ್ದು ಕುವರಿಯನ್ನು ಮಾತಾಪಿತೃಗಳೀರ್ವರೂ ತೆಗೆದೆತ್ತಿ ಆಲಂಗಿಸಿ, ಶಿರಸ್ಸನ್ನಾಘ್ರಾಣಿಸಿ ಬಹು ಪರಿಯ ಉಪಚಾರೋಕ್ತಿಗಳಿಂದ ಆದರಿಸಿದರು. ಸಖಿಯರು, ಪಾರ್ವತಿಯು ಕೈಕೊಂಡು ಈಡೇರಿಸಿದ ಕಠಿಣತರ ತಪಸ್ಸಿನ ಪರಿಯನ್ನೂ, ಕೊನೆಯಲ್ಲಿ ಶಂಕರನೇ ವಟುರೂಪದಲ್ಲಿ ಬಂದು, ಶಿವನನ್ನು ನಿಂದಿಸಿ ತನ್ಮೂಲಕ ಆಕೆಯ ಅಂತಃಕರಣವನ್ನು ಪರೀಕ್ಷಿಸಿದುದನ್ನೂ, ಕಥೆಯಂತೆ ವಿವರಿಸಿ ಹೇಳುತ್ತಿದ್ದರು.

ಹೀಗೆ ಇವರು ಸಂತೋಷದಲ್ಲಿ ಮಾತುಕಥೆಗಳನ್ನಾಡುತ್ತ ಕಾಲಕಳೆಯುತ್ತಿದ್ದ ವೇಳೆಯಲ್ಲೇ, ಅತ್ತ ಪರಮೇಶ್ವರನು, ಸಪ್ತರ್ಷಿಗಳನ್ನು ಪ್ರೇರಿಸಿ, ಹಿಮಗಿರೀಂದ್ರನಲ್ಲಿಗೆ-ತನಗೋಸ್ಕರ ಕನ್ಯಾಯಾಚನೆಗಾಗಿ ಕಳುಹಿಸಿದನು. ಅವರೆಲ್ಲರೂ ಮನೋವೇಗದಿಂದ ಹಿಮಗಿರೀಶನ ರಾಜಧಾನಿಯಾದ ಓಷಧಿಪ್ರಸ್ಥನಗರದ ಬಹಿರ್ದ್ವಾರದಲ್ಲಿ ಬಂದು ನಿಂತು, ತಮ್ಮ ಬರುವಿಕೆಯನ್ನು ಕುರಿತು ಹೇಳಿಕಳುಹಿಸಿದರು. ಹಿಮವಂತನು ಪರಮ ಸಂಭ್ರಮಯುಕ್ತನಾಗಿ ಭಯಭಕ್ತಿಯಿಂದ ನಡೆದುಹೋಗಿ, ಕಶ್ಯಪ, ಅತ್ರಿ, ಭಾರ

ದ್ವಾಜ, ವಿಶ್ವಾಮಿತ್ರ, ಗೌತಮ, ಜಮದಗ್ನಿ, ವಸಿಷ್ಠರೆಂಬ ಸಪ್ತರ್ಷಿಗಳನ್ನೂ ವಸಿಷ್ಠಪತ್ನಿಯಾದ ಸಾಧ್ವೀಮಣಿ ಅರುಂಧತೀ ದೇವಿಯನ್ನೂ, ಬೇರೆಬೇರೆಯಾಗಿ ವಂದಿಸಿ, ಉಚಿತವಚನಗಳಿಂದ ಆದರಿಸಿ, ಗೌರವಿಸಿ ಅರಮನೆಗೆ ಕರೆತಂದು ಉಚಿತಾಸನಗಳನ್ನಿತ್ತು ಕೂರಿಸಿದನು. ತರುವಾಯ ಪತ್ನಿಯೊಡಗೂಡಿ ಎಲ್ಲರಿಗೂ ಅರ್ಘ್ಯಪಾದ್ಯಾಚಮನಗಳನ್ನಿತ್ತು ಷೋಡಶೋಪಚಾರಗಳಿಂದ ಸತ್ಕರಿಸಿ,-'ಮಹನೀಯರೇ, ಪೂಜ್ಯರಾದ ತಾವು ಪರಮಾನುಗ್ರಹಮಾಡಿ ನಮ್ಮ ಮನೆಗೆ ಬಿಜಯಮಾಡಿದುದರಿಂದ ನನ್ನ ಪಿತೃಪಿತಾಮಹರೆಲ್ಲರೂ ಸದ್ಗತಿಸೇರಿದರು. ನನ್ನ ವಂಶವೇ ಪಾವನವಾಯಿತು. ನನ್ನೀ ಗೃಹವೂ ರಾಜಧಾನಿಯೂ ತಮ್ಮ ಪಾದಧೂಳಿಯಿಂದ ಪಾವನವಾದುವು. ನಾನು ಯಾವ ಬಗೆಯಿಂದ ತಮ್ಮ ಸೇವೆಮಾಡಿ ಧನ್ಯನಾಗಲಿ?' ಎಂದು ಬಿನ್ನವಿಸಿಕೊಂಡನು. ಅದನ್ನು ಕೇಳಿ ಆ ಮಹರ್ಷಿಗಳೆಲ್ಲರ ಪರವಾಗಿ ಕಶ್ಯಪರು-'ಪರ್ವತೇಶ್ವರಾ, ತಪೋನಿಧಿಯಾದ ಶಂಕರನು ಲೋಕಕ್ಷೇಮಚಿಂತನೆಯಿಂದ ತನ್ನ ತೀವ್ರತರ ವೈರಾಗ್ಯವನ್ನು ಬದಿಗಿಟ್ಟು ಗೃಹಸ್ಥಧರ್ಮಸ್ವೀಕಾರಮಾಡಲು ಸಂಕಲ್ಪಿಸಿದ್ದಾನೆ. ನಿನ್ನ ಸುಪುತ್ರಿ ಪಾರ್ವತೀದೇವಿಯು ವಿವಾಹಯೋಗ್ಯವಯಸ್ಕಳಾಗಿದ್ದಾಳೆಂಬ ಸಂಗತಿಯನ್ನು ಕೇಳಿ ಆಕೆಯನ್ನು ಪರಶಿವನಿಗಾಗಿ ಯಾಚಿಸಲು ಬಂದಿದ್ದೇವೆ. ಪರೋಪಕಾರನಿರತನಾದ ನೀನು ದೊಡ್ಡಮನಸ್ಸುಮಾಡಿ ನಿನ್ನೀ ಕುವರಿಯನ್ನು ಆತನಿಗೆ ವಿವಾಹವಾಗಲಿತ್ತು ಲೋಕಕ್ಷೇಮ ಕಾರ್ಯದಲ್ಲಿ ಸಹಾಯಕರಾಗಬೇಕು' ಎಂದು ಪ್ರಾರ್ಥಿಸಿದರು. ಹಿಮಗಿರೀಂದ್ರ ಮೇನಕೆಯರು ಆ ಮಾತಿಗೆ ಒಪ್ಪಿದರೆಂದು ಹೇಳಬೇಕಾದುದೇನು! ಮೇನಕಾದೇವಿಯು ಪಾರ್ವತಿಯನ್ನು ಕುರಿತು-'ಮಗೂ ಪಾರ್ವತೀ, ದೇವದೇವನಾದ ಶಂಕರಮೂರ್ತಿಯನ್ನು ವಿವಾಹವಾಗಲು ನಿನಗೆ ಒಪ್ಪಿಗೆಯುಂಟಲ್ಲವೆ?' ಎಂದು ವಿನೋದಕ್ಕಾಗಿ ಪ್ರಶ್ನಿಸಲು, ಗಿರಿಜೆಯು ಲಜ್ಜಾಭಾರದಿಂದ ಹಸನ್ಮುಖಿಯಾಗಿ ಮೌನದಿಂದಲೇ ತನ್ನ ಸಮ್ಮತಿಯನ್ನು ಸೂಚಿಸಿದಳು. ತರುವಾಯ ಅಂದಿಗೆ ನಾಲ್ಕನೆಯ ದಿವಸವೇ ವಿವಾಹ ಮಂಗಳಕಾರ್ಯವು ನಡೆಯತಕ್ಕುದೆಂದು ನಿಶ್ಚಯಿಸಿಕೊಂಡು ಸಪ್ತರ್ಷಿಗಳೂ ಅರುಂಧತೀ ದೇವಿಯೂ ಆ ಸಂಗತಿಯನ್ನು ಈಶ್ವರನಿಗೆ ತಿಳಿಸುವುದಕ್ಕಾಗಿ ಕೈಲಾಸವನ್ನು ಕುರಿತು ನಡೆದರು.

ಇತ್ತ ಓಷಧಿಪ್ರಸ್ಥನಗರದಲ್ಲಿ ವಿವಾಹ ಮಂಗಳಕಾರ್ಯಕ್ಕಾಗಿ ಆವಶ್ಯಕವಾದ ಸನ್ನಾಹಗಳೆಲ್ಲವೂ ಬಹು ಆತುರದಿಂದ ನಡೆಯತೊಡಗಿದುವು. ನಗರವು ಬಹು ಶೀಘ್ರಕಾಲದಲ್ಲೀ ಮಂಟಪ ತೋರಣ ಪತಾಕೆಗಳಿಂದ ಅಲಂಕೃತವಾಯಿತು. ರಾಜಮಾರ್ಗಗಳೆಲ್ಲವೂ ಪನ್ನೀರು ಚಿಮುಕಿಸಿ ಧೂಳಡಗಿಸಲ್ಪಟ್ಟುವು. ಮನೆಗಳು ಸುಣ್ಣ ಕಾರಣೆ ತೋರಣಗಳಿಂದ ಸಿಂಗರಿಸಲ್ಪಟ್ಟುವು. ದೇವಶಿಲ್ಪಿಯಾದ ವಿಶ್ವಕರ್ಮನೇ ವಿವಾಹಮಂಟಪವನ್ನು-ಸುರೇಂದ್ರಸಭೆಯನ್ನು ನಾಚಿಸುವಷ್ಟು ಅಂದವಾಗಿ ನಿರ್ಮಿಸಿದನು. ಗಿರೀಶನ ಆಹ್ವಾನದಿಂದ ದೇಶದೇಶಗಳ ರಾಜಾಧಿರಾಜರೂ ಮಹಾಮಹಿಮರಾದ ಮುನಿಪುಂಗವರೂ, ವಿದ್ವಾಂಸರೂ ತೇಜಃಪುಂಜರೂ ಆದ ಭೂಸುರೋತ್ತಮರೂ ದೂರದೇಶಗಳಿಂದಲೂ ಹೊರಟು ಬಂದು ಗಿರಿರಾಜನ ರಾಜಧಾನಿಯಲ್ಲಿ ವಿಶ್ರಮಿಸಿಕೊಳ್ಳುತ್ತಿದ್ದರು. ಅತ್ತ ಸಪ್ತರ್ಷಿಗಳ ಸಂದೇಶವನ್ನು ಕೇಳಿದ ಪರಶಿವನ ಅಪೇಕ್ಷೆಯನ್ನನುಸರಿಸಿ ವಿವಾಹಕ್ಕೆ ಹೊರಡಲು ಸನ್ನಾಹಕಾರ್ಯವು ನಡೆಯಲಾರಂಭವಾಯಿತು. ಲಕ್ಷ್ಮೀ ನಾರಾಯಣರೂ, ಬ್ರಹ್ಮ ಸರಸ್ವತಿಯರೂ ತಮ್ಮ ವಾಹನಗಳನ್ನೇರಿ ಪರಿವಾರಯುಕ್ತರಾಗಿ ಕೈಲಾಸಗಿರಿಗೆ ಬಂದು ಸೇರಿದರು. ಇಂದ್ರಾದಿ ಅಷ್ಟದಿಕ್ಪಾಲಕರೂ ತಮ್ಮ ತಮ್ಮ ಸತೀಸುತ ಪರಿವಾರಗಳೊಂದಿಗೆ ದಿವ್ಯವಸ್ತ್ರಾಭರಣ ವಿಭೂಷಿತರಾಗಿ ಬಂದು ನೆರೆದರು. ಗಂಧರ್ವ ಕಿನ್ನರ ಯಕ್ಷರೂ-ಸಿದ್ಧರೂ, ಭೂತಗಣಗಳೂ ಬಂದು ನೆರೆದುವು. ಎಲ್ಲರೂ ನಂದಿವಾಹನನಾದ ಪರಶಿವನೊಂದಿಗೆ ಮೆರೆವಣಿಗೆಯಾಗಿ ಹೊರಟು ಓಷಧಿಪ್ರಸ್ಥರಾಜಧಾನಿಯನ್ನು ಕುರಿತು ಪ್ರಯಾಣವಾದರು.

ಗಿರಿರಾಜನು ತನ್ನ ನಗರದ ರಾಜದ್ವಾರದಲ್ಲಿ ಕಾದಿದ್ದು ಸಕಲರನ್ನೂ ಎದುರುಗೊಂಡು ಉಚಿತರೀತಿಯಿಂದ ಗೌರವಿಸಿದನು. ವರಶ್ರೇಷ್ಠನಾದ ಶಂಕರನನ್ನು ವಿಧ್ಯುಕ್ತರೀತಿಯಿಂದ ಪೂಜಿಸಿ ಕರೆತಂದು ವಿವಾಹವೇದಿಕೆಯಲ್ಲಿ ಕೂರಿಸಿದರು. ಭಸ್ಮಲೇಪಿತ ಮಂಗಳಗಾತ್ರನೂ, ಚಂದ್ರಚೂಡನೂ ಆದ ಗಂಗಾಧರನು, ಬಾಸಿಂಗವನ್ನು ಕಟ್ಟಿಕೊಂಡು, ಹಸೆಮಣೆಯಲ್ಲಿ ಅಪೂರ್ವ ತೇಜಸ್ಸಂಪನ್ನನಾಗಿ ಪ್ರಕಾಶಿಸಿದನು. ಅತ್ತ ಮೇನಕೆಯೂ ಪರಮ ಸಂಭ್ರಮದಿಂದ ತ್ರಿಲೋಕ ಸುಂದರಿಯಾದ ಗೌರಿದೇವಿಯನ್ನು

ರತ್ನಾಭರಣ ದಿವ್ಯದುಕೂಲಾದಿಗಳಿಂದ ಸಿಂಗರಿಸಿ ಕರೆತಂದು ಹಸೆಮಣೆಯ ಮೇಲೆ ಕೂರಿಸಿದಳು. ದೇವದುಂದುಭಿಗಳು ಮೊಳಗಿದುವು. ಹರಿಬ್ರಹ್ಮಾದಿಗಳ ಸಮ್ಮುಖದಲ್ಲಿ ವಿವಾಹ ಮಂಗಳಕಾರ್ಯವು ವಿಧ್ಯುಕ್ತ ರೀತಿಯಲ್ಲಿ ನಡೆದುಹೋಯಿತು. ಮಹರ್ಷಿಗಳ ಜಯಜಯಕಾರವೂ, ಸುಮಂಗಲೆಯರ ಮಂಗಳಕರ ಗೀತಗಳೂ, ನೆರೆದ ಸಕಲ ಜನರ ಶುಭೋದ್ಗಾರಗಳೂ ಕಿವಿಗಳನ್ನು ಕಿವುಡಾಗಿಸುತ್ತಿರುವಲ್ಲಿ,-ಅಂತರಿಕ್ಷದಿಂದ ದೇವತೆಗಳು ಅವಿರಳ ಪುಷ್ಪವರ್ಷವನ್ನು ಸುರಿಸುತ್ತಿರುವಲ್ಲಿ, ಉಮಾದೇವಿಯು ತನ್ನ ಕೈಯಲ್ಲಿದ್ದ ಪರಿಮಳ ಪುಷ್ಪಹಾರವನ್ನು ಶಂಕರನ ಭವ್ಯವಾದ ಕಂಠಪ್ರದೇಶದಲ್ಲಿ ಸಮರ್ಪಿಸಿದಳು. ಸಕಲರೂ ಪರಮಾನಂದಗೊಂಡರು.--ವಧೂವರರನ್ನು ಕಣ್ಣಾರೆ ನೋಡಿ, ತಮ್ಮ ಜನ್ಮಗಳು ಸಫಲವಾದುವೆಂದುಕೊಂಡರು. ಗಿರಿಜೆಯೂ ಶಂಕರನೂ, ಗಿರಿರಾಜನೂ ಮೇನಕೆಯೂ, ದೇವೇಂದ್ರಾದಿಗಳೂ ಹೀಗೆ ಅಂದು ಅಲ್ಲಿ ನೆರೆದಿದ್ದ ಸಕಲರೂ ತಮ್ಮ ತಮ್ಮ ಮನೋಭೀಷ್ಟಗಳನ್ನು ಪಡೆದು ಮಹದಾನಂದಗೊಂಡರು. ಈ ಗಿರಿಜಾಕಲ್ಯಾಣವು ತಾರಕಾಸುರನ ವಧೆಯಿಂದ ತ್ರಿಲೋಕ ಕ್ಷೇಮವನ್ನುಂಟುಮಾಡಿ ಶಾಂತಿಸ್ಥಾಪನೆಗೆ ಮೂಲಕಾರಣವಾಗಲೆಂದು ದೇವತೆಗಳು ಹಾರೈಸಿದರು. ಮಹರ್ಷಿಗಳು ಆಶೀರ್ವದಿಸಿದರು. ಸಕಲರೂ ಜಯಜಯವೆಂದರು. ವಿವಾಹ ಮಂಗಳಕಾರ್ಯವು ಸಾಂಗವಾಗಿ ನೆರವೇರಿದ ತರುವಾಯ ಸಕಲರೂ ಪರಮಾನಂದಗೊಂಡು ತಮ್ಮ ತಮ್ಮ ಸ್ವಸ್ಥಾನಗಳಿಗೆ ಪ್ರಯಾಣಮಾಡಿದರು.

## ಉಪಸಂಹಾರ.

ಪಾರ್ವತಿಯು ತನ್ನ ಪತಿಯಾದ ಪರಮೇಶ್ವರನನ್ನು ಬಹುಪರಿಯಿಂದ ಸೇವಿಸಿ ಮನವೊಲಿಸಿಕೊಂಡಳು. ಶಂಕರನು ಕೆಲವುದಿನಗಳು ಮಾವನ ಮನೆಯಲ್ಲಿದ್ದು ತರುವಾಯ ಪತ್ನೀಪರಿವಾರ ಸಮೇತನಾಗಿ ಪ್ರಯಾಣ ಮಾಡಿ ಕೈಲಾಸಗಿರಿಯನ್ನು ಸೇರಿದನು. ಹಿಂದೆ ದಾಕ್ಷಾಯಣೀದೇವಿಯ ನಷ್ಟದಿಂದ ಶೋಭಾಹೀನವಾಗಿದ್ದ ಕೈಲಾಸಗೃಹವು-ಇಂದು ಪಾರ್ವತೀ

ದೇವಿಯ ಆಗಮನದಿಂದ ಪುನಃ ಸುಶೋಭಿತವಾಯಿತು. ಶಂಕರಮೂರ್ತಿಯು ಗೃಹಸ್ಥಧರ್ಮದಲ್ಲಿ ತನ್ನ ಪತ್ನಿ ಪಾರ್ವತೀದೇವಿಯೊಡಗೂಡಿ, ಸುಮೇರು, ಮಂದರಾಚಲ, ಮಲಯಾಚಲ, ನಂದನವನ ಮುಂತಾದ ಸ್ಥಳಗಳಲ್ಲಿ ವಿಹಾರಮಾಡಿ ಆನಂದಿಸಿದನು. ಯಥಾಕಾಲದಲ್ಲಿ ಪಾರ್ವತೀದೇವಿಯ ಪುಣ್ಯಗರ್ಭದಲ್ಲಿ ಪುತ್ರರತ್ನವೊಂದು ಉದಯಿಸಿತು. ಆ ಶಿಶುಜನನದಿಂದಲೇ ತಮ್ಮ ಕಷ್ಟನಿವೃತ್ತಿಯಾಗುವುದೆಂಬುದನ್ನು ಎದುರುನೋಡಿಕೊಂಡಿದ್ದ ದೇವತೆಗಳು, ದೇವದುಂದುಭಿಗಳನ್ನು ಬಾಜಿಸಿ ಪುಷ್ಪವರ್ಷವನ್ನು ಸುರಿಸಿ ಗಂಧರ್ವಗಾನದಿಂದ ಪಾಡಿ ತಮ್ಮ ಸಂತೋಷವನ್ನು ಪ್ರಕಟಿಸಿದರು. ಆ ಶಿಶುವೇ ದಿನದಿನಕ್ಕೆ ದೇವಕುಮಾರನಂತೆ ಬೆಳೆದು ಅಭಿವೃದ್ಧಿಯಾಗಿ-ಷಣ್ಮುಖಸ್ವಾಮಿ, ಸುಬ್ರಹ್ಮಣ್ಯದೇವ, ಸೇನಾನಿ, ಎಂಬ ಮುಂತಾದ ನಾಮಧೇಯಗಳಿಂದ ಪ್ರಸಿದ್ಧನಾಗಿ ತಾರಕಾಸುರನಮೇಲೆ ದೇವಸೈನ್ಯವನ್ನು ನಡೆಯಿಸಿ, ಆ ದೈತ್ಯನನ್ನು ಸಂಹರಿಸಿ ದೇವಕುಲಕ್ಕೂ ಮೂರು ಲೋಕಗಳಿಗೂ ಕ್ಷೇಮವನ್ನುಂಟುಮಾಡಿದ ಮಹಾನುಭಾವನು. ಇಂತಹ ಸುಪುತ್ರನನ್ನು ಪಡೆದು ಲೋಕಕ್ಷೇಮಕ್ಕಾಗಿ ಒಪ್ಪಿಸಿ ಪಾರ್ವತೀದೇವಿಯು ಜಗನ್ಮಾತೆಯೆನ್ನಿಸಿದಳು.

ಇಂದಿನ ಪರಿಸ್ಥಿತಿಯಲ್ಲಿ ಭಾರತೀಯರು, ಪುರಾಣವಾಕ್ಯಗಳನ್ನು ಕೇಳಿ 'ಯುಕ್ತಿಯುಕ್ತವಾಗಿದೆ' ಎಂದು ಮೆಚ್ಚಿಕೊಂಡರಾಗಲೀ, 'ನಮ್ಮ ಹಿರಿಯರು ಮಹಾಮಹಿಮರೆಂ'ದು ಹೆಮ್ಮೆಯನ್ನು ಹೇಳಿಕೊಂಡರಾಗಲೀ, ಅಥವ ಹಲಕೆಲವು ಮಹನೀಯರ ನಾಮಗಳನ್ನು ತುಟಿಬಾಯಿಗಳೊಣಗುವಂತೆ ಜಪಿಸಿದರಾಗಲೀ ಯಾವ ಪ್ರಯೋಜನವೂ ದೊರೆಯಲಾರದು. ಹಿರಿಯರು, ಈ ನಮ್ಮ ಜನ್ಮಭೂಮಿಯನ್ನು ಕರ್ಮಭೂಮಿಯೆಂದು ಕರೆದಿರುವರಲ್ಲವೆ! ನಾವು, ಆ ನಾಮವನ್ನು ಅನ್ವರ್ಥಗೊಳಿಸಬೇಕಾಗಿದೆ. ಹಿಂದಿನವರ ಉದಾಹರಣೆಯನ್ನು ಪುರಾಣಾದಿಗಳಲ್ಲಿ ಕೇಳಿ-ಓದಿ, ಅವರ ಪದಚಿನ್ಹೆಗಳಲ್ಲೇ ಹೆಜ್ಜೆಯನ್ನಿಟ್ಟು ನಡೆದು, ಅವರಂತೆಯೇ ಲೋಕಕ್ಷೇಮಕ್ಕಾಗಿ ಸ್ವಾರ್ಥವನ್ನು ತ್ಯಜಿಸಿ ಶ್ರಮಿಸಬೇಕಾಗಿದೆ. ಜಗತೀವಲಯಕ್ಕೆ ಮಾತಾಪಿತೃಸ್ವರೂಪರಾದ ಪಾರ್ವತೀಪರಮೇಶ್ವರರು, ಮಹೋನ್ನತವೂ, ಮಾನುಷವೃಷ್ಟಿಗಗೋಚರವೂ ಆದ ತಮ್ಮ ಗೌರೀಶಂಕರ ಗೃಹದಿಂದ ನಮ್ಮ

ಭಾರತದೇಶವನ್ನು ಕೃಪಾಕಟಾಕ್ಷವನ್ನಿಟ್ಟು ನೋಡಲಿ! ಭಾರತೀಯರಲ್ಲಿ ಸಕಲ ಕಲ್ಯಾಣಗುಣಗಳೂ ಹೆಚ್ಚು ಪ್ರಮಾಣದಿಂದ ಬೆಳೆವಂತೆ ಅನುಗ್ರಹಿಸಲಿ! ದೇಶವು ಸಕಲ ವಿಧಗಳಿಂದಲೂ ಸರ್ವೋತ್ಕೃಷ್ಟ ಸ್ಥಿತಿಯನ್ನೈದುವುದಕ್ಕೆ ಆವಶ್ಯಕವಾದ ಕಾರ್ಯಗಳನ್ನು ಸಾಧಿಸಲು ಅವರಿಗೆ ಶಕ್ತಿ ಸಾಮರ್ಥ್ಯಾದಿಗಳು ಉಂಟಾಗುವಂತೆ ಆಶೀರ್ವದಿಸಲಿ.

ತಥಾಸ್ತು.

---

ಸುಬೋಧ ಮುದ್ರಣಾಲಯ, ಬೆಂಗಳೂರು ನಗರ.

ಶ್ರೀರಾಮ ಸಹಾಯಂ.

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

## (ಸಚಿತ್ರ ಮಾಸ ಪುಸ್ತಕಾವಳಿ)

**ಮುನ್ನುಡಿ** :—

ಪಂಡರಾಪುರದ ಶ್ರೀ ಪಾಂಡುರಂಗವಿಠಲಸ್ವಾಮಿಯನ್ನು ಆರಾಧಿಸಿದ ಭಕ್ತಶ್ರೇಷ್ಠರೊಳಗೆ ನಮ್ಮ ಚರಿತ್ರನಾಯಕನಾದ ನಾಮದೇವನು ಅಗ್ರಗಣ್ಯರ ತರಗತಿಗೆ ಸೇರಿದವನು. ಈ ಮಹಾನುಭಾವನು ಸ್ವಾಮಿಯೊಂದಿಗೆ ಸಂಭಾಷಣೆ ಮಾಡುತ್ತಿದ್ದನೆಂದು ಮುಂತಾಗಿ ಆತನ ಚರಿತ್ರೆಯಲ್ಲಿ ಉಲ್ಲೇಖಿಸಿದೆ. 'ಮನುಷ್ಯನು ದೇವರೊಂದಿಗೆ ಮಾತನಾಡುವುದೆಂದರೇನು ? — ಇವೆಲ್ಲ ಕೆಲಸಕ್ಕೆ ಬಾರದ ಕಟ್ಟುಕಥೆಗಳು — ಎಲ್ಲಾ ಸುಳ್ಳು'-ಎಂದು ಒಂದೇ ಮಾತಿನಲ್ಲಿ ಹೊಡೆದು ಹಾಕಿಬಿಡುವುದು ಕಠಿಣವಲ್ಲ. ಇದೊಂದು ವಿಚಾರವು ಸ್ಪಷ್ಟವಾಗಿ ವಿಮರ್ಶಿಸಲ್ಪಟ್ಟು ನಿರ್ಧರವಾಗದಿದ್ದರೆ, ಇದರಂತೆಯೇ ಇರುವ ನೂರಾರು ಪೌರಾಣಿಕ ವಿಚಾರಗಳೂ ಸುಳ್ಳೆಂತಲೇ ನಿರ್ಧರವಾಗಿ ಬಿಡುತ್ತವೆ. ಆದುದರಿಂದ ಈ ವಿಷಯವನ್ನು ಕುರಿತು ಸ್ವಲ್ಪಮಟ್ಟಿಗೆ ವಿಚಾರ ನಡೆಯಿಸತಕ್ಕುದು ಅವಶ್ಯಕವೆನ್ನಿಸುತ್ತದೆ.

ಬ್ರಹ್ಮಸೃಷ್ಟಿಯಲ್ಲಿ ಮನುಷ್ಯನೊಬ್ಬನಿಗೆ ಮಾತ್ರವೇ ಬಾಯಿಂದ ಮಾತನಾಡಿ, ತನ್ನ ಮನಸ್ಸಿನಲ್ಲುಂಟಾದ ಭಾವಗಳನ್ನು ವ್ಯಕ್ತಗೊಳಿಸುವ ಸಾಮರ್ಥ್ಯವಿದೆ ಬಾಯಿಂದ ಮಾತನಾಡದೆಯೇ ತಮ್ಮ ಮನಸ್ಸಿನಲ್ಲುಂಟಾಗುವ ಸಂತೋಷ-ವ್ಯಸನ ಭಯ ಉತ್ಸಾಹ ಮುಂತಾದ ಭಾವಗಳನ್ನು ಹಲವು ಬಗೆಯ ಅಂಗಚೇಷ್ಟೆಗಳ ಮೂಲಕ ವ್ಯಕ್ತಗೊಳಿಸುವ ಸಾಮರ್ಥ್ಯವು ಅನೇಕ ಪ್ರಾಣಿಗಳಿಗೆ ಉಂಟೆಂಬುದು ಎಲ್ಲರಿಗೂ ತಿಳಿದ ವಿಷಯವಲ್ಲವೆ? ಆದರೆ ಅದು ಪ್ರಾಣಿವರ್ಗಕ್ಕೆ ಸೇರಿದ ಪಶುಪಕ್ಷಿ ಮೃಗಾದಿಗಳ ಮಾತಾಯಿತು. ಅವು ಹಾಗೆ ಮಾಡುವ ಅಂಗಚೇಷ್ಟೆಗಳ ಮೂಲಕವೇ ಮನುಷ್ಯನು ಅವುಗಳ ಭಾವವನ್ನು ತಿಳಿದುಕೊಳ್ಳಬಹುದೆಂದಮೇಲೆ-ಮೂಕನಾದ ಮನುಷ್ಯನಂತೆ ಅವೂ ಒಂದು ಬಗೆಯಿಂದ ನಮ್ಮೊಂದಿಗೆ ಮಾತನಾಡುತ್ತವೆಯೆಂ

ಹೇ ಗ್ರಹಿಸಬಹುದಷ್ಟೆ ! ಅವು ನಮ್ಮ ಭಾಷೆಯಿಂದ ನಮ್ಮೊಂದಿಗೆ ಮಾತನಾಡಲಾರವು. ತಮ್ಮ ಭಾಷೆಯಿಂದ ಅವು ತಿಳಿಸಲಿಚ್ಛಿಸಿದ ಸಂಗತಿಯನ್ನು ನಮ್ಮ ಭಾಷೆಯಿಂದ ನಾವು ಗ್ರಹಿಸುತ್ತೇವೆ. ಇರುವೆ, ಜೇನುನೊಣ ಮುಂತಾದುವು ತಮ್ಮ ಗುಂಪಿನಲ್ಲಿ ಒಂದನ್ನೊಂದು ಸ್ಪರ್ಶೇಂದ್ರಿಯದಿಂದ ನೋಕಿ ಪರಸ್ಪರ ತಮ್ಮ ಭಾವವನ್ನು ಸ್ಪಷ್ಟಗೊಳಿಸುತ್ತವೆ ನಾಯಿಗಳೂ, ಕತ್ತೆಗಳೂ, ಮೂಸುವುದರಿಂದಲೋ-ಮತ್ತೆ ಹೇಗೋ ಎಂತೂ ತಮ್ಮ ಮನಸ್ಸಿನ ಇಚ್ಛೆ ಇಂಥದೆಂಬುದನ್ನು ತಮ್ಮ ಸಹ ಜಾತೀಯ ಪ್ರಾಣಿಗೆ ತಿಳುಹಿಸಲು ಒಂದು ಸಾಧನವನ್ನು ಉಂಟಾಗಿವೆ. ಭಾಷೆಯ ಉಪಯೋಗವು ಭಾವ ಪ್ರದರ್ಶನೆಯೇ ಎಂದಾದಮೇಲೆ ಅವುಗಳ ಭಾವಪ್ರದರ್ಶನೆಗಾಗಿ ಏರ್ಪಟ್ಟ ಒಂದು ಸಾಧನವನ್ನು ಆಯಾಯ ಪ್ರಾಣಿವರ್ಗದ ಭಾಷೆಯೆಂದು ಕರೆಯಬಾರದೇಕೆ ?

ಪ್ರಾಣಿವರ್ಗಕ್ಕೆ ತನ್ನ ಸುಖದುಃಖಾದಿಗಳನ್ನು ತಿಳಿಸುವುದಕ್ಕಾಗಿ ಏರ್ಪಟ್ಟಿರುವ ಈ ಶಬ್ದರೂಪ ಸಾಧನ-ಮತ್ತು ಅಂಗಚೇಷ್ಟಾದಿಗಳ ಸೌಕರ್ಯ ಇವುಗಳಂತೆ, ವನಸ್ಪತಿವರ್ಗವೂ ತನ್ನ ಸುಖ ದುಃಖ ಮುಂತಾದುವುಗಳನ್ನು ಪ್ರಕಟಿಸುವ ಒಂದು ಬಗೆಯ ಸಾಧನವನ್ನು ಉಂಟಾಗಿದೆಯೆಂದು ಲೋಕವಿಖ್ಯಾತ ವಿಜ್ಞಾನ ಶಾಸ್ತ್ರವೇತ್ತರಾದ ಶ್ರೀ ಜಗದೀಶ ಚಂದ್ರಬೋಸರು ಈಚೆಗೆ ಸ್ಥಾಪಿಸಿರುತ್ತಾರೆ. ಮುಟ್ಟಿದರೆ ಮುನಿ-ಮುಂತಾದ ಮೂಲಿಕೆಗಳು, ಯಾರಾದರೂ ಅವುಗಳನ್ನು ನೋಕಿದೊಡನೆಯೇ-ಭಯದಿಂದಲೋ ಎಂಬಂತೆ ತಮ್ಮ ಎಲೆಗಳನ್ನೆಲ್ಲ ಮುದುರಿಸಿಕೊಳ್ಳುವುದನ್ನು ಎಲ್ಲರೂ ಕಂಡಿರಬಹುದು. ಅದು ಆ ಜಾತಿ ವನಸ್ಪತಿಯ ಭಾಷೆ. ಹೀಗೆ ಅಗಾಧ ಮಹಿಮನಾದ ಭಗವಂತನಿಂದ ಸೃಷ್ಟಿಯಾದ ಈ ಪ್ರಪಂಚದಲ್ಲಿ ಏನೇನು ಆಶ್ಚರ್ಯಗಳಿವೆಯೆಂಬುದು ಈವರೆಗೆ ಸಂಪೂರ್ಣವಾಗಿ ವ್ಯಕ್ತವಾಗಿಲ್ಲ. ಪ್ರಾಣಿವರ್ಗ-ವನಸ್ಪತಿ ವರ್ಗಗಳಿಗೆ ಇರುವಂತೆ-ಲೋಹವರ್ಗ ಶಿಲಾವರ್ಗಗಳಿಗೂ ಇರಬಹುದು. ಏಕೆಂದರೆ ಮೇಲೆ ಹೇಳಿದ ಸುಪ್ರಸಿದ್ಧ ತತ್ವವೇತ್ತರೇ, ಲೋಹ ಮತ್ತು ಶಿಲೆಗಳಲ್ಲೂ ಭಗವತ್ತತ್ವವು ಅವ್ಯಕ್ತ ರೂಪದಿಂದ ಅಡಗಿದೆಯೆಂದೂ-ತೀಕ್ಷ್ಣತರ ವಿಷಪ್ರಯೋಗ ಮಾಡಿದರೆ, ಲೋಹವೂ ತಳಮಳಗೊಂಡು, ತರುವಾಯ ಮೃತವಾಯಿತೋ ಎಂಬಂತೆ ಸ್ತಬ್ಧವಾಗುವು

ಡೆಂದೂ ಕಂಡು ಹಿಡಿದು ಪ್ರಪಂಚಕ್ಕೆ ಸ್ಪಷ್ಟಗೊಳಿಸಿದ್ದಾರೆ. ಅಣು ರೇಣು ತೃಣಕಾಷ್ಠಗಳಲ್ಲೂ ಪರಿಪೂರ್ಣನಾಗಿರುವ ಭಗವಂತನ, ಈ ವಿಚಿತ್ರ ಸೃಷ್ಟಿಮಹಿಮೆಯನ್ನು ಜ್ಞಾನಿಗಳಲ್ಲದೆ ಇತರರು ಅರಿಯಲಾರರು. ಪಶು ವಧೆ ಮಾಡುವ ಅಥವ ನರಹತ್ಯಮಾಡುವ ಮನುಷ್ಯನಿಗೆ ತಾನು ಕೊಲ್ಲುತ್ತಿ ರುವ ಪ್ರಾಣಿಗೆ ಜೀವವಿದೆ, ಹಿಂಸೆಯಾದರೆ ಅದು ವ್ಯಥೆಪಡುತ್ತದೆ, ಎಂಬ ಜ್ಞಾನವೇ ಇರುವುದಿಲ್ಲ. ಹಾಗಲ್ಲದೆ, ಹರಿದಾಡುವ ಹುಳು ಹುಪ್ಪಟೆ ಮೃಗ ಪಕ್ಷಿಗಳಿಗೆ ಪ್ರಾಣವಿದೆಯೆಂದು ಅಂತಃಕರಣಪೂರ್ವಕ ತಿಳಿದು ಕನಿಕರಪ ಡುವ ಮನುಷ್ಯನು-ಮೇಲೆಹೇಳಿದ ಪಶುವಧೆ ಮಾಡುವವನಿಗಿಂತಲೂ ಹೆಚ್ಚಿ ನಜ್ಞಾನಿ. ಅವನಿಗಿಂತಲೂ, ಹೆಚ್ಚಿನಜ್ಞಾನಿಯೊಬ್ಬನುಂಟು. ಆತನು, ಅನುರೇಣುಗಳಲ್ಲೂ - ತೃಣಕಾಷ್ಠಗಳಲ್ಲೂ ಭಗವಂತನು ಅಡಗಿದ್ದಾನೆಂಬು ದನ್ನು ಕೇವಲ ಶಾಸ್ತ್ರಜನ್ಯ ಜ್ಞಾನದಿಂದ ಮಾತ್ರವಲ್ಲ-ಅಂತಃಕರಣ ಜನ್ಯ ವಾದ ಜ್ಞಾನದಿಂದ ತಿಳಿದಿರುವನು. ಹಾಗೆ ತಿಳಿದುದು ಮಾತ್ರವಲ್ಲ-ಭಕ್ತಿ ಪಾರವಶ್ಯತೆಯು ಮತ್ತೂ ಹೆಚ್ಚಾದರೆ, ಆ ಸ್ಥಿತಿಯಲ್ಲಿ ಆತನು ಆಯಾ ವಸ್ತುಗಳಲ್ಲಿರುವ ಭಗವಚ್ಚೈತನ್ಯವನ್ನು ಸ್ಪಷ್ಟರೀತಿಯಲ್ಲಿ ಕಂಡು,-ತಾದಾ ತ್ಮ್ಯಭಾವವನ್ನು ಹೊಂದಿ ಅದರೊಂದಿಗೆ ಮಾತನಾಡುವನು. ಅದನ್ನು ಮಾತನಾಡಿಸುವನು. ಮನಸ್ಸು ಆ ಸ್ಥಿತಿಯಲ್ಲಿ ಯಾವ ಅಂತಸ್ತಿನಲ್ಲಿರುವು ದೆಂಬುದನ್ನು ತಿಳಿಯ ಹೇಳುವುದು ಅಜ್ಞರಾದ ನಮಗೆ ಸಾಧ್ಯವಿಲ್ಲದ ಮಾ ತು. ಮನಸ್ಸಿನ ಆ ಅಂತಸ್ತು ಎಂತಹುದೆಂಬುದನ್ನು ಯೋಚಿಸಲೂ ಅಶ ಕ್ತವಾದ ನಮ್ಮ ಮನಸ್ಸಿನ ಅಲ್ಪಪಾತ್ರೆಯಿಂದ ಅದನ್ನು ಅಳೆದು-ಅದರ ಪ್ರಮಾಣವು ಇಷ್ಟೇ ಎಂದು ನಿರ್ಧರಿಸಿ-ಅವನ್ನು ಸುಳ್ಳು ಅಥವ ಅತಿಶಯೋ ಕ್ತಿ ಎಂದು ಮುಂತಾಗಿ ತೀರ್ಮಾನ ಹೇಳಿಬಿಡುವುದು ಸಮಂಜಸವೆಂದು ತೋರುವುದಿಲ್ಲ. ಮಹಾಜ್ಞಾನಿಗಳು ತಮ್ಮ ಆತ್ಮಶಕ್ತಿಯಿಂದ ಅನೇಕ ಅಘ ಟನೆಗಳನ್ನು ಘಟನೆಮಾಡಿ ತೋರಿಸಿದ್ದಾರೆ. ಆದುದರಿಂದ ಈ ಕಥಾನಾಯ ಕನ ಚರಿತ್ರೆಯಲ್ಲಿ ತೋರಿಬರುವ ಹಲವು ಅಮಾನುಷ ಸಂಗತಿಗಳನ್ನು ಅವು ಸುಳ್ಳೆಂದೂ-ಅಥವ ಅತಿಶಯೋಕ್ತಿಯೆಂದೂ ಹೇಳಿ ತ್ಯಜಿಸಿಬಿಡುವುದಕ್ಕೆ ಮುಂಚೆ, ಅವುಗಳನ್ನು ನಮ್ಮ ದೃಷ್ಟಿಯಿಂದಲಲ್ಲ - ಅವರ ದೃಷ್ಟಿಯಿಂದ- ಅವರ ಅನುಭವದಿಂದ ಮತ್ತು ಅವರ ಸ್ಥಾನದಿಂದ ನೋಡಿ ತೀರ್ಮಾನಿಸ

ತಕ್ಕುದು ಯೋಗ್ಯವಾದುದೆಂದೂ, ನಮಗೆ ಅವರ ಮನಸ್ಸಿನ ಉನ್ನತಿಸ್ಥಾನ ವೆಷ್ಟರದು ಎಂದು ಪರಿಚಯವಾಗದಿರುವ ಭಾಗದಲ್ಲಿ, ನಮ್ಮ ಸ್ಥಾನದಿಂದ ಅದರ ತೀರ್ಮಾನ ಹೇಳತಕ್ಕುದು ಯುಕ್ತವಲ್ಲವೆಂದು ನಮ್ರತೆಯಿಂದ ಸೂಚಿಸಲೆಳೆಸುತ್ತೇವೆ. ಭೂಮಟ್ಟದಿಂದ ಸಾವಿರ ಅಡಿಗಳ ಕೆಳಗೆ ಇರತಕ್ಕ ಮನುಷ್ಯನೊಬ್ಬನು, ಹಿಮಾಲಯದ ಅತ್ಯುನ್ನತ ಶಿಖರದ ಮೇಲಿನಿಂದ ನೋಡಿದರೆ ನಮ್ಮ ಭೂಮಿಯೂ, ಅದರ ಮೇಲಿನ ಗಿಡಮರಗಳೂ, ಪಶುಪಕ್ಷಿಗಳೂ ಹೇಗೆ ತೋರುವುವು ಎಂಬ ವಿಷಯದಲ್ಲಿ ತನ್ನ ಅಭಿಪ್ರಾಯವನ್ನು ಹೇಳಿ ತೀರ್ಮಾನ ಕೊಟ್ಟಂತೆ, ಮಹಾಜ್ಞಾನಿಗಳ ಅಭಿಪ್ರಾಯ ಅನುಭವಗಳನ್ನು ಕುರಿತ ನಮ್ಮ ಅಭಿಪ್ರಾಯವು ಹಾಸ್ಯಾಸ್ಪದವಾಗಬಾರದು. ಹಾಗೊಂದು ವೇಳೆ ಕಥೆಯಲ್ಲಿ ಹೇಳಲ್ಪಟ್ಟಂತೆ ನಡೆಯಲಿಲ್ಲವೆಂಬೋಣ - ಅದರಿಂದ ನಮಗೆ ನಷ್ಟವೇನೂ ಇಲ್ಲ. ನಡೆದಿದ್ದ ಪಕ್ಷದಲ್ಲಿ ನಮ್ಮ ದೇಶಮಾತೆಯ ಪವಿತ್ರ ಗರ್ಭದಲ್ಲಿ ಇಂತಹ ಕಲಿಗಾಲದಲ್ಲೂ ಭಗವಂತನ ಶಿಲಾವಿಗ್ರಹವನ್ನು ಸಹ ಮಾತನಾಡಿಸಿದ ಮಹಾನುಭಾವರು ಜನ್ಮಿಸಿದ್ದರು ಎಂದು ನಮ್ಮ ಗೌರವವು ಮತ್ತೂ ಹೆಚ್ಚುವುದು. ಹೀಗಿರುವಲ್ಲಿ ನಮಗೇ ಸ್ವಯಂ ಆತ್ಮಜ್ಞಾನ ಪ್ರಾಪ್ತವಾಗಿ ಅವುಗಳನ್ನು ತಕ್ಕಂತೆ ವಿಮರ್ಶಿಸುವ ಸಾಮರ್ಥ್ಯವುಂಟಾಗುವವರೆಗೂ ಮಹನೀಯ ಭಕ್ತಶ್ರೇಷ್ಠರ ಈ ಚರಿತ್ರೆಗಳನ್ನು ನಂಬಕೂಡದೇಕೆ !

ಸುಬೋಧ ಕುಸುಮಾಂಜಲಿ ಗ್ರಂಥಮಾಲೆಯು, ನಮ್ಮಲ್ಲಿ ಸರ್ವಸಾಮಾನ್ಯವಾಗಿರುವ ಇಂತಹ ಕಠಿಣ ಪ್ರಶ್ನೆಗಳನ್ನು ಸಮಂಜಸವೆಂದು ತೋರಿಸುವ ವಿಷಯದಲ್ಲಿ ಯೋಗ್ಯತಾನುಸಾರ ಪ್ರಯತ್ನಿಸುತ್ತಿದೆ. ಪ್ರಾಜ್ಞರಾದ ವಾಚಕ ಮಹಾಶಯರು ಅದಕ್ಕೆ ಯೋಗ್ಯ ಪ್ರೋತ್ಸಾಹವನ್ನಿತ್ತು - ಅದರ ಬೆಳೆವಣಿಗೆಗೆ ಸಹಕರಿಸುವುದಲ್ಲದೆ, ತಮ್ಮ ಮಿತ್ರ ಮಂಡಲಿಯಲ್ಲೂ ಅವಕ್ಕೆ ಪ್ರಾಚುರ್ಯವನ್ನು ಉಂಟುಮಾಡಿ ನಮ್ಮ ಭಾಷಾಸೇವಾ ಕಾರ್ಯವು ನಿರ್ವಿಘ್ನವಾಗಿ ಮುಂದರಿಯುವಂತೆ ಮಾಡಬೇಕೆಂದು ಪ್ರಾರ್ಥಿಸುತ್ತೇವೆ.

ಬೆಂಗಳೂರು,
ತಾ|| ೪—೩—೧೯೩೧.

ಇತಿ ಸುಜನ ವಿಧೇಯ,
**ಯಂ. ರಾಮರಾವ್**



ಶ್ರೀ ನಾಮದೇವ

ಶ್ರೀರಾಮ ಸಹಾಯಂ.

ಶ್ರೀ ಪಾಂಡುರಂಗ ಭಕ್ತಾಗ್ರಣಿ

# ಶ್ರೀ ನಾ ಮ ದೇ ವ



**ಅಧ್ಯಾಯ. ೧** **"ಜನನ—ಬಾಲ್ಯ"**

ನಮ್ಮ ಮಾತೃಭೂಮಿ ಭಾರತ ದೇಶದ ಬೇರೆ ಬೇರೆ ಪ್ರಾಂತಗಳಲ್ಲಿ ಕರ್ಮ, ಭಕ್ತಿ, ಜ್ಞಾನ, ವೈರಾಗ್ಯ, ಭೂತದಯೆ, ಸ್ವಾರ್ಥತ್ಯಾಗ ಮುಂತಾದುವುಗಳ ಶ್ರೇಷ್ಠ ತತ್ವಗಳನ್ನು ಜನಸಾಮಾನ್ಯದ ಗಮನಕ್ಕೆ ತಂದಿತ್ತು ಕೋಟ್ಯಾಂತರ ಮಾನವ ಪ್ರಾಣಿಗಳ ಜೀವನ ಸಾರ್ಥಕ್ಯಕ್ಕೆ ಮಾರ್ಗವನ್ನು ಕಲ್ಪಿಸಿದ ಸಾಧುಶ್ರೇಷ್ಠರು ವಿವಿಧಕಾಲಗಳಲ್ಲಿ ಅವತರಿಸಿದ್ದಾರೆ. ವೀರಭೂಮಿಯೆನ್ನಿಸಿಕೊಂಡ ರಾಜಸ್ಥಾನ ಮತ್ತು ಪಾಂಚಾಲ (ಪಂಜಾಬು) ಪ್ರಾಂತಗಳಲ್ಲ ಮೀರಾಬಾಯಿ-ಸೂರದಾಸ್, ಗೋಸ್ವಾಮಿ ತುಲಸೀದಾಸ್ ಮುಂತಾದವರೂ, ಬಂಗಾಳಾ ಪ್ರಾಂತದಲ್ಲಿ ಶ್ರೀಕೃಷ್ಣ ಚೈತನ್ಯದೇವ-ಮತ್ತು ಆತನ ಶಿಷ್ಯವರ್ಗವೂ, ಮಧ್ಯಪ್ರಾಂತದಲ್ಲಿ ರಾಮಾನಂದಸ್ವಾಮಿ ಕಬೀರದಾಸ ಮುಂತಾದವರೂ, ಗುಜರಾತ್ ಪ್ರಾಂತದಲ್ಲಿ ವಲ್ಲಭಾಚಾರ್ಯ ಪಂಥದವರೂ, ದಕ್ಷಿಣ ದೇಶದಲ್ಲಿ ಮಹಾನುಭಾವರಾದ ಪುರಂದರದಾಸ ಕನಕದಾಸ ತ್ಯಾಗರಾಜಸ್ವಾಮಿ ಮುಂತಾದ ಭಕ್ತ ಶ್ರೇಷ್ಠರೂ, ಜನ್ಮವೆತ್ತಿ ಆದ್ಯಂತ ಭಾರತದೇಶದಲ್ಲಿ ವೈಷ್ಣವಭಕ್ತಿಪಂಥವನ್ನು ರೂಢಮೂಲವನ್ನಾಗಿಸಿದರು. ಆದರೆ ಈ ವೈಷ್ಣವಭಕ್ತಿಪಂಥವು ಉತ್ತರ ದೇಶದಲ್ಲಿ ಬೆಳೆದು ಬಂದುದಕ್ಕೂ ದಕ್ಷಿಣ ದೇಶದಲ್ಲಿ ಬೆಳೆದುದಕ್ಕೂ ಕೆಲವು ಭಾಗಗಳಲ್ಲಿ ವ್ಯತ್ಯಾಸವುಂಟು-ಉತ್ತರದೇಶದಲ್ಲಿ ಶ್ರೀ ಚೈತನ್ಯದೇವ ಮತ್ತು ವಲ್ಲಭಾಚಾರ್ಯ ಪಂಥಗಳವರು ಸ್ಥಾಪಿಸಿದ ಭಕ್ತಿಮಾರ್ಗವು 'ರಾಧಾಕೃಷ್ಣ

ಭಕ್ತಿ' ಎನ್ನಿಸಿಕೊಳ್ಳುವುದು. ಎಂದರೆ, ನಾಯಿಕೆಯು ತನ್ನ ನಾಯ ಕನ ವಿಷಯದಲ್ಲಿ ಪ್ರಕಟಿಸುವ ಅನನ್ಯ ಪ್ರೇಮ ಭಾವವನ್ನು ಕುರಿತುದು. ಆದರೆ ದಕ್ಷಿಣದೇಶದಲ್ಲಿ ಈ ಬಗೆಯ ಭಕ್ತಿಪಂಥವಲ್ಲ; ಸೇವ್ಯ ಸೇವಕ ಭಾವದ ಭಕ್ತಿಪಂಥವು ಪ್ರಬಲಗೊಂಡಿತು. ಗರುಡ-ಆಂಜನೇಯ ಮುಂ ತಾದ ಮಹಾಭಕ್ತರು ಸ್ವಾಮಿಯನ್ನು ದಾಸಾನುದಾಸರಾಗಿ ಸೇವಿಸಿದ ಮ ಹತ್ವದ ಉದಾಹರಣೆಗಳು ಭಕ್ತಿಪಂಥದ ಪ್ರಚಾಂಕರಿಂದ ಇಲ್ಲಿ ಜನಾಂಗ ದೆದುರಿಗೆ ವಿಶೇಷವಾಗಿ ಪ್ರದರ್ಶಿಸಲ್ಪಟ್ಟುವು. ಉತ್ತರದೇಶದಲ್ಲಿ ರಾಧೆಯು ಶ್ರೀ ಕೃಷ್ಣನೊಂದಿಗೆ ಹಲವು ಬಗೆಯ ವಿಲಾಸಾದಿಗಳನ್ನು ಆಚರಿಸಿ, ತನ್ನ ಅನನ್ಯ ಭಕ್ತಿಯನ್ನು ಪ್ರಕಟಿಸಿದ ಪೌರಾಣಿಕ ಉದಾಹರಣೆಯನ್ನು ತೆಗೆದು ಕೊಂಡಿದ್ದರೆ, ದಕ್ಷಿಣದ ಪಂಡರಾಪುರದಲ್ಲಿ, ಶ್ರೀ ಕೃಷ್ಣಸ್ವರೂಪಿಯಾದ ವಿಠ್ಠಲಸ್ವಾಮಿಗೆ ಶ್ರೀ ರುಕ್ಮಿಣೀದೇವಿಯು ಸಾಧ್ವಿಯಾದ ಗೃಹಿಣಿಯಾಗಿ ಅನುವರ್ತಿಸಿದ್ದಾಳೆ. ಪಂಡರಾಪುರದಲ್ಲ ಧ್ಯಾನದೇವ ನಾಮದೇವ ತುಕಾ ರಾಮ ಮುಂತಾದ ಭಕ್ತಶ್ರೇಷ್ಠರು ಅವತರಿಸಿ ವಿಠ್ಠಲಸ್ವಾಮಿಯನ್ನು ಅನ ನ್ಯ ಭಕ್ತಿಯಿಂದ ಆರಾಧಿಸಿದರು. ನಮ್ಮ ಕಥಾನಾಯಕನು ಅವತರಿಸಿದು ದು ಹದಿನಾಲ್ಕನೆಯ ಶತಮಾನದಲ್ಲಿ! ಅದಕ್ಕೆ ಸ್ವಲ್ಪಕಾಲ ಮುಂದೆ ಅಲ್ಲೇ ಧ್ಯಾನದೇವನೆಂಬ ಬ್ರಾಹ್ಮಣ ಭಕ್ತ ಶಿರೋಮಣಿಯು ಅವತರಿಸಿ ವಿಠ್ಠಲ ಭಕ್ತಿಯ ಬೀಜಗಳನ್ನು ನಾಟಿದ್ದನು. ಅದು ನಾಮದೇವನ ಕಾಲಕ್ಕೆ ಚಿಗುರಿ ಎರಡೆಲೆಗಳನ್ನು ಬಿಟ್ಟಿದ್ದಿತು. ಆತನು ಅದಕ್ಕೆ ತನ್ನ ಅನನ್ಯ ಭಕ್ತಿ ಭಾವದಿಂದ ಹಲವು ಕವಿತೆಗಳ ಭಕ್ತಿಬೋಧಕವಾದ ಸಹಸ್ರಾರು ಪದ ಪದ್ಯಗಳೆಂಬ, ನೀರು ಗೊಬ್ಬರ ಗೋಡುಗಳನ್ನು ಒದಗಿಸಿ, ಹುಲುಸಾಗಿ ಬೆಳೆಯಿಸಿದನು. ತರುವಾಯ ಜನ್ಮಿಸಿದ ತುಕಾರಾಮನು, ಅದು ಪುಷ್ಪಿಸಿ ಫಲಿಸುವವರೆಗೂ ಅಭಿವೃದ್ಧಿಗೆ ತಂದನು. ಹೀಗೆ ಮಹಾರಾಷ್ಟ್ರದಲ್ಲಿ ಭಕ್ತಿ ಪಂಥವು, ಈ ನಾಲ್ಕಾರು ಮಂದಿಯ ಮತ್ತು ಇಷ್ಟು ಪ್ರಸಿದ್ಧರಲ್ಲದ ಇತರ ನೂರಾರುಮಂದಿ ಭಕ್ತರ ಪರಿಶ್ರಮದಿಂದ ವಿಶೇಷವಾಗಿ ಬೆಳೆದು ಅಭಿವೃ ದ್ಧಿಯಾಯಿತು. ಪಾಂಡುರಂಗ ವಿಠ್ಠಲನು ಅಗಾಧ ಪ್ರೇಮಮೂರ್ತಿ ಯಾಗಿ ಭಕ್ತರ ಭವತಾಪವನ್ನು ನೀಗಿಸುವಲ್ಲಿ ಅದ್ವಿತೀಯ ದೈವತವೆಂದು ಪ್ರಖ್ಯಾತನಾದನು. ಪಾಂಡುರಂಗನ ಸನ್ನಿಧಿಯಲ್ಲಿ-ಜಗನ್ನಾಥದಂತೆಯೇ,

ಬ್ರಾಹ್ಮಣ ಶೂದ್ರಾದಿಗಳ ಭೇದಭಾವವು ಅಳಿದು, ಸಕಲರೂ ಒಂದೇ ರೀತಿಯಾಗಿ ಅವರವರ ಮನಬಂದಂತೆ-ಭಕ್ತಿ ಶ್ರದ್ಧೆಗಳಿಗೆ ತಕ್ಕಂತೆ ಸ್ವಾಮಿಯನ್ನು ಆರಾಧಿಸುವ ಸ್ವಾತಂತ್ರ್ಯವು ಜನಾಂಗಕ್ಕೆ ಲಭ್ಯವಾಯಿತು.

ಫಂಡರಾಪುರ ಕ್ಷೇತ್ರದಲ್ಲಿ ಪಾಂಡುರಂಗಸ್ವಾಮಿಯು ವಿಠ್ಠಲನೆಂಬ ನಾಮವು ಸ್ವಾಮಿಗೆ ಹೇಗೆ ಉಂಟಾಯಿತೆಂಬ ವಿಷಯದಲ್ಲಿ ಮಹಾರಾಷ್ಟ್ರ ಪಂಡಿತರಲ್ಲಿ ದೊಡ್ಡ ಚರ್ಚೆ ನಡೆದಿದೆ. ಸರ್. ಆರ್. ಜಿ. ಭಂಡಾರಕರ್‌ರವರು ವಿಠ್ಠಲನೆಂಬ ಪದವು ಉಂಟಾದ ಪರಿಯನ್ನು ಕುರಿತು ಈ ಕೆಳಗೆ ಹೇಳುವಂತೆ ವಿವರಿಸಿರುತ್ತಾರೆ. ಅವರ ಹೇಳಿಕೆಯಲ್ಲಿ-ಕೃಷ್ಣ ಎಂಬ ಪದವನ್ನು ಕನ್ನಡದಲ್ಲಿ ಕಿಟ್ಟ-ಕಿಟ್ಟಿ ಎಂದು ಮುಂತಾಗಿ ಕರೆಯುವಂತೆಯೇ, ವಿಷ್ಣು ಎಂಬ ಸಂಸ್ಕೃತ ಪದವೂ ವಿಟ್ಟು ಎಂಬ ಕನ್ನಡ ಪದವಾಗಿ, ಅದಕ್ಕೆ ಲ ಎಂಬ ಅಕ್ಷರವು ಪ್ರೇಮ ಸೂಚಕವಾಗಿ ಹೇಗೋ ಸೇರಿಹೋಗಿದೆ ಎಂದಿರುವುದು. ಮತ್ತೆ ಕೆಲವರು,-ಪಾಂಡುರಂಗನು ಇಟ್ಟಿಗೆಯ ಪೀಠದ ಮೇಲೆ ನಿಂತಿದ್ದಾನೆ, ಇಟ್ಟಿಗೆಗೆ ಮಹಾರಾಷ್ಟ್ರ ಭಾಷೆಯಲ್ಲಿ ವಿಟೆ ಎಂದಿರುವುದರಿಂದ, ಆದರ ಪೀಠದಮೇಲೆ ನಿಂತಿರುವ ಸ್ವಾಮಿಯು ವಿಠ್ಠಲನೆಂದು ಕರೆಯಿಸಿಕೊಂಡನು ಎಂದು ಹೇಳುತ್ತಾರೆ. ಅದು ಹೇಗಾದರೂ ಇರಲಿ. ಫಂಡರಾಪುರಿಯ ವಿಠ್ಠಲನು ಕೃಷ್ಣನೇ ಎಂಬ ವಿಷಯದಲ್ಲೂ-ಮಹಾರಾಷ್ಟ್ರ ಭಾಷೆಯಲ್ಲಿ ರಖುಮಾಯಿ ಎಂದು ಸಂಬೋಧಿಸಲ್ಪಡುತ್ತಿರುವ ವಿಠ್ಠಲನ ದೇವಿಯೇ ರುಕ್ಮಿಣಿ ಎಂಬ ವಿಷಯದಲ್ಲೂ ಏನೂ ಸಂದೇಹವಿಲ್ಲ. ಶ್ರೀ ಕೃಷ್ಣಭಕ್ತಿಯು ವಿಶೇಷವಾಗಿ ಹಬ್ಬಿ ಹರಡಲು ಶ್ರೀ ಪಾಂಡುರಂಗ ಕ್ಷೇತ್ರವು ಹೀಗೆ ಪರಮ ಸಾಧನವಾಗಿ ಅನೇಕ ಮಾನವ ಪ್ರಾಣಿಗಳ ಆತ್ಮೋದ್ಧಾರಕ್ಕೆ ಜನ್ಮಸ್ಥಳವಾಗಿದೆ.

ಪಂಢರಿಪುರ ಕ್ಷೇತ್ರವು ಅಲ್ಲಿ ಉಂಟಾದುದಕ್ಕೂ, ಅಲ್ಲಿಗೆ ಪಾಂಡುರಂಗ ವಿಠ್ಠಲಸ್ವಾಮಿಯು ಬಿಜಯಮಾಡಿದುದಕ್ಕೂ ಕಾರಣವೆಂದು ಒಂದು ಕಥೆಯು ಹೇಳಲ್ಪಡುತ್ತದೆ. ''ಪುಂಡಲೀಕನೆಂಬೊಬ್ಬ ಭಕ್ತಶ್ರೇಷ್ಠನು, ಮಾತಾಪಿತೃ ಸೇವೆಯಲ್ಲಿ ಅತ್ಯಂತ ಶ್ರದ್ಧಾ ಭಕ್ತಿಯುಳ್ಳವನಾಗಿದ್ದನು. ಆತನು ರಾತ್ರೆ ಹಗಲುಗಳೆನ್ನದೆ, ನಿದ್ರಾಹಾರಗಳನ್ನು ಗಮನಿಸದೆ ಸೇವೆ ಮಾಡುತ್ತಿರಲು, ಜಗನ್ಮಾತೆಯಾದ ರುಕ್ಮಿಣೀ ದೇವಿಯು ಆ ಭಕ್ತೋತ್ತಮನಿಗೆ

ಸಹಾಯಮಾಡಲಿಕ್ಕೆಂದು ದ್ವಾರಕೆಯನ್ನು ಬಿಟ್ಟು, ಆ ಭಕ್ತನು ವಾಸವಾಗಿದ್ದ ಈಗಿನ ಪಂಡರಾಪುರದ ಪ್ರಾಂತ್ಯಕ್ಕೆ ಬಂದಳಂತೆ! ಶ್ರೀಕೃಷ್ಣನು, ತನ್ನ ರಾಣಿಯನ್ನು ಕಾಣದೆ ಆಕೆಯನ್ನು ಹುಡುಕಿಕೊಂಡು, ಪುಂಡಲೀಕನಿದ್ದ ಆಶ್ರಮದ ಸಮೀಪಕ್ಕೆ ಬಂದನಂತೆ! ಸ್ವಾಮಿಯು ಆಗಮಿಸಿದ ಆ ವೇಳೆಯಲ್ಲಿ ಪುಂಡಲೀಕನು, ಅನನ್ಯ ಮನಸ್ಕನಾಗಿ ಮಾತಾಪಿತೃ ಸೇವೆಯಲ್ಲಿ ತೊಡಗಿದ್ದನು. ಆತನಿಗೆ ಮಾತಾಪಿತೃಗಳೇ ಪರಮಾತ್ಮನ ಪ್ರತಿರೂಪವೆಂಬ ದೃಢಭಾವನೆಯಿದ್ದುದರಿಂದ ಆತನು, ಪಾಂಡುರಂಗನು ಬಂದನೆಂದು ತನ್ನ ಪಿತೃಸೇವೆಯನ್ನು ಬಿಟ್ಟು, ಆ ದೇವರಸೇವೆಗೆಂದು ಬರಲಿಲ್ಲ. ಆದರೆ ಬಂದ ಸ್ವಾಮಿಗಾಗಿ, ತಾನು ತಂದೆಯ ಪಾದಸೇವೆ ಮಾಡುತ್ತಾ ಕುಳಿತಿದ್ದ ಸ್ಥಳದಿಂದಲೇ ಒಂದು ಇಟ್ಟಿಗೆಯನ್ನು ಎಸೆದು ಅದರಮೇಲೆ ನಿಂತುಕೊಂಡಿರೆಂದು ಪ್ರಾರ್ಥಿಸಿ, ಪಿತೃಪಾದ ಸೇವಾಕಾರ್ಯವನ್ನು ಮುಗಿಸಿಕೊಂಡು ಬಂದು ತರುವಾಯ ಸ್ವಾಮಿಯ ಸೇವೆ ಮಾಡಿದನಂತೆ! ಪಾಂಡುರಂಗನು ಆತನ ಅನನ್ಯ ಪಿತೃಭಕ್ತಿಯನ್ನು ಕಂಡು ಸುಪ್ರೀತನಾಗಿ, ಅಂದಿನಿಂದ ಆ ಸ್ಥಳದಲ್ಲೇ ನಿಂತು ಭಕ್ತರನ್ನು ಅನುಗ್ರಹಿಸುವುದಾಗಿ ಸಂಕಲ್ಪಿಸಿದನೆಂದೂ, ಹಾಗೆ ನಿಂತ ಸ್ವಾಮಿಯ ಸಾನ್ನಿಧ್ಯ ವಿಶೇಷದಿಂದ ಅದು ಮಹಾ ಪುಣ್ಯಕರವಾದ ಕ್ಷೇತ್ರವಾಗಿ ಪರಿಣಮಿಸಿತೆಂ''ದೂ ಆ ಕಥೆಯಲ್ಲಿ ಹೇಳಲ್ಪಟ್ಟಿದೆ.

ಭಕ್ತಿ ಪಂಥದಲ್ಲಿ ಜಾತಿ ಭೇದದ ಪ್ರಸ್ತಾಪವಿಲ್ಲ. ಭಕ್ತನು ಬ್ರಾಹ್ಮಣನಾಗಿಯೇ ಇರಬೇಕೆಂಬುದಿಲ್ಲ. ಪರಮಾತ್ಮನೇ ಸರ್ವೋತ್ತಮನೆಂಬ ವಿಷಯದಲ್ಲಿ ನಿಶ್ಚಲವಾದ ನಂಬಿಕೆಯು ಯಾವನಿಗುಂಟೋ, ಅವನು ಭಕ್ತನಾಗುವನು. ಬರಿಯ ನಂಬಿಕೆ ಮಾತ್ರವಲ್ಲ-ಆ ತನ್ನ ಇಷ್ಟದೈವದ ಪ್ರಾಪ್ತಿಗಾಗಿ ತನ್ನ ಸರ್ವಸ್ವವನ್ನೂ ತ್ಯಜಿಸಿ ಸೇವಿಸಲು ಯಾವನು ಸಿದ್ಧನಾಗುವನೋ, ಯಾವನ ಮನಸ್ಸು ಪ್ರೇಮಾಮೃತಸಾಗರದಲ್ಲಿ ಓಲಾಡಿ, ತನ್ನ ಇಷ್ಟದೈವವನ್ನು ಒಲಿಸಿಕೊಳ್ಳುವುದನ್ನೇ ತನ್ನ ಜೀವಿತದ ಅತಿ ಮುಖ್ಯ ಪ್ರಯೋಜನವನ್ನಾಗಿ ತಿಳಿದು ಅನನ್ಯ ಶರಣನಾಗಿರುವನೋ, ಯಾವನಿಗೆ ತಂದೆತಾಯಿ ಬಂಧು ಬಾಂಧವರು ಪತ್ನೀ ಪುತ್ರಾದಿಗಳು ಧನ ಕನಕಾದಿ ಸೌಭಾಗ್ಯಗಳು ಹೀಗೆ ಪ್ರಾಪಂಚಿಕವಾದ ಎಲ್ಲಕ್ಕಿಂತಲೂ ಆ ಇಷ್ಟದೈವವೇ ಅತಿ ಮುಖ್ಯವಾಗಿರುವುದೋ-ಅದರ ಸಂಪಾದನೆಗಾಗಿ ಯಾವನು ಈ ಸಮ

ಸ್ತ್ವವನ್ನೂ ಕೊನೆಗೆ ತನ್ನ ಪ್ರಾಣವನ್ನೂ ತ್ಯಜಿಸಲು ಸಿದ್ಧನಾಗಿರುವನೋ ಅವನೇ ಭಕ್ತನೆನ್ನಿಸಲು ಅರ್ಹನು. ಈ ಭಕ್ತಿ ಪಂಥದಲ್ಲಿ ಸಕಲಜಾತಿ ಮತಗಳವರಿಗೂ ಆಶ್ರಯವುಂಟು. ಭಗವನ್ಮಾಹಾತ್ಮೆಯಲ್ಲಿ ಅತಿ ದೃಢವಾದ ನಂಬಿಕೆ ಪ್ರೀತಿಗಳನ್ನುಳ್ಳವರಾಗಿದ್ದ ಸಮಸ್ತರೂ ಈ ಪಂಥದಲ್ಲಿ ಸೇರಿದ್ದರು. ಬ್ರಾಹ್ಮಣರಿಂದ ಪೀಡನವರಿಗೂ ಈ ಪಂಥಕ್ಕೆ ಸೇರಿದ್ದವರ ಉದಾಹರಣೆಗಳುಂಟು. ಮಹಮ್ಮದೀಯರೂ ಪಂಚಮರೂ ಈ ಪಂಥದಲ್ಲಿ ಸೇರಿ, ಮಹಾಭಕ್ತರೆಂದು ಹೆಸರುವಾಸಿಯನ್ನು ಗಳಿಸಿದರು. ಭಕ್ತಿಪಂಥವೆಂದರೆ ಅದೊಂದು ಜಾತಿಭೇದವಲ್ಲ. ಯಾರು ಭಕ್ತರೋ ಅವರು ಪ್ರಪಂಚದ ಯಾವ ಭಾಗದಲ್ಲಿ ಎಲ್ಲಿ ವಾಸವಾಗಿದ್ದರೂ ಅವರೇ ಒಂದು ವರ್ಗ; ಅದನ್ನೇ ಭಕ್ತಿಪಂಥವೆನ್ನುವುದು. ನಮ್ಮ ಕಥಾನಾಯಕನು, ಪ್ರಾರಂಭದಲ್ಲಿ ಹೇಳಿದಂತೆ ಇಂತಹ ಭಕ್ತಿಪಂಥದಲ್ಲಿ ಅಗ್ರೇಸರ ತರಗತಿಗೆ ಸೇರಿದವನು. ಆತನ ಚರಿತ್ರೆಯೇ ಈ ಮುಂದೆ ಕೊಡಲ್ಪಡುವುದು. ವಾಚಕ ಮಹಾಶಯರು ನಾವಧಾನಚಿತ್ತರಾಗಿ ಮುಂದರಿಸಬೇಕು.

ನಾಮದೇವನ ಹಿರಿಯರು ಸತಾರಾ ಜಿಲ್ಲಾಕ್ಕೆ ಸೇರಿದ ಕರ್ಹಾಡ್ ಎಂಬ ಊರಿನ ಸಮೀಪದಲ್ಲಿರುವ ಛಾಯಾ ನರಸಿಂಗಪುರವೆಂಬ ಗ್ರಾಮದಲ್ಲಿ ವಾಸವಾಗಿದ್ದವರು. ನಾಮದೇವನ ತಂದೆಯಾದ ದಾಮಾಜಿಯು ನರಸಿಂಗಪುರವನ್ನು ಬಿಟ್ಟು ಆ ಕಾಲದಲ್ಲಿ ಈಗಿನಂತೆಯೇ ಸುಪ್ರಸಿದ್ಧ ಕ್ಷೇತ್ರವೆಂದು ಹೆಸರುಗೊಂಡಿದ್ದ ಪಂಡರಾಪುರಕ್ಕೆ ಬಂದು ಅಲ್ಲಿ ತನ್ನ ಕುಲವೃತ್ತಿಯಾದ ಬಟ್ಟೆ ಹೊಲಿಯುವಿಕೆಯಿಂದ ಜೀವನವನ್ನು ಸಂಪಾದಿಸಿಕೊಳ್ಳುತ್ತಾ ವಾಸವಾಗಿದ್ದನು. ಈತನಿಗೆ ಗುಣಾಬಾಯಿಯೆಂಬ ಸಾಧ್ವಿಯು ಪತ್ನಿಯಾಗಿದ್ದಳು. ಬಡವರಾದರೂ ಆ ದಂಪತಿಗಳು ಪರಸ್ಪರ ಪ್ರೇಮ ಸೌಹಾರ್ದಗಳಿಂದ ದಾಂಪತ್ಯ ಧರ್ಮಬದ್ಧರಾಗಿ ಸಂಸಾರ ಯಾತ್ರೆಯನ್ನು ಸಾಗಿಸಿಕೊಂಡಿದ್ದರು. ಗುಣಾಬಾಯಿಯು ಪತಿಭಕ್ತಿ ಪರಾಯಣಳೂ, ಅತಿಥಿ ಅಭ್ಯಾಗತರ ಸೇವೆಯಲ್ಲಿ ಬೇಸರಗೊಳ್ಳದವಳೂ ಆಗಿದ್ದಳು. ಆಕೆಯ ಸಹವಾಸದಿಂದ ದಾಮಾಜಿಯು ಗೃಹಕೃತ್ಯದ ಕಷ್ಟ ತಾಪತ್ರಯಗಳಿಗೆ ಸಿಲುಕದೆ, ಬಡತನವಾದರೂ ಸುಖರೀತಿಯಲ್ಲೇ ಕಾಲಯಾಪನೆ ಮಾಡಿಕೊಂಡಿದ್ದನು. ಹೀಗೆ ಬಹುಕಾಲವಾದರೂ ಆ ದಂಪತಿಗಳಿಗೆ ಮಕ್ಕಳಾಗಲಿಲ್ಲ. ಗುಣಾಬಾ

ಯಿಗೆ ಜೀವಿತದಲ್ಲಿ ಬೇಸರತೋರಿ, ಒಂದಾನೊಂದು ದಿನ ತನ್ನ ಪತಿಯನ್ನು ಕುರಿತು-'ಪ್ರಾಣಪ್ರಭೋ ನಮ್ಮ ವಂಶೋದ್ಧಾರಕ್ಕಾಗಿಯೂ, ನಮಗೆ ಸದ್ಗತಿಯನ್ನು ದೊರಕಿಸಿಕೊಡುವುದಕ್ಕಾಗಿಯೂ, ಒಂದು ಸಂತಾನವನ್ನು ಕರುಣಿಸಬೇಕೆಂದು ನಾವು ಶ್ರೀ ಪಾಂಡುರಂಗಸ್ವಾಮಿಯನ್ನು ಪ್ರಾರ್ಥಿಸಿ ಆತನ ಅನುಗ್ರಹದಿಂದ ಪಡೆಯಲಾಗದೇಕೆ ?'' ಎಂದು ವಿಜ್ಞಾಪಿಸಿಕೊಂಡಳು.

ದಾಮಾಜಿಗೆ, ತನ್ನ ಪತ್ನಿಯ ಆ ಪ್ರಾರ್ಥನೆಯು ತಪ್ಪೆಂದು ತೋರಲಿಲ್ಲ. ದಂಪತಿಗಳಾದವರು ವಂಶೋದ್ಧಾರಕ್ಕಾಗಿ ಸಂತತಿಯನ್ನು ಪಡೆಯುವುದು ಗೃಹಸ್ಥ ಧರ್ಮವೇ ಆದುದರಿಂದ ತನ್ನ ಪತ್ನಿಯ ಸಲಹೆಯು ಸಮಂಜಸವಾದುದೇ ಎನ್ನಿಸಿತು. ಆದರೆ ಗಳಿತ ವಯಸ್ಕರಾದ ತಮಗೆ ಸಂತಾನವಾಗುವುದು ಅಶಕ್ಯವೆಂದು ಭಾವಿಸಿ-'ಸಾಧ್ವೀ, ವಂಶೋದ್ಧಾರಕ್ಕಾಗಿ ವಿಠ್ಠಲನನ್ನು ಆರಾಧಿಸಿ, ಸಂತಾನವನ್ನು ಪಡೆಯಬೇಕಾದುದು ಯುಕ್ತವೇ ಆದರೂ ಮುದುಕರಾದ ನಮಗೆ ಮಕ್ಕಳಾಗುವ ಬಗೆ ಹೇಗೆ ? ಇದು ಅಸಾಧ್ಯ ಪ್ರಯತ್ನವಲ್ಲವೇ ?' ಎಂದು ನುಡಿದನು. ಗುಣಾಬಾಯಿಗೂ ಅದು ನಿಶ್ಚಯವೆಂದು ತೋರಿತು. ಆದರೆ ಸರ್ವಶಕ್ತನಾದ ವಿಠ್ಠಲಸ್ವಾಮಿಗೆ ತಮ್ಮಮೇಲೆ ಅನುಗ್ರಹವೊಂದು ಉಂಟಾದರೆ, ಎಂತಹ ಅಸಾಧ್ಯ ಕಾರ್ಯವಾದರೂ ಸುಲಲಿತವಾಗಿ ನೆರವೇರುವುದೆಂಬ ವಿಷಯದಲ್ಲಿ ಆಕೆಗೆ ಸಂಪೂರ್ಣ ನಂಬಿಕೆಯಿದ್ದಿತು. ಆ ಸಾಧ್ವಿಯು-'ಭಗವಂತನಿಗೆ ಅಸಾಧ್ಯವೇ !' ಎಂದುಕೊಂಡು ಪತಿಯನ್ನು ಕುರಿತು,-'ಸ್ವಾಮಿ, ತಾವು ಹೇಳುವಂತೆ ವೃದ್ಧರಾದ ನಮಗೆ ಲೋಕದೃಷ್ಟಿಯಿಂದ ಸಂತಾನವಾಗುವುದು ಅಸಾಧ್ಯವೆಂದರೂ ಭಗವಂತನಿಗೂ ಅದು ಅಶಕ್ಯಕಾರ್ಯವೆಂದು ಹೇಳಲಾದೀತೆ ? ಶ್ರೀರಾಮಚಂದ್ರನ ಅನುಗ್ರಹಬಲದಿಂದ ಸೇತುಬಂಧನ ಕಾಲದಲ್ಲಿ ಕಲ್ಲು ಸಮುದ್ರದಲ್ಲಿ ತೇಲಲಿಲ್ಲವೆ ? ಶಿಲೆಯಾಗಿ ಬಿದ್ದಿದ್ದ ಮುನಿಸತಿಯು ಪುನರ್ಜೀವಿತಳಾಗಲಿಲ್ಲವೆ? ಮೃತನಾದ ಬ್ರಾಹ್ಮಣ ಬಾಲಕನು ಬದುಕಲಿಲ್ಲವೆ? ಶ್ರೀಕೃಷ್ಣಮೂರ್ತಿಗೆ, ಯಮಸದನವನ್ನು ಸೇರಿದ್ದ ಗುರುಪುತ್ರನನ್ನು ಬದುಕಿಸಿ ತರುವುದು ಅಸಾಧ್ಯವೆನ್ನಿಸಿತೆ ? ದ್ರೋಣಪುತ್ರನ ನಾರಾಯಣಾಸ್ತ್ರಪ್ರಯೋಗದಿಂದ ನಿಸ್ಸಂತಾನರಾಗುತಿದ್ದ ಪಾಂಡವರನ್ನು ಕಾಪಾಡಿ, ಆ ಸ್ವಾಮಿಯು ಅವರ ವಂಶೋ

ದ್ಧಾರಮಾಡಲಿಲ್ಲವೆ? ಹಾಗೆಯೇ ನಮ್ಮ ವಂಶೋದ್ಧಾರಕ್ಕಾಗಿಯೂ ನಾವೇಕೆ ಆ ಸ್ವಾಮಿಯನ್ನು ಪ್ರಾರ್ಥಿಸಲಾಗದು?'' ಎಂದು ಪ್ರಶ್ನಿಸಿದಳು.

ದಾಮಾಜಿಗೆ ನಿಷ್ಕಲ್ಮಷ ಚಿತ್ತವೃತ್ತಿಯ ಆ ಸಾಧ್ವಿಯ ಪ್ರಶ್ನೆಗೆ ಏನು ಪ್ರತ್ಯುತ್ತರ ಹೇಳಬೇಕೆಂದು ತೋರಲಿಲ್ಲ. ಸ್ವಲ್ಪ ಹೊತ್ತು ಆಶ್ಚರ್ಯಮಗ್ನನಾದವನಂತೆ ಸ್ತಬ್ಧನಾಗಿ ಕುಳಿತಿದ್ದು, ತರುವಾಯ-'ನಿಜ. ಈಕೆಯು ಹೇಳುವಂತೆ ದೇವರೇ ಇಚ್ಛೆಗೊಂಡು ಮಾಡಬೇಕೆಂದರೆ ಅಸಾಧ್ಯವಾದುದಾವುದು? ದೇವರು ಇಂದು ಈಕೆಗೆ ಏಕೆ ಈ ಬಗೆಯ ಪ್ರೇರಣೆಯನ್ನುಂಟುಮಾಡಿದ್ದಾನೋ ಇದರಿಂದ ಮುಂದೇನು ನಡೆಯತಕ್ಕುದಿದೆಯೋ ಯಾರು ಬಲ್ಲರು! ಏನಾದರಾಗಲಿ, ಸರ್ವಶಕ್ತನಾದ ಸ್ವಾಮಿಯನ್ನು ಪ್ರಾರ್ಥಿಸಿಯಂತೂ ನೋಡೋಣ' ಎಂದುಕೊಂಡು ಮನೆಯಿಂದ ಹೊರಟು ವಿಠ್ಠಲಸ್ವಾಮಿಯ ಆಲಯವನ್ನು ಸೇರಿದನು. ಅಲ್ಲಿ ಶುಚಿರ್ಭೂತನಾಗಿ, ಸ್ವಾಮಿಗೆ ವಿಶೇಷ ಭಕ್ತಿಭಾವದಿಂದ ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡಿ, ಸ್ವಾಮಿಯ ಮಂಗಳಕರ ಮೂರ್ತಿಯನ್ನು ಕಣ್ಣಾರೆಯೆ ನೋಡಿ, ನಲಿದು, ಲಜ್ಜೆಯನ್ನು ದೂರಮಾಡಿ ನರ್ತಿಸಿ ಭಾವೋದ್ರೇಕವಾದಂತಾಗಲು-'ಪ್ರಭೋ, ಪುಂಡಲೀಕವರದಾ, ಇಗೋ ದೀನನಾದ ನನ್ನ ಪ್ರಾರ್ಥನೆಯನ್ನು ಲಾಲಿಸು. ಗುಣಾಬಾಯಿಯು ಪುತ್ರಾಕಾಂಕ್ಷೆಯಿಂದ ಕೊರಗುತ್ತಿರುವಳು. ವಂಶೋದ್ಧಾರಕ್ಕೊಂದು ಮೊಳಕೆಬೇಕೆಂದು ಅಪೇಕ್ಷಿಸುತ್ತಿರುವ ಆ ಸಾಧ್ವಿಯ ಇಚ್ಛೆಯನ್ನು ನೆರವೇರಿಸತಕ್ಕುದು ಯುಕ್ತವಲ್ಲವೆ? ನಿನ್ನ ಪಾದಸೇವಕರಾದ ಅಸಂಖ್ಯಭಕ್ತರ ಮನೋರಥಗಳನ್ನು ಈಡೇರಿಸುವ ದಯಾಸಮುದ್ರನು ನೀನೇ ಎಂದು ನೆರೆನಂಬಿ ಬಂದು ಇಗೋ ನಿನ್ನ ಪಾದಕಮಲಗಳನ್ನು ಆಶ್ರಯಿಸಿದ್ದೇನೆ. ಪಾಂಡವರ ವಂಶೋದ್ಧಾರಮಾಡಿದಂತಹ ನಿನಗೆ ಇದೊಂದು ಅತಿಶಯವಲ್ಲ, ತಂದೇ ಕಾಪಾಡು' ಎಂದು ಬೇಡಿಕೊಂಡನು. ಅಷ್ಟರಲ್ಲಿ ವಿಶೇಷಭಾವೋದ್ರೇಕದಿಂದ ದೇಹದಮೇಲೆ ಮರವೆಯುಂಟಾದಂತೆ ಆಗಲು, ಹಾಗೆಯೇ ಸ್ಮೃತಿತಪ್ಪಿ ಮಲಗಿಬಿಟ್ಟನು. ತರುವಾಯ ಎಷ್ಟೋ ಹೊತ್ತಿನವರೆಗೆ ಪ್ರಜ್ಞೆಯೇ ಉಂಟಾಗದೆ, ದಾಮಾಜಿಯು ಸಮಾಧಿಮಗ್ನನಾದ ಮಹಾಯೋಗಿಯಂತೆ ಅಂತರ್ಮುಖನಾಗಿದ್ದನು. ಈ ಮಧ್ಯದಲ್ಲಿ ಆತನಿಗೊಂದು

ಕನಸಾಯಿತು. ಅದರಲ್ಲಿ ವಿಠ್ಠಲಸ್ವಾಮಿಯು, ವೃದ್ಧ ಬ್ರಾಹ್ಮಣ ರೂಪದಿಂದ ದರ್ಶನವಿತ್ತು, 'ದಾಮಾಜೀ. ಚಿಂತಿಸಬೇಡ. ನಿನ್ನ ಪ್ರಾರ್ಥನೆಯು ಸ್ವಾಮಿಸನ್ನಿಧಿಯಲ್ಲಿ ಅರಿಕೆಯಾಗಿದೆ. ನಿನಗೊಂದು ಪುತ್ರಸಂತಾನವು, ಬಹು ಶೀಘ್ರಕಾಲದಲ್ಲೇ ಆಗುವುದು. ಈ ವಿಷಯದಲ್ಲಿ ಶಂಕೆಗೊಳ್ಳಬೆ, ನಾಳೆ ಪ್ರಾತಃಕಾಲವೇ ಭೀಮಾತೀರ್ಥಕ್ಕೆ ಹೋಗು. ಅಲ್ಲಿ ನಿನಗೆ ಒಂದು ದೊಡ್ಡ ಮುತ್ತಿನ ಚಿಪ್ಪು ದೊರೆಯುವುದು. ಅದರಲ್ಲೊಂದು ಗಂಡು ಮಗುವಿರುವುದು. ಆ ಮಗುವನ್ನು ಪಡೆದು, ಮನೆಗೆ ಕೊಂಡೊಯ್ದು ನಿನ್ನ ಪತ್ನಿಗೆ ಒಪ್ಪಿಸು. ಆ ಬಾಲಕನು ಮುಂದೆ ನಾಮದೇವನೆಂದು ಮಹಾ ಪ್ರಸಿದ್ಧನಾಗುವನು. ಶ್ರೀಕೃಷ್ಣ ಭಕ್ತನಾದ ಉದ್ಧವನ ಅಂಶಸಂಭೂತನಾದ ಆತನಿಂದ ನಿನ್ನ ವಂಶವೇ ಪಾವನವಾಗುವುದು' ಎಂದು ನುಡಿದು ಆ ವೃದ್ಧ ಬ್ರಾಹ್ಮಣನು ಅದೃಶ್ಯವಾಗಿಹೋದನು. ಈ ವಿಚಿತ್ರ ಪರಿಸ್ಥಿತಿಯನ್ನು ಕಂಡು ದಾಮಾಜಿಯು ತಟ್ಟನೆ ಎಚ್ಚರಗೊಂಡು, ಸ್ವಾಮಿಗೆ ಮತ್ತೊಂದುಬಾರಿ ದೀರ್ಘದಂಡ ನಮಸ್ಕಾರಮಾಡಿ, ಅಲ್ಲಿ ನಿಲ್ಲಲು ಮನಸ್ಸು ಸ್ಥಿರಗೊಳ್ಳದಿರಲು ಸೇರವಾಗಿ ಹೊರಟು ಮನೆಗೆ ಬಂದನು.

ತನಗೆ ದೇವಸ್ಥಾನದಲ್ಲಿ ಆದ ಅನುಭವವನ್ನೂ ಕನಸಿನಲ್ಲಿ ಪಂಡರಿನಾಥನು ಪ್ರತ್ಯಕ್ಷವಾಗಿ ಪುತ್ರಭಿಕ್ಷೆಯನ್ನನುಗ್ರಹಿಸಿದ ವೃತ್ತಾಂತವನ್ನೂ ತನ್ನ ಪತ್ನಿಗೆ ತಿಳಿಸಿಬಿಡಬೇಕೆಂದು ನಾಲಿಗೆಯು ಬಹು ಚಪಲಗೊಂಡಿತು. ವೃದ್ಧ ಬ್ರಾಹ್ಮಣನು ಸಂದೇಹಗೊಳ್ಳಬೇಡವೆಂದು ಹೇಳಿದ್ದನಾದರೂ, ಮುತ್ತಿನ ಚಿಪ್ಪಿನಲ್ಲಿ ಮಗುವು ತೇಲಿಬರುವುದೆಂಬುದನ್ನು ಆತನು ನಂಬಲಾರದೆ, 'ಆಗಲಿ, ನಾಳೆ ಪ್ರಾತಃಕಾಲ ನಿಶ್ಚಯವಾಗಿ ದೊರೆತಮೇಲೆಯೇ ತಿಳಿಯಲಿ. ಈಗ ನಾನು ಮಗು ದೊರೆಯುವುದೆಂದು ಹೇಳಿ, ಒಂದುವೇಳೆ ಹಾಗಾಗದಿದ್ದರೆ ಅದು ಸರಿಯಿಲ್ಲ' ಎಂದುಕೊಂಡು, ಬಹು ಪ್ರಯಾಸದಿಂದ ನಾಲಗೆಯನ್ನು ಬಿಗಿ ಹಿಡಿದುಕೊಂಡಿದ್ದನು. ಆ ರಾತ್ರಿ, ಆತನಿಗೆ ನಿದ್ರೆಯೇ ಹತ್ತಲಿಲ್ಲ. ಮನಸ್ಸು ಪುತ್ರಲಾಭದ ಆನಂದದ ತರಂಗಗಳಲ್ಲಿ ಓಲಾಡುತ್ತಲಿತ್ತು. ಹಾಗೆಯೇ ರಾತ್ರಿ ಕಳೆದು ಪ್ರಾತಃಕಾಲವಾಗುತ್ತಿರಲು ದಾಮಾಜಿಯು ಪದ್ಧತಿಯಂತೆ ಅರುಣೋದಯ ಕಾಲಕ್ಕೇ ಎದ್ದು, ಸ್ನಾನಕ್ಕೆಂದು ಭೀಮಾತೀರ್ಥಕ್ಕೆ ನಡೆದನು. ಸ್ನಾನಮಾಡಿ ನಾಮಧಾರಣೆಮಾಡಿಕೊಂಡು ಮನಸಾ ವಿಠ್ಠ

ಲನ ಪಾದಕಮಲಗಳನ್ನು ಧ್ಯಾನಿಸಿ, ಹಿಂದಿನ ರಾತ್ರಿ ತನಗೆ ಆದ ಕನಸನ್ನು ಸಾರ್ಥಕಗೊಳಿಸೆಂದು ಬೇಡಿಕೊಂಡನು. ತರುವಾಯ ಭಗವದನುಗ್ರಹವು ಯಾವ ರೂಪದಿಂದ ಆಗಲಿರುವುದೋ ಎಂದು ನಟ್ಟದೃಷ್ಟಿಯಿಂದ ನದಿಯ ಕಡೆಗೇ ನೋಡುತ್ತ ನಿಂತಿರಲು, ಮುಂದೆ ಸ್ವಲ್ಪ ಹೊತ್ತಿನಲ್ಲೇ ಒಂದು ದೊಡ್ಡ ಮುತ್ತಿನ ಚಿಪ್ಪು ನದಿಯಲ್ಲಿ ತೇಲಿಬಂದಿತು. ಅದನ್ನು ಕಂಡೊಡನೆಯೇ ದಾಮಾಜಿಯು ಕ್ಷಣಮಾತ್ರವೂ ಸಾವಕಾಶಮಾಡದೆ, ನೀರಿಗಿಳಿದು ತೇಲಿಬರುತ್ತಲಿದ್ದ ಆ ಮುತ್ತಿನ ಚಿಪ್ಪನ್ನು ನವನಿಧಿಗಳನ್ನು ಎತ್ತಿಕೊಳ್ಳುವ ಕಡು ಬಡವನಂತೆ ಎರಡು ಕೈಗಳಿಂದಲೂ ಎತ್ತಿ ತೆಗೆದುಕೊಂಡು ದಡಕ್ಕೆ ತಂದನು.

'ವೃದ್ಧಬ್ರಾಹ್ಮಣನು ಸ್ವಪ್ನದಲ್ಲಿ ಹೇಳಿದ ಮಾತು ನಿಶ್ಚಯ. ಭಗವದನುಗ್ರಹವಾಯಿತು.' ಎಂದು ಪರಮ ಸಂಭ್ರಮದಿಂದ ಆ ಚಿಪ್ಪನ್ನು ಬಿಚ್ಚಿದನು. ಆಶ್ಚರ್ಯವಾಶ್ಚರ್ಯವು! ಪರಮಾಶ್ಚರ್ಯ ವೃತ್ತಾಂತವಿದು. ಮುತ್ತಿನ ಚಿಪ್ಪೊಂದರಲ್ಲಿ ಮಗುವು ನದಿಯಲ್ಲಿ ತೇಲಿ ಬರುವುದೆಂದರೇನು ? ದಾಮಾಜಿಗೆ ಭಗವನ್ಮಹಿಮೆಯು ಅಚಿಂತನೀಯವಾದುದೆಂದು ತೋರಿತು. ದಿವ್ಯಸುಂದರ ವಿಗ್ರಹದ ಆ ಮಗುವನ್ನು ನೋಡಿ ನೋಡಿದಂತೆ ಆನಂದಾಶ್ರುವು ಮೂಡುವುದು. ಆನಂದಾಧಿಕ್ಯದಿಂದ ಬಾಯಲ್ಲಿ ಮಾತು ಹೊರಡದೆ ಗಂಟಲು ಕಟ್ಟಿದಂತಾಯಿತು. ಮಗುವನ್ನು ಕೈಯಲ್ಲೇ ಎತ್ತಿಕೊಂಡಿದ್ದಾನೆ. ಕಣ್ಣುಗಳಲ್ಲಿ ಆನಂದಾಶ್ರುವು ಧಾರೆಧಾರೆಯಾಗಿ ಸುರಿಯುತ್ತಿದೆ. ಕೃತಜ್ಞತೆಯಿಂದ ವಿಠ್ಠಲಸ್ವಾಮಿಯನ್ನು ಸಂಬೋಧಿಸಿ ಎರಡು ಮಾತುಗಳನ್ನಾಡಬೇಕೆಂದು ಇಚ್ಛೆಯಾಗುತ್ತದೆ. ಆದರೇನು ಮಾಡುವುದು ! ಬಾಯಿಂದ ಮಾತೇ ಹೊರಡದು. ಆ ಸ್ಥಿತಿಯಲ್ಲಿ ದಾಮಾಜಿಯು ಮತ್ತೇನೂ ಮಾಡಲಾರದೆ, ವಿಠ್ಠಲನ ದೇವಸ್ಥಾನದ ಕಡೆಗೆ ನಟ್ಟದೃಷ್ಟಿಯಿಂದ ನೋಡುತ್ತಾ, ಕೈಯಲ್ಲಿದ್ದ ಶಿಶುವು ಸ್ವಾಮಿಯ ಅನುಗ್ರಹದಿಂದ ಲಭ್ಯವಾದುದೆಂಬುದನ್ನು ಸೂಚಿಸುವಂತೆ ಆ ಕಡೆಗೆ ಎತ್ತಿ ತೋರಿಸುತ್ತಾ, ಬಾಯಿಂದ ನುಡಿಯು ಹೊರಡದಿರಲು ಭಾವೋದ್ರೇಕವನ್ನು ತಡೆದುಕೊಳ್ಳಲಾರದೆ ಬಿಕ್ಕಿ ಬಿಕ್ಕಿ ಅಳುತ್ತಾ, ಎಳೆಯ ಮಗುವಿನಂತೆ ಕಣ್ಣುಗಳಿಂದ ಧಾರಾಳವಾಗಿ ನೀರು ಸುರಿಸುತ್ತಾ, ಇಚ್ಛಾಶೂನ್ಯವಾಗಿ ಕಾಲುಗಳು

ಯಾವ ಕಡೆಗೆ ನಡೆದರೆ ದೇಹವು ಆ ಕಡೆಗೆ ಸಾಗುತ್ತಿರಲು ನದಿಯಲ್ಲೇ ನಡೆದು ದಂಡೆಯ ಕಡೆಗೆ ಬಂದನು. ಮಗುವನ್ನು ಕೈಯಲ್ಲೇ ಹಿಡಿದುಕೊಂಡು ಅದನ್ನೇ ದಿಟ್ಟಿಸಿ ನೋಡುತ್ತಾ, ಸ್ವಲ್ಪದೂರ ನಡೆವುದರೊಳಗಾಗಿಯೇ, ಆ ಮಗುವು ತನ್ನದೆಂಬ ಭಾವನೆಯು ಮನಸ್ಸಿನಲ್ಲಿ ಅಂಕುರಿಸಿತು. ದೈವದತ್ತವಾದ ಅಂತಹ ಶಿಶುವನ್ನು ಪಡೆದ ತನ್ನ ಸಮಾನ ಭಾಗ್ಯಶಾಲಿಯಾರು ಎಂಬ ಸೂಕ್ಷ್ಮಾಹಂಕಾರವೂ ಮನಸ್ಸಿನಲ್ಲಿ ಉದ್ಭವಿಸಿತು -ಧನ್ಯನಾದೆನು. ನನ್ನ ವಂಶವು ಪಾವನವಾಯಿತು. ನನ್ನ ಪಿತೃಗಳೆಲ್ಲರೂ ಸದ್ಗತಿಗೆ ಸಂದರು- ಎಂದು ಮನಸ್ಸಿನಲ್ಲಿ ಎಷ್ಟೆಷ್ಟೋ ಧನ್ಯವಾದಗಳನ್ನು ನುಡಿದುಕೊಂಡನು. ಅಷ್ಟರಲ್ಲಿ ಮಗುವಿಗಾಗಿ ಹಲವು ಕಾಲದಿಂದ ಹಂಬಲಿಸುತ್ತಿದ್ದ ತನ್ನ ಪತ್ನಿಯ ಜ್ಞಾಪಕ ಬಂದಿತು. ಇನ್ನು ಸಾವಕಾಶ ಮಾಡಲಾಗದೆಂದು ಕೊಂಡು, ಬೇಗ ಬೇಗ ಹೆಜ್ಜೆ ಹಾಕುತ್ತಾ ನಡೆದು, ಬಂದು ಮನೆಯನ್ನು ಸೇರಿ, ತಾನು ತಂದಿದ್ದ ಆ ಅಮೌಲ್ಯನಿಧಿಯನ್ನು ಗುಣಾಬಾಯಿಯ ಕೈಗೆ ಒಪ್ಪಿಸಿದನು. ಪಿಳಿಪಿಳಿ ಎಂದು ಕಣ್ಣು ಬಿಟ್ಟುಕೊಂಡು ಎಳೆನೋಟದಿಂದ ತನ್ನನ್ನು ನೋಡುತ್ತ, ಕೈಕಾಲುಗಳನ್ನು ಬಡಿದಾಡಿಸುತ್ತಿದ್ದ ಆ ಕಂದಮ್ಮನನ್ನು ಕರೆದುಕೊಂಡು ಗುಣಾಬಾಯಿಯು, ತನ್ನದೆಂಬ ಮೋಹವು ಉಕ್ಕಿಬರಲು ಎದೆಗಪ್ಪಿಕೊಂಡು, ಮನದ ದಣಿವು ತೀರುವಂತೆ ಮುದ್ದಿಕ್ಕುತ್ತಾ, ಪುನಃ ಪುನಃ ಅಪ್ಪಿಕೊಳ್ಳುತ್ತಾ,-ಎಲ್ಲಿ ದೊರೆಯಿತು ! ಏನು ಸಮಾಚಾರ ! ಎಂದು ಮುಂತಾಗಿ ವಿಚಾರಿಸಲೂ ಸಮಯವಿಲ್ಲದೆ, ಆನಂದ ಬಾಷ್ಪವು ಅವಿರಳವಾಗಿ ಸುರಿದು ಹೋಗುತ್ತಿರಲು, ಗಂಟಲ ನರಗಳು ಉಬ್ಬಿ ಸ್ವರವು ಅಸ್ಪಷ್ಟವಾಗುತ್ತಿರಲು, ಮಗುವನ್ನು ಕೈಯಿಂದೆತ್ತಿ, ಪಾಂಡುರಂಗಸ್ವಾಮಿಯ ದೇವಸ್ಥಾನವಿದ್ದ ದಿಕ್ಕಿಗೆ ತಿರುಗಿ 'ಪ್ರಭೋ ಪಾಂಡುರಂಗ ನಿನ್ನ ಪ್ರಸಾದವಿದು. ಇದನ್ನು ಸುರಕ್ಷಿತವಾಗಿರಿಸುವ ಭಾರವು ನಿನ್ನದಪ್ಪಾ !' ಎಂದು ಮಾತೃ ಪ್ರೇಮವು ಉಕ್ಕಿಬರಲು ಅಂಗಲಾಚಿಕೊಂಡಳು.

ಭಗವದ್ದತ್ತವಾದುದಾದರೂ, ಮನುಷ್ಯ ಶಿಶುವಲ್ಲವೆ? ಮಗುವು ಅಳಲಾರಂಭಿಸಿತು. ಅಳುವ ಮಗುವನ್ನು ಸಮಾಧಾನ ಮಾಡುವ ಪರಿಯೇನೆಂದು ತೋರದೆ ಎದೆಗಪ್ಪಿ ಮುದ್ದು ಮಾತುಗಳಿಂದ ಲಾಲಿಸತೊಡಗುವ ವೇಳೆಗೆ-ಪರಮಾಶ್ಚರ್ಯದ ಸಂಗತಿ, ಗುಣಾಬಾಯಿಯ ಸ್ತನಗಳಿಂದ ಹಾ

ಲು ಒಸರಲಾರಂಭವಾಯಿತು. ಅದನ್ನು ಕಂಡನೋಲಂತೂ ಆಕೆಗೆ ಭಗವಂತನು ತನ್ನ ಮೇಲೆ ಎಷ್ಟುಮಟ್ಟಿನ ಕೃಪಾಕಟಾಕ್ಷವಿಟ್ಟಿದ್ದಾನೆಂಬುದು ಸ್ಮರಣೆಗೆ ಬಂದು ಆ ದೇವಾದಿದೇವನನ್ನು ನುಡಿಗೆ ನೂರುಸಾರಿ ಸ್ಮರಿಸುತ್ತಾ, ಹರಸಿಕೊಳ್ಳುತ್ತಾ-'ಪ್ರಭೋ ದೀನರಾದ ನಮ್ಮನ್ನು ಇಷ್ಟುಮಟ್ಟಿಗೆ ಅನುಗ್ರಹಿಸಿದ ಪರಮ ದಯಾಶರಧಿಯಾದ ನಿನ್ನನ್ನು ಏನೆಂದು ಸ್ತುತಿಸಬಲ್ಲೆವು.-ಎಂದು ಮೇಲೆ ಮೇಲೆ ಪ್ರಾರ್ಥಿಸಿ ಅದಕ್ಕೆ ಸ್ತನ್ಯಪಾನ ಮಾಡಿಸಿ ಲಾಲಿಸಿದಳು. ಮಗುವು ಅಂದೇ ಜನನವಾದುದೆಂಬ ಲೆಕ್ಕವನ್ನಿಟ್ಟುಕೊಂಡು ಹನ್ನೊಂದನೆಯ ದಿನ ತೊಟ್ಟಿಲಲ್ಲಿಟ್ಟು ಮುತ್ತೈದೆಯರು-ನಾಮದೇವ-ಎಂಬ ನಾಮವನ್ನಿಟ್ಟು ಕರೆದರು. ನೆರೆದ ನೆರೆಹೊರೆಯ ಸ್ತ್ರೀಜನರೆಲ್ಲರೂ ವಯಸ್ಸು ಗಳಿತವಾಗಿದ್ದ ಗುಣಾಬಾಯಿಗೆ ಆಕಸ್ಮಿಕವಾಗಿ ಪುತ್ರ ಸಂಪತ್ತು ಪ್ರಾಪ್ತವಾದ ಆ ಅಪೂರ್ವ ವೃತ್ತಾಂತವನ್ನು ಕುರಿತು ವಿವಿಧ ರೀತಿಯ ಕಥೆಗಳಿಂದ ಬಣ್ಣಿಸುತ್ತಾ ತಮ್ಮ ತಮ್ಮ ಮನೆಗಳಿಗೆ ನಡೆದರು.

ದಾಮಾಜಿಯೂ ಗುಣಾಬಾಯಿಯೂ ಸ್ವಾಮಿಯು ತಮ್ಮ ವಿಷಯದಲ್ಲಿ ತೋರಿಸಿದ ಕೃಪೆಗಾಗಿ ವಿಶೇಷ ಕೃತಜ್ಞರಾಗಿ, ಇಬ್ಬರೂ ಮಗುವನ್ನೆತ್ತಿಕೊಂಡು ಪಾಂಡುರಂಗವಿಠ್ಠಲನ ದೇವಾಲಯಕ್ಕೆ ಪ್ರಯಾಣಮಾಡಿ, ಭಗವತ್ಸ್ವಾಮಿಯ ಸನ್ನಿಧಿಯಲ್ಲಿ ಮಗುವನ್ನು ಮಲಗಿಸಿ.-'ಪ್ರಭೋ ದಯಾನಿಧೇ, ನಿನ್ನ ವರಪ್ರಸಾದವಿದು. ಈ ವಂಶಾಂಕುರವನ್ನು ಅನುಗ್ರಹಿಸಿ ನಮ್ಮ ಇಹ ಜೀವಿತವನ್ನು ಸಾರ್ಥಕಗೊಳಿಸಿದೆ. ಇಂದಿನಂತೆಯೇ ಎಂದೆಂದಿಗೂ ಈ ನಮ್ಮ ಕಂದನಮೇಲೆ ನಿನ್ನ ಕೃಪಾಕಟಾಕ್ಷವು ಶಾಶ್ವತವಾಗಿದ್ದು ರಕ್ಷಿಸುತ್ತಿರಲಿ, ಎಂದು ಪ್ರಾರ್ಥಿಸಿ ಮನೆಗೆ ಬಂದರು. ಅಪೂರ್ವರೀತಿಯಿಂದ ಜನನ ಹೊಂದಿದ ಶಿಶು ನಾಮದೇವನು ಬಾಲ್ಯ ಸಹಜವಾದ ಹಲವು ಬಗೆಯ ಲೀಲೆಗಳಿಂದ ಆ ಮಾತಾಪಿತೃಗಳಿಗೆ ಪರಮಾನಂದದಾಯಕನಾಗಿ ದಿನದಿನಕ್ಕೆ ಬೆಳೆಯುತ್ತಿದ್ದನು.



## ಅಧ್ಯಾಯ ೨ "ವಿವಾಹ"

ನಾಮದೇವನು ಗುಣಾಬಾಯಿಯ ಗರ್ಭವಾಸಮಾಡಿ ಹುಟ್ಟಿದ ಮಗನಲ್ಲದಿದ್ದರೂ, ಆಕೆಗೆ ಭಗವದನುಗ್ರಹದಿಂದ ಶಿಶುವಿಗೆ ಸ್ತನ್ಯಪಾನ ಮಾಡಿಸುವ ಸಾಮರ್ಥ್ಯವುಂಟಾದುದು ಅವರ ನೆರೆಹೊರೆಯಲ್ಲಿದ್ದ ಸಕಲರಿಗೂ ಪರಮಾಶ್ಚರ್ಯವನ್ನುಂಟುಮಾಡಿತು. ಮಾತ್ರವಲ್ಲ-ಅಯೋನಿಜಾತನೋ ಎಂಬಂತೆ ಮುತ್ತಿನ ಚಿಪ್ಪಿನಲ್ಲಿ ತೇಲುತ್ತಾ ಬಂದು, ಶ್ರೀ ಪಾಂಡುರಂಗಸ್ವಾಮಿಯ ವರಪ್ರಸಾದದಿಂದ ದಾಮಾಜಿಗೆ ಪುತ್ರನಾಗಿ ದೊರೆತ ಆ ಬಾಲಕನಲ್ಲಿ ಜನ್ಮಾರಭ್ಯ ಯಾವುದೋ ಒಂದು ದೈವಿಕ ಶಕ್ತಿಯಿದೆಯೆಂದು, ಭಾವುಕರಾದ ಆ ಜನಗಳೆಲ್ಲರೂ ನಂಬಿದರು. ಬಾಲಕನ ವಿಷಯದಲ್ಲಿ ಪ್ರಾರಂಭದಿಂದಲೂ ಈ ಬಗೆಯ ಒಂದು ಉನ್ನತಾಭಿಪ್ರಾಯವು ಏರ್ಪಟ್ಟಿದರಿಂದ ಬಾಲಕ ನಾಮದೇವನು ಆಡುವ ಒಂದೊಂದು ಮಾತೂ ಮಾಡುವ ಒಂದೊಂದು ಚೇಷ್ಟೆಯೂ, ಒಂದೊಂದು ಆಟವೂ ಅವರಿಗೆ ಬೇರೊಂದು ದೃಷ್ಟಿಯಿಂದಲೇ ಕಾಣಿಸುತ್ತಿದ್ದುವು ಆ ಬಾಲಕನು, ತನ್ನ ಜನ್ಮದಿಂದ ಲೋಕದಲ್ಲಿ ಯಾವುದೋ ಒಂದು ಮಹತ್ಕಾರ್ಯವನ್ನು ಸಾಧಿಸಲಿಕ್ಕಾಗಿಯೇ ಅವತರಿಸಿರುವ ಯಾವನೋ ಒಬ್ಬ ಮಹಾತ್ಮನ ಚೇತನನೆಂದೇ ಭಾವಿಸಿ ಗೌರವಿಸುತ್ತಿದ್ದರು. ನಾಮದೇವನು ಹೀಗೆ ಜನಗಳಿಂದ ಗೌರವಿಸಲ್ಪಡುತ್ತಾ, ಬಾಲ್ಯದ ಎರಡು ಮೂರು ವರ್ಷಗಳನ್ನು ಕಳೆದನು. ತಾಯಿತಂದೆಗಳಾದ ದಾಮಾಜಿ-ಗುಣಾಬಾಯಿಯರು ತಮ್ಮ ಮಗನ ಅಪೂರ್ವ ಬಾಲಲೀಲೆಗಳನ್ನು ಕಂಡು ಪರಮಾನಂದಗೊಂಡು, ಆ ಮಗುವನ್ನು ಪಡೆದ ತಮ್ಮ ಜನ್ಮವು ಸಾರ್ಥಕವಾಯಿತೆಂದುಕೊಳ್ಳುತ್ತಿದ್ದರು.

ನಾಮದೇವನಿಗೆ ಸುಮಾರು ಆರೇಳು ವರ್ಷಗಳಿರಬಹುದು. ಆಗ ಒಂದು ವಿಚಿತ್ರ ಸಂಗತಿಯು ನಡೆಯಿತೆಂದು ಆತನ ಚರಿತ್ರೆಯಲ್ಲಿ ಹೇಳಲ್ಪಟ್ಟಿದೆ. ದಾಮಾಜಿಯು ಏನೋ ಒಂದು ಕೆಲಸದಮೇಲೆ ಪಕ್ಕದ ಒಂದು ಊರಿಗೆ ಹೋಗಿ ಬರಬೇಕಾಯಿತು. ಹಾಗೆ ಹೊರಡುವಾಗ್ಗೆ ತನ್ನ ಪತ್ನಿಯನ್ನು ಕರೆದು,-'ನಾನು ಒಂದೆರಡು ದಿನಗಳಮಟ್ಟಿಗೆ ಪರಸ್ಥಳಕ್ಕೆ ಹೋಗಿ ಬರಬೇಕಾಗಿದೆ. ಇತರ ಎಲ್ಲಾ ಕೆಲಸಗಳೂ ಹೇಗಾದರೂ ನಡೆಯಬಹುದು.

ಅಥವ ನಡೆಯದೆ ಒಂದೆರಡು ಕೆಲಸಗಳು ನಿಂತರೂ ಬಾಧಕವಿಲ್ಲ. ಆದರೆ ಪಾಂಡುರಂಗ ವಿಠ್ಠಲಸ್ವಾಮಿಯ ಪೂಜೆಯನ್ನು ಮಾತ್ರ ಎಂದೂ ನಿಲ್ಲಿನದಂತೆ ಜಾಗರೂಕನಾಗಿರು. ನಮ್ಮ ನಾಮದೇವನ ಕೈಯಲ್ಲಿ ಪೂಜಾ ಸಾಮಗ್ರಿಗಳನ್ನು ಕೊಟ್ಟು ಕಳುಹಿಸು. ಅವನು ನಾನು ಊರಿಗೆ ಬರುವವರೆಗೆ ಒಂದು ದಿನವಾದರೂ ಸ್ವಾಮಿಗೆ ಅಭಿಷೇಕ ಅರ್ಚನೆ ನಿವೇದನ ಮುಂತಾದವುಗಳನ್ನು ನೆರವೇರಿಸುವುದರಲ್ಲಿ ಉದಾಶೀನನಾಗದಂತೆ ನೋಡಿಕೊ' ಎಂದು ಆಜ್ಞಾಪಿಸಿ ಹೊರಟು ಹೋದನು

ಮಾರನೆಯ ಪ್ರಾತಃಕಾಲ ಗುಣಾಬಾಯಿಯು ನಾಮದೇವನನ್ನು ಸಮೀಪಕ್ಕೆ ಕರೆದು-'ಮಗು ನಿಮ್ಮ ತಂದೆಯವರು ಊರಿಗೆ ಹೊರಡುವಾಗ್ಗೆ ವಿಠ್ಠಲಸ್ವಾಮಿಯ ಪೂಜೆಗೆ ನಿನ್ನನ್ನು ಕಳುಹಿಸಬೇಕೆಂದು ಹೇಳಿದ್ದಾರೆ. ಇಗೋ ಈ ಪದಾರ್ಥಗಳನ್ನು ತೆಗೆದುಕೊಂಡು ಹೋಗಿ ಸ್ವಾಮಿಯ ಆರಾಧನೆಯನ್ನು ಮಾಡಿಕೊಂಡು ಬಾ' ಎಂದು ಹೇಳಿದಳು. ನಾಮದೇವನು ಚಿಕ್ಕತನದಿಂದಲೂ ಬಹು ಶ್ರದ್ಧೆಯಿಂದ ನಡೆದ ಬಾಲಕನಾದುದರಿಂದ ತಾಯಿಯ ಆ ಮಾತಿಗೆ ಪ್ರತಿ ನುಡಿಯದೆ, ಒಡನೆ ಸ್ನಾನಮಾಡಿ, ಶುಭ್ರ ವಸ್ತ್ರವನ್ನು ಧರಿಸಿ, ಕುಲಾಚಾರ ಚಿನ್ಹೆಗಳನ್ನು ಹಚ್ಚಿಕೊಂಡು ಒಂದು ಕೈಯಲ್ಲಿ ಪೂಜಾ ಸಾಮಗ್ರಿಗಳನ್ನೂ, ಮತ್ತೊಂದರಲ್ಲಿ ನೈವೇದ್ಯದ ಪದಾರ್ಥಗಳನ್ನೂ ತೆಗೆದುಕೊಂಡು ದೇವಸ್ಥಾನಕ್ಕೆಂದು ಹೊರಟನು. ಚಿಕ್ಕಂದಿನಿಂದಲೂ ಭಾವನಾಮಯ ಮನಸ್ಥಿತಿಯುಳ್ಳವನಾಗಿದ್ದ ಆ ಬಾಲಕನು ಏಕಾಂಗಿಯಾಗಿ ಅಂದು ದೇವಸ್ಥಾನವನ್ನು ಹೊಕ್ಕದ್ದರಲ್ಲಿ ಅವನಿಗೆ, ಬಹು ಕೌತುಕವೆನ್ನಿಸಿತು. ಅಲ್ಲಿ, ಆ ಗುಡಿಯಲ್ಲಿ ಒಬ್ಬರೂ ಇರಲಿಲ್ಲ. ನಾಮದೇವನು ಅಲ್ಲಿ ಇಲ್ಲಿ ನಿಲ್ಲದೆ ನೇರವಾಗಿ ಗರ್ಭಗುಡಿಯ ಸಮೀಪಕ್ಕೆ ಹೊರಟು ನಡೆದನು. ತಾನು ಒಂದು ಕೈಯಲ್ಲಿ ತಂದಿದ್ದ ಜಲಪಾತ್ರೆಯನ್ನು ಕೈಗೆ ತೆಗೆದುಕೊಂಡು ಸ್ವಾಮಿಗೆ ದಿವ್ಯವಾಗಿ ಮಜ್ಜನ ಮಾಡಿಸಿದನು. ವಸ್ತ್ರಾದಿಗಳನ್ನಿಟ್ಟು ಅಲಂಕರಿಸಿದನು. ತರುವಾಯ ತಾನು ತಂದಿದ್ದ ನೈವೇದ್ಯದ ಪದಾರ್ಥವನ್ನು ಎದುರಿಗಿಟ್ಟು ಎರಡು ಕೈಗಳನ್ನೂ ಮುಗಿದು ಭೋಜನ ಮಾಡೆಂದು ಒಪ್ಪಿಸಿದನು. ತಾನು ಮಾಡಿದ ಇತರ ಉಪಚಾರಗಳನ್ನೆಲ್ಲ ಸ್ವೀಕರಿಸಿತೆಂದು ಕಲ್ಲಿನ ವಿಗ್ರಹವು ನೈವೇದ್ಯದ ಪದಾರ್ಥವನ್ನು ಉಣ್ಣುವುದು ಸಾಧ್ಯವೇ ? ನಾಮದೇ

ವನು ಸ್ವಲ್ಪಹೊತ್ತು ಕಾದನು. ಮತ್ತೂ ಸ್ವಲ್ಪಹೊತ್ತು ಸುಮ್ಮನಿದ್ದನು, ಇನ್ನೂ ಸ್ವಲ್ಪ ಹೊತ್ತಾಯಿತು. ವಿಠ್ಠಲಸ್ವಾಮಿಯು ಊಟಮಾಡುವ ಮಾರ್ಗವೇ ತೋರಲಿಲ್ಲ. 'ಊಟಮಾಡು — ಬೇಗ ಊಟಮಾಡು, ತಾಯಿಯು ಕೋಪಮಾಡುತ್ತಾಳೆ, ಮನೆಗೆ ಹೋಗಬೇಕು' ಎಂದು ಅವಸರಗೊಳಿಸಿದನು. ಪಾಂಡುರಂಗಸ್ವಾಮಿಯ ಶಿಲಾವಿಗ್ರಹವು ಎಂದಿನಂತೆಯೇ ನಿಶ್ಚಲವಾಗಿದ್ದಿತು. ನಾಮದೇವನು, ಆ ದಿನ ಹುಡುಗನಾದ ತಾನು ಬಂದೆನೆಂದು ದೇವರು ಉದಾಶೀನ ಭಾವದಿಂದ ಊಟ ಮಾಡುವುದಿಲ್ಲವೆಂದೂ, ನಿತ್ಯವೂ ತನ್ನ ತಂದೆಯು ಪೂಜೆಗೆ ಬರುತ್ತಿದ್ದುದರಿಂದ ದೇವರು ಊಟಮಾಡುತ್ತಿದ್ದನೆಂದೂ ತಿಳಿದನು.. ಮತ್ತು ಆದಿನ ದೇವರಿಗೆ ಊಟಮಾಡಿಸದೆ ನೈವೇದ್ಯದ ಆ ಪದಾರ್ಥಗಳನ್ನು ಮನೆಗೆ ತೆಗೆದುಕೊಂಡು ಹೋದರೆ ತನ್ನ ತಾಯಿಯು ದೇವರಿಗೆ ಊಟಮಾಡಿಸದೆ ಹಾಗೆಯೇ ಹೊರಟು ಬಂದೆಯೆಂದು ತನ್ನ ಮೇಲೆ ಕೋಪಗೊಳ್ಳಬಹುದೆಂದು ಭಾವಿಸಿದನು. ಎಷ್ಟು ಹೊತ್ತು ಕಾದರೂ ದೇವರು ಊಟಮಾಡುವ ಪರಿಯೇ ಕಂಡು ಬರಲಿಲ್ಲ. ನಾಮದೇವನು, ದೇವರೆದುರಿಗೆ ನಿಂತು—'ಸ್ವಾಮಿ, ನಾನೇನೂ ಅರಿತವನಲ್ಲ. ನಿನ್ನನ್ನು ಹೇಗೆ ಪೂಜಿಸಬೇಕೋ ತಿಳಿಯದು. ನನಗೆ ತೋರಿದಂತೆ ಪೂಜೆ ಮಾಡಿದ್ದೇನೆ. ಕೋಪಗೊಳ್ಳದೆ ನನ್ನ ತಪ್ಪು ಎಷ್ಟಿದ್ದರೂ, ಏನಿದ್ದರೂ ಕ್ಷಮಿಸಿ ಊಟಮಾಡು. ನೀನಿಲ್ಲಿ ಊಟ ಮಾಡದಿದ್ದೆಯೆಂದರೆ ಮನೆಯಲ್ಲಿ ನನ್ನ ತಾಯಿಯು—ನೀನೇನು ತಪ್ಪುಮಾಡಿದೆಯೋ, ಅದಕ್ಕೇ ವಿಠ್ಠಲನು ಮುನಿದು ನೈವೇದ್ಯ ಸ್ವೀಕಾರಮಾಡಲಿಲ್ಲ-ಎಂದು ನನ್ನನ್ನು ಹೊಡೆಯುವಳು' ಎಂದು ಬಹು ಪರಿಯಿಂದ ಅಂಗಲಾಚಿಕೊಂಡನು. ಆದರೂ ಏನೂ ಸಾರ್ಥಕವಾಗಲಿಲ್ಲ. ದೇವರು ಬಾಯಿ ತೆಗೆಯಲಿಲ್ಲ. ಊಟಮಾಡಲಿಲ್ಲ.

ನಾಮದೇವನಿಗೆ ಮುಂದೆ ಯಾವ ಉಪಾಯವೂ ತೋರಲಿಲ್ಲ. ಅದು ಕಲ್ಲಿನ ವಿಗ್ರಹ-ಅದು ಹೇಗೆ ಬಾಯಿ ತೆರೆದೀತು, ಹೇಗೆ ಊಟ ಮಾಡೀತು ಎಂಬ ಯೋಚನೆಯೇ ಆ ಬಾಲಕನ ತಲೆಯನ್ನು ಪ್ರವೇಶಿಸಲಿಲ್ಲ. ನೈವೇದ್ಯ ಮಾಡುವುದೆಂದರೆ ದೇವರಿಗೆ ಊಟಮಾಡಿಸುವುದು-ದೇವರೂ ನಮ್ಮಂತೆಯೇ ಊಟಮಾಡುವನು ಎಂಬುದೇ ಸರಳ ಮನಸ್ಸಿನ ಆ ಬಾಲಕನ ಸ್ಥಿರ ನಂಬಿಕೆಯಾಗಿತ್ತು. ಹೀಗಿರುವಲ್ಲಿ ದೇವರು ಊಟಮಾಡದಿರುವುದಕ್ಕೆ ಆತ

ನು ತನ್ನ ಮೇಲೆ ಉದಾಸೀನನಾಗಿರುವುದೇ, ಅಥವ ಕೋಪಗೊಂಡಿರುವು
ದೇ, ಅಥವ ತನ್ನ ಪೂಜೆಯನ್ನು ಮೆಚ್ಚದಿರುವುದೇ ಕಾರಣವೆಂದು ತಿಳಿದು
ಇನ್ನು ದೇವರನ್ನು ಬಲವಂತಪಡಿಸುವ ಅನ್ಯಥಾ ಮಾರ್ಗವು ಗೋಚರಿಸ
ದಿರಲು ಅಳಲು ಮೊದಲು ಮಾಡಿದನು. ಬಾಲಕನು ಅಳುತ್ತಲೇ-'ಈದಿನ
ಏನಾದರೂ ಆಗಲಿ ! ನೀನು ಊಟಮಾಡದಿದ್ದರೆ, ನಾನೂ ಮನೆಗೆ ಹೋ
ಗುವುದಿಲ್ಲ. ಊಟಮಾಡುವುದಿಲ್ಲ. ಪ್ರಾಣಹೋದರೂ ಹೋಗಲಿ. ಇಲ್ಲೇ
ಇದ್ದುಬಿಡುತ್ತೇನೆ. ನಿನ್ನ ಗುಡಿ ಬಿಟ್ಟು ಆಚೆಗೆ ಹೋಗಲಾರೆ' ಎಂದು
ಹಟ ಹಿಡಿದು ಕುಳಿತನು. ಅವನ ನಿಷ್ಕಲ್ಮಷ ಮನೋಭಾವವು ಸರ್ವಜ್ಞ
ನಾದ ಸ್ವಾಮಿಗೆ ಗೋಚರವಾಗದಿದ್ದೀತೆ ? ಸರ್ವಶಕ್ತನೂ ಅಗಣಿತ ಮಹಿ
ಮನೂ, ಅಣುರೇಣು ತೃಣಕಾಷ್ಠ ಪರಿಪೂರ್ಣನೂ ಆದ ಆ ದೇವರದೇವ
ನು, ಸ್ವಚ್ಛ ಮನೋಭಾವದ ಆ ಬಾಲಕನ ಪವಿತ್ರ ಪ್ರೇಮಕ್ಕೆ ಸಿಕ್ಕುಬಿ
ಟ್ಟನು. ಸರ್ವಲೋಕಗಳಿಗೂ ಪಿತೃ ಸ್ವರೂಪನಾದ ಆ ದೇವರದೇವನು, ಆ
ಚಿಕ್ಕ ಮಗುವು, ತನ್ನ ಸ್ಥಿತಿಯೇನೆಂಬುದನ್ನು ಅರಿಯದೆ ಹಾಗೆ ಹಟಹಿಡಿದು
ದನ್ನು ಕಂಡು ಮುಂದೆ ಉಪಾಯವಿಲ್ಲವೆಂದು ತಿಳಿದು, ಆ ವಿಗ್ರಹದಿಂದಲೇ
ವ್ಯಕ್ತನಾಗಲಿಚ್ಛಿಸಿದನು. ಸರ್ವಾಂತರ್ಯಾಮಿಯೂ ಸರ್ವ ಚೈತನ್ಯ ಸ್ವರೂ
ಪನೂ ಆದ ಆ ಜಗದೇಕನಾಥನಿಗೆ ಅಸಾಧ್ಯವಾದುದಾವುದು? ಸರ್ವವ್ಯಾಪಿ
ಯಾದ ಶ್ರೀಕೃಷ್ಣಮೂರ್ತಿಯು ವಿಠ್ಠಲಸ್ವಾಮಿಯ ಆ ವಿಗ್ರಹದಲ್ಲಿ ಆವಿರ್ಭವಿ
ಸಿದನು. ಬಾಲಕನು ವಿಠ್ಠಲಸ್ವಾಮಿಯ ಮುಖವನ್ನೇ ನೋಡುತ್ತ-ಊ-ಎಂ
ದುಕೊಂಡು ಅಳುತ್ತಾ ಕುಳಿತಿದ್ದಂತೆಯೇ ಸ್ವಾಮಿಯು ಬಾಯಿಯು ತೆರೆದು
ದನ್ನು ಕಂಡನು. ಒಡನೆ ಮೇಲಕ್ಕೆದ್ದು ಪಾತ್ರೆಯನ್ನು ಎಡದ ಕೈಯಲ್ಲಿ
ಹಿಡಿದುಕೊಂಡು ಬಲದ ಕೈಯಿಂದ ನೈವೇದ್ಯಕ್ಕೆಂದು ಇಟ್ಟಿದ್ದ ಪದಾರ್ಥವ
ನ್ನು ಕಲೆಸಿ ತುತ್ತುಮಾಡಿ ಮಾಡಿ ಸ್ವಾಮಿಯ ತೆರೆದ ಬಾಯೊಳಕ್ಕೆ ಹಾಕ
ಲಾರಂಭಿಸಿದನು. ಹಾಕಿ ಹಾಕಿದಂತೆ ಆ ತುತ್ತು ಸ್ವಾಮಿಯಿಂದ ನುಂಗ
ಲ್ಪಟ್ಟಿತೋ ಎಂಬಂತೆ, ತುತ್ತುಗಳು ಅದೃಶ್ಯವಾಗತೊಡಗಿದುವು. ನಾಮ
ದೇವನು ಕೊನೆಯವರೆಗೆ ಎಲ್ಲವನ್ನೂ ತಿನ್ನಿಸಿ ಪರಮಸಂತುಷ್ಟನಾಗಿ ಕೈ
ತೊಳೆದುಕೊಂಡನು. ಮುನಿಸಿಕೊಂಡಿದ್ದ ಸ್ವಾಮಿಯು ಸಮಾಧಾನಹೊಂದಿ
ತನ್ನ ಕೈಯಿಂದ ಊಟಮಾಡಿದನಲ್ಲಾ ಎಂದು ನಾಮದೇವನು ಸಂತೋಷ

ದಿಂದ ಆನಂದ ಬಾಷ್ಪಗಳನ್ನು ಸುರಿಸುತ್ತಾ ಮುಂದೇನು ಮಾಡಬೇಕೆಂ
ಬುದು ತೋರದೆ ಅಲ್ಲೇ ನಿಂತುಕೊಂಡಿರಲು-'ಮಗೂ ನೀನಿನ್ನು ಮನೆಗೆ
ಹೋಗು. ಈ ಸಂಗತಿಯನ್ನು ಮಾತ್ರ ಯಾರೊಂದಿಗೂ ಹೇಳಬೇಡ' ಎಂ
ದು ಮೇಘಗಂಭೀರ ಧ್ವನಿಯಿಂದ ನುಡಿದ ಒಂದು ಶಬ್ದವು ಕೇಳಿಸಿತು.
ಬಾಲಕನಿಗೂ ಆ ವೇಳೆಗೆ ಹಸಿವು ತೋರಿದುದರಿಂದ ಪಾತ್ರೆ ಪದಾರ್ಥವನ್ನು
ತೆಗೆದುಕೊಂಡು ಮನೆಗೆ ಹೊರಟು ನಡೆದನು. ಮನೆಯಲ್ಲಿ ಗುಣಾಬಾಯಿಯು
ಬರಿಯ ಪಾತ್ರೆಯನ್ನು ತಂದ ತನ್ನ ಮಗನನ್ನು ಕಂಡು - 'ಮಗೂ ನೈವೇ
ದ್ಯಕ್ಕೆ ಕೊಂಡೊಯ್ದ ಅನ್ನವನ್ನು ಏನು ಮಾಡಿದೆ! ಏಕೆ ಇಷ್ಟು ಹೊತ್ತಾ
ಯಿತು!' ಎಂದು ಮುಂತಾಗಿ ಪ್ರಶ್ನಿಸಲು ನಾಮದೇವನು—'ಅಮ್ಮ ಅನ್ನ
ವನ್ನು ಯಾರಿಗೂ ಕೊಡಲಿಲ್ಲ. ಪಾಂಡುರಂಗ ಸ್ವಾಮಿಯೇ ಹೊಟ್ಟೆತುಂಬ
ಊಟಮಾಡಿದನು' ಎಂದು ನುಡಿದುಬಿಟ್ಟನು. ಬಾಲಕನ ಆ ಮಾತುಗಳನ್ನು
ಕೇಳಿ ಆಕೆಗೆ ಪರಮಾಶ್ಚರ್ಯವಾಯಿತು. ಆದರೆ ಅವನು ಹೇಳಿದ ಮಾತು
ನಿಜವೆಂದು ನಂಬಿಕೆಯುಂಟಾಗಲಿಲ್ಲ. ಹಸಿವೆಯನ್ನು ತಡೆಯಲಾರದೆ ಹುಡು
ಗನು ತಾನೇ ತಿಂದು ಕಲ್ಲಿನ ದೇವರು ತಿಂದನೆಂದು ಹೇಳುತ್ತಿದ್ದಾನೆಂದು ತಿಳಿ
ದುಕೊಂಡು, ಸುಮ್ಮನಿದ್ದುಬಿಟ್ಟಳು. ಮಾರನೆಯ ದಿನವೂ, ಮೂರನೆಯ
ದಿನವೂ ದಾಮಾಜಿಯು ಊರಿಗೆ ಬರಲಿಲ್ಲವಾದುದರಿಂದ ನಾಮದೇವನೇ ಪೂ
ಜೆಗೆ ಹೋಗಬೇಕಾಯಿತು. ಆ ದಿನಗಳಲ್ಲೂ ಅವನು ಹಾಗೆಯೇ ಹಟಮಾಡಿ
ತೆಗೆದುಕೊಂಡು ಹೋದ ಅನ್ನವನ್ನೆಲ್ಲ ದೇವರಿಗೆ ಉಣಿಸಿ ಬರಿಯ ಪಾತ್ರೆ
ಯನ್ನೇ ಮನೆಗೆ ತಂದನು. ಗುಣಾಬಾಯಿಯು ನಿತ್ಯವೂ ನೈವೇದ್ಯದ ಅನ್ನ
ವನ್ನೆಲ್ಲ ತಾನೇ ತಿಂದು ಬರುತ್ತಾನೆಂದು ಗದರಿಸಿಕೊಳ್ಳುತ್ತ, ನಾಲ್ಕನೆಯ
ದಿನ ಪತಿಯು ಬಂದೊಡನೆಯೇ, ನಾಮದೇವನ ಪೂಜೆ-ನೈವೇದ್ಯ ಮುಂತಾ
ದುವುಗಳ ವಿಚಾರವನ್ನು ಪ್ರಸ್ತಾಪಿಸಿದಳು. ದಾಮಾಜಿಯು ಅನ್ನವನ್ನು
ಏನು ಮಾಡುತ್ತಿದ್ದೆಯೆಂದು ಪ್ರಶ್ನಿಸಲು ಆತನಿಗೂ ಸ್ವಾಮಿಯು ಊಟ
ಮಾಡುತ್ತಿದ್ದನೆಂಬ ಉತ್ತರವೇ ದೊರೆಯಿತು. ಬಾಲಕನ ನಿಷ್ಕಪಟ ಸ್ವಭಾ
ವವನ್ನು ಅರಿತವನಾಗಿದ್ದ ದಾಮಾಜಿಯು, ಅದರ ರಹಸ್ಯವೇನೋ ತಿಳಿಯ
ಬೇಕೆಂದು ಯೋಚಿಸಿ ಮಾರನೆಯ ದಿನವೂ ಅವನ ಕೈಯಲ್ಲೇ ಪೂಜೆಗೆ
ಸಾಮಗ್ರಿಗಳನ್ನು ತೆಗೆಯಿಸಿಕೊಂಡು ಹೋಗಿ, ತಾನು ಎದುರಿಗೆ ನಿಂತು

ಎಲ್ಲಿ ಈ ದಿನ ಪೂಜೆಮಾಡಿ, ಸ್ವಾಮಿಗೆ ಊಟಮಾಡಿಸು' ಎಂದನು. ಬಾಲಕ ನಾದರೋ, ಯಾವ ವಿಶೇಷವನ್ನೂ ಅರಿಯದೆ ಎಂದಿನಂತೆಯೇ ಅಭಿಷೇಕ, ಪುಷ್ಪಾರ್ಚನೆ ಧೂಪದೀಪಾರಾಧನೆಗಳನ್ನು ನಡೆಸಿ, ನೈವೇದ್ಯದ ಪಾತ್ರೆಯ ನ್ನು ಕೈಯಲ್ಲಿ ಹಿಡಿದುಕೊಂಡು ನಿಂತನು. ಆದರೆ ಎದುರಿಗೆ ಅನಧಿಕಾರಿ ಯಾವ ದಾಮಾಜಿಯಿದ್ದ ಪ್ರಯುಕ್ತ ಸ್ವಾಮಿಯ ವಿಗ್ರಹವು ಎಂದಿನಂತೆ ಬಾಯಿ ತೆರೆಯಲಿಲ್ಲ. ಬಾಲಕನು-'ವಿಠ್ಠಲಾ, ತೆರೆ, ಬಾಯಿತೆರೆ' ಎಂದು ಕೇಳಿ ಕೊಂಡನಾದರೂ ಏನೂ ಪ್ರಯೋಜನವಾಗಲಿಲ್ಲ. ಕೆಲಹೊತ್ತು ಹೀಗೆಯೇ ಕಳೆಯಿತು. ತಂದೆಯು, ಬಾಲಕನು ಅನ್ನವನ್ನು ತಾನೇ ತಿಂದು ಮನೆಯಲ್ಲಿ ಸುಳ್ಳುಹೇಳುತ್ತಿದ್ದನೋ ಎಂದು ಶಂಕಿಸತೊಡಗಿದ್ದನು. ಬಾಲಕನಾದರೋ ಸ್ವಾಮಿಯು ಮೌನವಾಗಿ ಸುಮ್ಮನಿದ್ದುದನ್ನು ಕಂಡು—'ದೇವಾ, ನಾನಿದ್ದಾ ಗ ಮಾತ್ರ ಊಟಮಾಡುತ್ತ, ಈಗ ನನ್ನ ತಂದೆಯು ಎದುರಿಗಿದ್ದಾನೆಂದು ಊಟಮಾಡದಿದ್ದರೆ, ತಂದೆಯು ನನ್ನನ್ನು ಏನೆಂದು ತಿಳಿಯಬಹುದು ಎಂ ಬುದು ಸರ್ವಜ್ಞನಾದ ನಿನಗೆ ಗೋಚರವಿಲ್ಲವೆ? ಭಕ್ತವತ್ಸಲಾ, ಸಾವಕಾಶ ವೇಕೆ? ನನ್ನನ್ನು ಸುಳ್ಳುಗಾರನೆನ್ನಿಸಲು ಇಚ್ಛಿಸಿದೆಯಾ? ಇದು ನ್ಯಾಯ ವಲ್ಲ-ಎಲ್ಲಿ, ಬಾಯಿತೆರೆ. ಈ ದಿನದ ಪದಾರ್ಥವು ಬಹು ರುಚಿಯಾಗಿದೆ' ಎಂದನು. ಬಾಲಕನ ಯುಕ್ತಿಯುಕ್ತವಾದ ಮಾತುಗಳು ಸ್ವಾಮಿಗೂ ವಾ ಸ್ತವವೆಂದು ತೋರಿದುವು. ಒಡನೆ ಎಂದಿನಂತೆ ವಿಗ್ರಹದ ಬಾಯಿ ತೆರೆ ಯಿತು. ನಾಮದೇವನು ತುತ್ತು ತುತ್ತು ಮಾಡಿ ದೇವರಿಗೆ ಪೂರ್ತಿಯಾಗಿ ಊಟಮಾಡಿಸಿದನು. ಅತ್ಯಪೂರ್ವವೂ ಅದ್ಭುತವೂ ಆದ ಈ ಪರಿಸ್ಥಿತಿ ಯನ್ನು ಕಂಡು ದಾಮಾಜಿಯು ಪರಮಾಶ್ಚರ್ಯಗೊಂಡನು. ಸ್ವಾಮಿಯ ನ್ನು ಸ್ವಾಧೀನಪಡಿಸಿಕೊಂಡಂತಹ ಸುಪುತ್ರನನ್ನು ಹಡೆದ ತನ್ನ ಸುಕೃತ ವಿಶೇಷವನ್ನು ಕುರಿತು ಪರಮಾನಂದಗೊಂಡನು.

ಬಾಲಕ ನಾಮದೇವನು, ಜೊತೆಯ ಬಾಲಕರೊಂದಿಗೆ ಆಡುತ್ತಿದ್ದಾ ಗಲೂ, ಮತ್ತೆ ಯಾವ ಕೆಲಸ ಮಾಡುತ್ತಿದ್ದಾಗಲೂ ವಿಠ್ಠಲನ ನಾಮಸ್ಮರಣೆ ಯನ್ನು ಮರೆಯದೆ, ದುಷ್ಟರೊಂದಿಗೆ ಬೆರೆಯದೆ, ದಿನದಿನಕ್ಕೆ ಅಭಿವೃದ್ಧಿ ಯಾಗುತ್ತಾ ಬಂದನು. ತಮ್ಮ ಮನೆತನಕ್ಕೆ ಸಹಜವಾದ ಹೊಲಿಗೆಯ ಕೆಲಸದಲ್ಲಾಗಲೀ ಮತ್ತಾವ ವಿಚಾರದಲ್ಲಾಗಲೀ ಆ ಬಾಲಕನಿಗೆ ಆಸಕ್ತಿ

ಯುಂಟಾಗಲಿಲ್ಲ. ಮನೆಯಲ್ಲಿ ಊಟದ ಹೊತ್ತಿನಲ್ಲಿ ಮಾತ್ರವಲ್ಲದೆ ಮಿಕ್ಕ ವೇಳೆಯನ್ನೆಲ್ಲ ವಿಠ್ಠಲಸ್ವಾಮಿಯ ಆಲಯದಲ್ಲೇ ಕಳೆಯುವನು. ವಿಠ್ಠಲನ ಮೇಲೆ ಹಿಂದಿನ ಭಕ್ತಾದಿಗಳು ಹಾಡಿದ ಪದಗಳನ್ನು ಮನಬಂದಂತೆ ಹೇಳಿಕೊಳ್ಳುವನು. ಪತ್ರಪುಷ್ಪ ಫಲಗಳನ್ನು ತಂದು ಮನಸಾರೆ ಪೂಜಿಸುವನು. ಸ್ವಾಮಿಯ ದಿವ್ಯಮಂಗಳ ವಿಗ್ರಹವನ್ನು ಹೃದಯಪೀಠದಲ್ಲಿ ಸ್ಥಿರಗೊಳಿಸಿ ಕುಳಿತು ಧ್ಯಾನಮಗ್ನನಾಗುವನು.

ತಂದೆ ತಾಯಿಗಳು ತಮ್ಮ ಮಗನು ಗೃಹಕೃತ್ಯ ವಿಚಾರವನ್ನು ಲೇಶ ಮಾತ್ರವೂ ಗಮನಿಸದೆ, ಪ್ರಾಪಂಚಿಕರಾದ ಇತರ ಬಾಲಕರಂತೆ ದ್ರವ್ಯಸಂಪಾದನೆಗೆ ಸಾಧಕವಾಗುವ ಯಾವುದೊಂದು ವೃತ್ತಿಯನ್ನಾಗಲೀ, ತನ್ನ ಕುಲ ಕಸಬಾದ ಹೊಲಿಗೆಯ ಕೆಲಸವನ್ನಾಗಲೀ ಅಭ್ಯಾಸಮಾಡದೆ ಸರ್ವದಾ ವಿಠ್ಠಲನ ದೇವಾಲಯುವಲ್ಲೇ ಇರುತ್ತ, ದೇವರು ದೇವರೆಂದು ಸದಾ ಆ ಹಂಬಲಿಕೆಯಲ್ಲೇ ಮಗ್ನನಾಗಿರುತ್ತಿದ್ದುದನ್ನು ತಿಳಿದು, ಮುಂದೇನು ಮಾಡಬೇಕೆಂದು ಚಿಂತಿಸತೊಡಗಿದರು. ನಾಮದೇವನೂ, ಬಾಲ್ಯ ವಯಸ್ಸನ್ನು ಕಳೆದು ಹದಿನಾರುಹದಿನೇಳು ವರ್ಷ ಪ್ರಾಯದ ಯುವಕನಾದನು. ದಾಮಾಜಿಯು ತನ್ನ ಮಗನು ಭಗವದ್ಭಕ್ತಿಯಲ್ಲಿ ಮಗ್ನನಾಗಿದ್ದುದು ತಪ್ಪೆಂದು ಹೇಳತಕ್ಕವನಲ್ಲವಾದರೂ, ಒಂದಿಗೇ ಅವನು ಗೃಹಕೃತ್ಯವನ್ನು ಸಾಗಿಸುವ ಲೌಕಿಕ ವಿಚಾರದಲ್ಲೂ ತಕ್ಕಷ್ಟು ಪರಿಶ್ರಮ ಹೊಂದತಕ್ಕುದು ಆವಶ್ಯಕವೆಂದು ಇಚ್ಛಿಸಿದ್ದನು. ಗುಣಾಬಾಯಿಯು, ತನ್ನ ಮುದ್ದಿನ ಮಗನು ಇತರ ಬಾಲಕರಂತೆ ಪ್ರಾಪಂಚಿಕ ವಿಚಾರಗಳಲ್ಲಿ ಲೇಶಮಾತ್ರವೂ ಅಪೇಕ್ಷೆಯಿಲ್ಲದೆ ಸರ್ವದಾ ಪೂಜೆ ಭಜನೆ ಧ್ಯಾನಾದಿಗಳಲ್ಲಿ ಮಗ್ನನಾಗಿ ಮನೆಯ ಕೆಲಸ ಕಾರ್ಯಗಳ ವಿಚಾರದಲ್ಲಿ ಉದಾಶೀನನಾಗಿರುತ್ತಿದ್ದುದನ್ನು ಕುರಿತು ಚಿಂತಾಕ್ರಾಂತಳಾದಳು. ಅದಕ್ಕೆ ಪ್ರತಿಕ್ರಿಯೆಯಾಗಿ ಏನು ಮಾಡಿದರೆ ಅವನು ಪ್ರಾಪಂಚಿಕ ವಿಚಾರಗಳಿಗೆ ತಿರುಗುವನೆಂದು ಯೋಚಿಸಿ ಯೋಚಿಸಿ, ಕೊನೆಗೆ ಅವನಿಗೆ ಲಗ್ನಮಾಡಿ ವಿಷಯಾತುರತೆಯು ಅವನಲ್ಲಿ ಉಂಟಾಗುವಂತೆ ಮಾಡಿದರೆ, ಅವನು ದೇವರ ವಿಷಯದಲ್ಲಿ ಉದಾಶೀನನಾಗಲು ಮಾರ್ಗವಾಗುವುದೆಂದು ಯೋಚಿಸಿದಳು. ಯೋಚಿಸಿ ಯೋಚಿಸಿದಂತೆ ಅದೇ ಸರಿಯಾದ ಮಾರ್ಗವೆಂಬ ವಿಷಯದಲ್ಲಿ ಸಂದೇಹವು ನಿವೃತ್ತಿಯಾಗತೊಡಗಿತು. ನೆರೆ ಹೊರೆಯ

ಅನುಭವಿಗಳೊಂದಿಗೆ ಪ್ರಸ್ತಾಪಿಸಿದಳು. ಅದೇ ಸರ್ವೋತ್ತಮವಾದ ಉಪಾಯವೆಂದು ಅವರೂ ಸಲಹೆ ಕೊಟ್ಟರು. ಕೊನೆಗೆ ತನ್ನ ಪತಿಯನ್ನು ಸಮೀಪಿಸಿ, ನಾಮದೇವನನ್ನು ಮಾರ್ಗಕ್ಕೆ ತರಲು ತಾನು ಯೋಚಿಸಿದ್ದ ಆ ಉಪಾಯವನ್ನು ಹೇಳಿದಳು. ದಾಮಾಜಿಯು, ತನ್ನ ಹೆಂಡತಿಯ ಯೋಚನೆಯು ಸಾಧುವಾದುದೆಂದು ತಿಳಿದು—'ಸಾಧ್ವಿ ನಾಮದೇವನು ವಿಠ್ಠಲನನ್ನೇ ಸರ್ವಸ್ವವೂ ಎಂದು ತಿಳಿದು ಅನನ್ಯ ಮನಸ್ಕತೆಯಿಂದ ಭಜಿಸಿ ಸೇವಿಸುತ್ತಿರುವ ಚಿತ್ತವೃತ್ತಿಯವನಾದುದರಿಂದ ಅವನನ್ನು ಈ ಉಪಾಯಗಳೆಲ್ಲ ಮಾರ್ಗ ತಪ್ಪಿಸಲಾರವು. ಆದರೂ ಪ್ರಯತ್ನಿಸುವುದರಲ್ಲಿ ನಷ್ಟವಿಲ್ಲ. ಮನುಷ್ಯನನ್ನು ಪ್ರಾಪಂಚಿಕ ವಿಚಾರಗಳಲ್ಲಿ ಬಂಧಿಸುವಿಕೆಯಲ್ಲಿ ಹೊನ್ನು ಹೆಣ್ಣು ಮಣ್ಣುಗಳು ಪ್ರಖ್ಯಾತವಾಗಿವೆ. ಒಂದು ವೇಳೆ ಚಿಕ್ಕ ವಯಸ್ಸಿನ ಪತ್ನಿಯು ಮನೆಯಲ್ಲಿ ಮನರಂಜಕಳಾಗಿ ಓಡಿಯಾಡುತ್ತಿರುವುದು ನಮ್ಮ ಹುಡುಗನ ಈ ಉದಾಶೀನ ವೃತ್ತಿಯನ್ನು ಹೋಗಲಾಡಿಸಲೂ ಬಹುದು' ಎಂದು ನುಡಿದನು. ತರುವಾಯ ಗಂಡಹೆಂಡಿರಿಬ್ಬರೂ ಒಮ್ಮನಸ್ಕತೆಯಿಂದ ಆ ಉದ್ಯೋಗದಲ್ಲಿ ತೊಡಗಿದರು. ಸ್ವಲ್ಪ ಕಾಲ ಹುಡುಕುವುದರೊಳಗಾಗಿಯೇ ತಮ್ಮ ಬಂಧುವರ್ಗದಲ್ಲೇ ದೊರೆತ ಸೌಂದರ್ಯಶಾಲಿನಿಯಾದ ಒಂದು ಕನ್ಯೆಯನ್ನು ತಮಗೆ ಸೊಸೆಯಾಗಿ ತಂದುಕೊಳ್ಳಬೇಕೆಂದು ನಿರ್ಧರಿಸಿದರು. ಮುಹೂರ್ತವನ್ನಿಡಿಸಿದ್ದೂ ಆಯಿತು. ವಿವಾಹ ಮಹೋತ್ಸವಕ್ಕಾಗಿ ಸಕಲ ಸೋಬಸ್ಕರಗಳೂ ಸಿದ್ಧವಾದುವು. ಒಂದು ಶುಭ ಮುಹೂರ್ತದಲ್ಲಿ ನಾಮದೇವನಿಗೂ ರಾಧಾಬಾಯಿಯೆಂಬ ಕನ್ಯೆಗೂ ವಿವಾಹವು ಅತಿಶಯ ವಿಜೃಂಭಣೆಯಿಂದ ನಡೆದುಹೋಯಿತು. ನಾಮದೇವನಾದರೋ ತನಗೆ ವಿವಾಹವಾಗಬೇಕು ಅಥವ ಬೇಡ ಎಂಬ ಯಾವ ಅಭಿಪ್ರಾಯವನ್ನೂ ಕೊಡದೆ ಸ್ತಬ್ಧನಾಗಿದ್ದು ವಿವಾಹಾಂಗವಾಗಿ ನಡೆಯಬೇಕಾದ ಎಲ್ಲಾ ಕೆಲಸಗಳಲ್ಲೂ ಸಾಂಗವಾಗಿ ಭಾಗಿಯಾಗಿದ್ದನು. ವಿವಾಹವಾದ ತರುವಾಯ ಒಂದೆರಡು ದಿನಗಳವರೆಗೆ, ನಾಮದೇವನು,-ಇದೇನು ತನ್ನ ಜೀವಮಾನದಲ್ಲಿ ಈ ಬಗೆಯ ಹೊರೆಯೊಂದು ಹೊತ್ತಿತಲ್ಲ. ಇದನ್ನು ಇಳಿಸಿಕೊಳ್ಳುವುದರೊಂದಿಗೆ ಭಗವತ್ಸೇವೆ, ಧ್ಯಾನಾದಿಗಳನ್ನೂ ನಡೆಯಿಸಿಕೊಂಡು ಹೋಗುವ ಪರಿಯೆಂತು ಎಂದು ಮನಸ್ಸಿನಲ್ಲಿ ಸ್ವಲ್ಪ ಮಟ್ಟಿಗೆ ಕಳವಳಗೊಂಡಿದ್ದನು. ಆದರೆ,

ಆ ಕಳವಳವು ಬಹುಕಾಲ ನಿಲ್ಲಲಿಲ್ಲ. ಮನಸ್ಸು ಒಡನೆ ಸುಸ್ಥಿರವಾಗಿ ಪುನಃ ವಿಠ್ಠಲಸ್ವಾಮಿಯ ಪಾದಾರವಿಂದಗಳಲ್ಲೇ ನಿಂತುಹೋಯಿತು. ಇತರ ವಿಚಾರವನ್ನೆಲ್ಲ ಮರೆತು ನಾಮದೇವನು ಹಿಂದಿನಂತೆಯೇ ದೇವಸ್ಥಾನವಾಯಿತು-ತಾನಾಯಿತು, ಹೀಗಿದ್ದುಬಿಟ್ಟನು.

ವಿವಾಹದಿಂದ ತನ್ನ ಮಗನ ಬುದ್ಧಿಯು ಪ್ರಾಪಂಚಿಕ ಮಾರ್ಗಕ್ಕೆ ತಿರುಗಬಹುದೆಂದು ಯೋಚಿಸಿದ್ದ ಗುಣಾಬಾಯಿಯು, ನಾಮದೇವನು ಹಿಂದಿನಂತೆಯೇ ಆದುದನ್ನು ಕಂಡು ಹತಾಶಳಾದಳು. ದಾಮಾಜಿಯೂ, ಗೃಹಕೃತ್ಯ ಸಂಬಂಧವಾದ ಕಷ್ಟತಾಪತ್ರಯಗಳಲ್ಲಿ ನೊಂದು ಕೈಗೆಬಂದ ತನ್ನ ಮಗನು ಕುಲವೃತ್ತಿಯಿಂದ ತನಗೆ ಸ್ವಲ್ಪ ಮಾತ್ರ ಸಹಾಯಕನಾಗುವನೋ ಎಂದು ಯೋಚಿಸಿಕೊಂಡಿದ್ದುದು ಹೀಗೆ ನಿರಾಶಾಜನಕವಾಯಿತಲ್ಲಾ ಎಂದು ವ್ಯಸನಾಕ್ರಾಂತನಾದನು. ವಿವಾಹಕ್ಕಾಗಿ ಆದ ಸಾಲಸೋಲಗಳಿಗೆ ಸಮಾಧಾನಹೇಳಿಕೊಂಡು, ನಿತ್ಯ ಗೃಹಕೃತ್ಯದ ಖರ್ಚು ವೆಚ್ಚಗಳು, ಮುಂತಾದುವನ್ನು ಸಾಗಿಸುವುದು ವೃದ್ಧನಾದ ಆತನಿಂದ ಸಾಗದ ಕೆಲಸವಾಗಿದ್ದಿತು. ಈ ಮಧ್ಯೆ ನಾಮದೇವನ ಸಂಸಾರ ಭಾರವೂ ಹೆಚ್ಚುತೊಡಗಿತು. ರಾಧಾಬಾಯಿಯ ಉದರದಲ್ಲಿ ಎರಡು ಮಕ್ಕಳಾದರು; ನಾಮದೇವನು ತನ್ನ ಹೆಂಡತಿ ಮಕ್ಕಳನ್ನು ಪ್ರೇಮದಿಂದಲೇ ನೋಡಿಕೊಳ್ಳುತ್ತಿದ್ದನು. ಅವನ ತಂದೆ ತಾಯಿಗಳಲ್ಲಾದರೂ ಅವನಿಗೆ ವಿಶೇಷ ಪೂಜ್ಯಭಾವನೆಯೇ ಇದ್ದಿತು. ಆದರೇನು ಮಾಡುವುದು, ದ್ರವ್ಯಸಂಪಾದನೆಗೆಂದು ತನ್ನ ದೇಹ ಮನೋಬುದ್ಧಿಗಳನ್ನು ವ್ಯಯಗೊಳಿಸಿ ಪರಿಶ್ರಮ ಮಾಡುವುದೆಂಬುದು ಮಾತ್ರ ಆತನಿಂದ ಆಗದ ಕೆಲಸವಾಗಿದ್ದಿತು. ದೇವಸ್ಥಾನಕ್ಕೆ ಹೋಗಿ ವಿಠ್ಠಲನ ದರ್ಶನ ಮಾಡಿಬಿಟ್ಟನೆಂದರೆ, ತರುವಾಯ ಪ್ರಪಂಚದ ಸ್ಮರಣೆಯೇ ಆತನಿಗುಂಟಾಗುತ್ತಿರಲಿಲ್ಲ. ಎಷ್ಟೋ ದಿನಗಳಲ್ಲಿ ಮನೆಯ ಕಡೆಗೇ ಬರುತ್ತಿರಲಿಲ್ಲ. ದಿನದಿನಕ್ಕೆ ಬಡತನದ ತಾಪತ್ರಯ, ರೋಗಬಾಧೆ, ವೃದ್ಧಾಪ್ಯದ ಮನೋವ್ಯಥೆ ಈ ಮುಂತಾದುವುಗಳಿಂದ ಬಹು ನೊಂದ ದಾಮಾಜಿ ಗುಣಾಬಾಯಿಯರು ತಮ್ಮ ಮಗನನ್ನು ಕುರಿತು ಮನೆ ಹೆಂಡತಿಮಕ್ಕಳ ವಿಚಾರವನ್ನು ಗಮನಿಸಿ ಪ್ರಾಪಂಚಿಕರಂತೆ ಇರೆಂದು ಬೋಧಿಸಿದ ಬೋಧನೆಗಳೆಲ್ಲ ವ್ಯರ್ಥವಾದುವು. ಅಂಗಲಾಚಿ ಕೇಳಿಕೊಂಡ ಪ್ರಾರ್ಥನೆಗಳೆಲ್ಲ ನಿಷ್ಫಲವಾದುವು. ಕೊನೆಗೊಂ

ದು ದಿನ ಗುಣಾಬಾಯಿಯು ಪಾಂಡುರಂಗಸ್ವಾಮಿಯ ದೇವಸ್ಥಾನಕ್ಕೆ ಹೋಗಿ, “ಸ್ವಾಮಿ ಇದೇನು ಕೆಲಸ ಮಾಡಿಬಿಟ್ಟಿರುವೆ? ನಾಮದೇವನು ನಿನ್ನ ಭಜನೆಯ ಹುಚ್ಚು ಹಿಡಿದು ಮನೆಯ ಕಡೆ ಸುಳಿಯದಂತಾದನಲ್ಲಾ! ವೃದ್ಧರೂ ನಿರ್ಗತಿಕರೂ, ಅವನೇ ನಮ್ಮ ಸರ್ವಸ್ವವೂ ಎಂದು ನಂಬಿಕೊಂಡಿರುವವರೂ ಆದ ನಮ್ಮ ಗತಿಯೇನು? ಅವನನ್ನು ಮರುಳುಗೊಳಿಸಿ ಇಲ್ಲಿಟ್ಟುಕೊಂಡು ನಮ್ಮ ಮನೆತನವನ್ನು ಏನು ಮಾಡಲು ಯೋಚಿಸಿರುವೆ? ವಿಠ್ಠಲಾ, ಇದು ನಿನಗೆ ನ್ಯಾಯವಲ್ಲ' ಎಂದು ಮುಂತಾಗಿ ನಿಂದಿಸತೊಡಗಿದಳು. ಗುಣಾಬಾಯಿಯು ರೋಷಾಧಿಕ್ಯದಿಂದ ಸ್ವಾಮಿಯನ್ನು ನಿಂದಿಸುತ್ತಿದ್ದುದನ್ನು ಕೇಳಿ ಕೇಳದಂತೆ ಅಲ್ಲೇ ನಿಂತಿದ್ದ ಭಕ್ತನೊಬ್ಬನಿಗೆ ಸ್ವಾಮಿಯ ಆವೇಶ ಬಂದಂತಾಗಿ-'ಎಲೌ ಗುಣಾಬಾಯಿ, ಸುಮ್ಮನೆ ಕೋಪಿಸಬೇಡ. ನಿನ್ನ ಮಗನಮೇಲೆ ನಿನಗೆ ಪ್ರೀತಿಯಿದ್ದರೆ, ಕರೆದುಕೊಂಡು ಹೋಗು. ಅವನು ಬರುವುದಿಲ್ಲವೆಂದು ನನ್ನನ್ನೇಕೆ ನಿಂದಿಸುತ್ತಿರುವೆ? ನಿನ್ನ ಮಗನೆಂದುಕೊಂಡಿರುವ ನಾಮದೇವನ ಜನನ ವಿಚಾರವನ್ನು ಕುರಿತು ಯೋಚಿಸಿನೋಡು. ಅವನು ನಿನ್ನ ಮಗನೇ-ನಿನ್ನ ಉದರ ಸಂಭೂತನೇ? ಭಗವದಿಚ್ಛೆಯಿಂದ ಪ್ರಪಂಚಕ್ಕೇ ವಿಚಿತ್ರವೆಂಬಂತಹ ರೀತಿಯಲ್ಲಿ ದೊರೆತ ಅವನ ಗುಣಚರ್ಯೆಗಳು ಲೋಕಕ್ಕೆ ವಿಪರೀತವಾಗಿದ್ದರೆ ಅದರಲ್ಲಿ ಆಶ್ಚರ್ಯವೇನಿದೆ? ಮಾಗಿದ ಹಣ್ಣು ಮರಕ್ಕೆ ಅಂಟದೆ ತೊಟ್ಟು ಕಳಚಿ ಬಿದ್ದುಹೋಗುವಹಾಗೆ, ವಿಷಯ ವಾಸನೆಯು ನೀಗಿ ಪರಿಪಕ್ವ ಹೃದಯವುಳ್ಳ ನಾಮದೇವನು ಸಂಸಾರ ವಿಮುಖನಾಗಿರುವುದು ಸ್ವಾಭಾವಿಕವೇ ಆಗಿದೆ! ಅವನ ಮಾರ್ಗವನ್ನು ಅವನು ಅನುಸರಿಸಿಕೊಂಡುಹೋಗಲಿ; ನೀನೇಕೆ ಚಿಂತಿಸುವೆ? ಹೊರಟುಹೋಗಿ ಮನೆಯಲ್ಲಿ ಸ್ವಸ್ಥವಾಗಿರು' ಎಂದು ನುಡಿದನು.

ಆ ಮಾತುಗಳೆಲ್ಲವೂ ಗುಣಾಬಾಯಿಗೆ ಕಿವಿಗಳಲ್ಲಿ ಮುಳ್ಳು ಚುಚ್ಚಿದಂತೆ ಕೇಳಿಸಿದುವು. ಆ ಮಾತನ್ನಾಡುತ್ತಿದ್ದವನು ಆವೇಶಯುಕ್ತನಾದ ಬೇರೊಬ್ಬ ಮನುಷ್ಯನೇ ಆಗಿದ್ದರೂ, ಆ ಸಾಧ್ವಿಯು ವಿಠ್ಠಲನೇ ಆ ಮಾತುಗಳನ್ನಾಡುತ್ತಿರುವನೆಂದು ಭಾವಿಸಿದಳು. ಕೇಳಿ ಕೇಳದಂತೆ ರೋಷವು ಏರುತ್ತಾಹೋಯಿತು.-'ವಿಠ್ಠಲಾ, ಈ ಮಾತು ಬಹು ಚೆನ್ನಾಗಿದೆ. ನಾನು ಕಷ್ಟಪಟ್ಟು ಸಾಕಿ ದೊಡ್ಡವನನ್ನಾಗಿ ಮಾಡಿದ ಮಗನನ್ನು ಈಗ ನಿನ್ನ ದಾ

ಸನನ್ನಾಗಿ ಮಾಡಿಕೊಂಡು ನಮ್ಮನ್ನು ಕಾಡುಪಾಲು ಮಾಡಲು ಯೋಚಿಸಿದ ಈ ನಿನ್ನ ಯುಕ್ತಿಯು ನ್ಯಾಯವಾದುದಲ್ಲ.'-ಎಂದು, ರುಕ್ಮಿಣೀದೇವಿಯ ಬಳಿಗೆ ನಡೆದು-'ತಾಯೇ! ನಿನ್ನ ಪತಿಯಾದ ವಿಠ್ಠಲಸ್ವಾಮಿಯು ಕಲ್ಯಾಣ ಗುಣಪರಿಪೂರ್ಣನೆಂದು ಲೋಕವೇ ಹೊಗಳುವುದು. ಹೀಗಿರುವಲ್ಲಿ ಈ ದೇವರ ದೇವನು, ನಮ್ಮ ಮುದ್ದು ಮಗನ ಮನಸ್ಸನ್ನು ಅಪಹರಿಸಿ ಅವನನ್ನು ತನಗೆ ದಾಸನನ್ನಾಗಿ ಮಾಡಿಕೊಂಡು, ನಮ್ಮನ್ನು ಹೀಗೆ ಗೋಳಾಡಿಸುವುದು ನ್ಯಾಯವೇ ಎಂದು ಲೋಕಮಾತೆಯಾದ ನೀನೇ ಯೋಚಿಸು.' ಎಂದು ದೂರಿಕೊಂಡು ವ್ಯಸನಾಧಿಕ್ಯವನ್ನು ತಡೆಯಲಾರದೆ ಬಿಕ್ಕಿ ಬಿಕ್ಕಿ ಅಳತೊಡಗಿದಳು. ಸರಳ ಮನಸ್ಸಿನ ಆ ಸಾಧ್ವಿಗೆ ತನ್ನ ಮಗನು ವಿಠ್ಠಲಸ್ವಾಮಿಯ ಮಾಯೆಗೆ ಸಿಕ್ಕಿ ವಂಚಿತನಾಗಿದ್ದಾನೆಂದು ಮಾತ್ರ ತೋರಿತಲ್ಲದೆ, ಮಹಾಭಕ್ತ ಶಿರೋಮಣಿಯಾದ ಆತನ ಭಕ್ತಿ ಭಾಗ್ಯದ ಪ್ರಮಾಣವು ತಿಳಿಯಲಿಲ್ಲ. ಆ ವೇಳೆಗೆ ಅಲ್ಲೇ ದೇವಾಲಯದ ಒಂದು ಕತ್ತಲು ಮೂಲೆಯಲ್ಲಿ ಧ್ಯಾನಮಗ್ನನಾಗಿ ಕುಳಿತಿದ್ದ ನಾಮದೇವನು ಎಚ್ಚತ್ತು, ಸ್ವಾಮಿಯ ಎದುರಿನಲ್ಲಿ ತನ್ನ ತಾಯಿಯು ನಿಂತು ಕಣ್ಣೀರು ಸುರಿಸುತ್ತಿದ್ದುದನ್ನು ಕಂಡನು. ಒಡನೆ ಮಹಾ ದಯಾಭರಿತವಾದ ಆತನ ಹೃದಯವು ಕರಗಿ ನೀರಾಯಿತು. ವ್ಯಸನಕ್ಕೆ ಕಾರಣವೇನೆಂಬುದು ತೋರದೆ, ಗಾಬರಿಗೊಂಡು ತಾನು ಕುಳಿತಿದ್ದ ಸ್ಥಳದಿಂದ ಎದ್ದುಬಂದು-'ತಾಯೇ! ಇಲ್ಲೇಕೆ ಅಳುತ್ತಾ ನಿಂತಿದ್ದೀಯೆ? ಎಂದು ಕೈಹಿಡಿದು ಕೇಳಿದನು. ಗುಣಾಬಾಯಿಯು ತನ್ನ ಮಗನನ್ನು ಕಂಡೊಡನೆಯೇ ಒಂದೇ ಕಾಲದಲ್ಲಿ ಕೋಪವೂ, ಪ್ರೇಮವೂ ಉಂಟಾಗುತ್ತಿರಲು-'ನಾಮದೇವಾ, ಇಷ್ಟುಹೊತ್ತೂ ಇಲ್ಲೇ ಅಡಗಿ ಕುಳಿತಿದ್ದೆಯಾ ? ಇಂದ್ರಜಾಲ ವಿದ್ಯೆಯಲ್ಲಿ ಮಹಾಕುಶಲನಾದ ಈ ಕೃಷ್ಣನು ಸೊಂಟದಮೇಲೆ ಕೈಯಿಟ್ಟುಕೊಂಡು ಬಿನ್ನಾಣದಿಂದ ಇಟ್ಟಿಗೆಯಮೇಲೆ ನಿಂತುಕೊಂಡು, ಸರಳಮನಸ್ಸಿನ ನಿಮ್ಮಂತಹವರನ್ನು ಮರುಳುಗೊಳಿಸುತ್ತಿರುವನು. ಇವನನ್ನು ನಂಬಿ ಬೆನ್ನುಹತ್ತಿಹೋಗಿ ಲೋಕದಲ್ಲಿ ಯಾರು ಸುಖಪಟ್ಟಿದ್ದಾರೆ ಹೇಳು. ನಿನಗೆ ಬುದ್ಧಿಯಿಲ್ಲ. ಏಳು ಮನೆಗೆ ನಡೆ. ಹೆಂಡಿರು ಮಕ್ಕಳು ಅನ್ನವಿಲ್ಲದೆ ಸಾಯುತ್ತಿರುವರು' ಎಂದು ಗದ್ದರಿಸಿ ಕೈಹಿಡಿದು ಕರೆದುಕೊಂಡು ಹೊರಟಳು.

ಬಡತನದ ಬೇಗೆಯಿಂದ ಬೆಂದು, ಉಪಾಯ ಕಾಣದೆ, ದೇವಸ್ಥಾನಕ್ಕೆ ನಡೆದು ವಿಠ್ಠಲನನ್ನು ದೂಷಿಸತೊಡಗಿದ್ದ ಗುಣಾಬಾಯಿಯು ಮನೆಯನ್ನು ಬಿಟ್ಟು ಹೊರಟಾಗಿನಿಂದ ಪುನಃ ದೇವಾಲಯದಿಂದ ಮನೆಗೆ ಬಂದು ಸೇರುವುದರೊಳಗಾಗಿ ಒಂದು ವಿಚಿತ್ರ ಸಂಗತಿಯು ನಡೆದು ಹೋಯಿತು. ಅತ್ತೆಯು ಹೊರಟುಹೋದಮೇಲೆ ಇತ್ತ ನಾಮದೇವನ ಪತ್ನಿಯಾದ ರಾಧಾಬಾಯಿಯು ಅಳುವ ಮಕ್ಕಳನ್ನು ಸಮಾಧಾನ ಪಡಿಸಬೇಕೆಂದರೆ ಏನೊಂದು ತಿಂಡಿ ತೀರ್ಥಗಳಾಗಲೀ, ಅಥವ ಮಧ್ಯಾಹ್ನಕ್ಕೆ ಅಡಿಗೆ ಮಾಡಬೇಕೆಂದರೆ ಮನೆಯಲ್ಲಿ ಅಕ್ಕಿ ಬೇಳೆ ಮುಂತಾದ ಯಾವದೊಂದು ಪದಾರ್ಥವಾಗಲೀ ಇಲ್ಲದ ಕ್ಷುದ್ರ ದಾರಿದ್ರ್ಯವ್ಯಾಧಿಯಿಂದ ಕ್ಲೇಶದಿಂದ, ಉಡುವುದಕ್ಕಿಲ್ಲದ ಉಣ್ಣುವುದಕ್ಕಿಲ್ಲದ ತಾಪತ್ರಯದಿಂದ ಬಳಲಿ, ಬೇಸತ್ತು ತನ್ನ ದುರ್ದೈವವನ್ನು ನಿಂದಿಸಿಕೊಳ್ಳುತ್ತಾ, ಮಾಡುವ ಕೆಲಸವೇನೆಂದು ತೋರದೆ, ಅಳುವ ಮಕ್ಕಳನ್ನು ಮುಂದಿಟ್ಟುಕೊಂಡು ತಲೆಯಮೇಲೆ ಕೈಕೊತ್ತು ಕುಳಿತುಕೊಂಡಿದ್ದಳು. ಆ ವೇಳೆಗೆ ಸರಿಯಾಗಿ ಮನೆಯ ಬಾಗಿಲಿಗೊಬ್ಬ ದೊಡ್ಡ ವರ್ತಕ ವೇಷಧಾರಿಯು 'ನಾಮದೇವ, ನಾಮದೇವ' ಎಂದು ಆಕೆಯ ಪತಿಯ ಹೆಸರು ಹಿಡಿದು ಕೂಗಿಕೊಂಡು ಬಂದನು. ರಾಧಾಬಾಯಿಯು-'ಅವರು ಮನೆಯಲಿಲ್ಲ' ಎಂದು ಹೇಳಿದಳು. ಅದನ್ನು ಕೇಳಿದ ಆ ವರ್ತಕನು ಬಾಗಿಲವರೆಗೆ ಬಂದು-'ತಾಯಿ ನಿನ್ನ ಪತಿಯು ನನಗೆ ಬಹುದಿನಗಳ ಸ್ನೇಹಿತನು. ಆತನು ದಾರಿದ್ರ್ಯಕ್ಕೆ ಸಿಕ್ಕಿ ಕಷ್ಟಪಡುತ್ತಿದ್ದಾನೆಂದು ತಿಳಿದು ನಾನು ಇಲ್ಲಿಗೆ ಬಂದೆನು. ಇಗೋ ಈ ದ್ರವ್ಯವನ್ನು ನಾನು ಕೊಟ್ಟು ಹೋದೆನೆಂದು ಹೇಳಮ್ಮಾ! ನನ್ನ ಹೆಸರು ಕೇಶವಶೆಟ್ಟಿ! ಆತನು ಒಂದು ಬಗೆಯ ಪ್ರಕೃತಿಯವನು ಆತನಿಗೆ ಆಗಾಗ್ಗೆ ದುಡ್ಡಿನ ವಿಷಯದಲ್ಲಿ ಪೀಡಿಸಿ ಮನೋವ್ಯಥೆಯನ್ನುಂಟುಮಾಡಬೇಡಿ.' ಎಂದು ನುಡಿದು, ಒಂದು ಹಣದ ಚೀಲವನ್ನು ಆಕೆಯ ಕೈಗೆ ಕೊಟ್ಟನು. ಅಷ್ಟು ದುಡ್ಡಿನಿಂದ ತುಂಬಿದ ಹಣದ ಗಂಟನ್ನು ಎಂದೂ ಕಾಣದಿದ್ದ ರಾಧಾಬಾಯಿಯು ಅದ್ಭುತಪಟ್ಟು, ಒಳಕ್ಕೆ ಹೋಗಿ ಚಾಪೆಯನ್ನು ತಂದು ಹಾಸಿ,-ಯಜಮಾನರು ಮನೆಗೆ ಬರುವವರೆಗೂ ಕುಳ್ಳಿರಿ-ಎಂದು ಉಪಚಾರ ಹೇಳಬೇಕೆಂದಿರುವಷ್ಟರಲ್ಲಿ, ಆ ವರ್ತಕನು ಹೊರಕ್ಕೆ ನಡೆದು ಕಣ್ಣಿಗೆ ಬೀಳದೆ ಎಲ್ಲೋ ಹೊರಟುಹೋದನು.

ರಾಧಾಬಾಯಿಯು, ತನ್ನ ಪತಿಯು ಯಾರೋ ದೊಡ್ಡವರ ಪ್ರೀತಿಗೆ ಪಾತ್ರನಾಗಿರುವನೆಂದು ಸಂತೋಷಿಸಿ, ಒಡನೆ ಆ ದ್ರವ್ಯದಲ್ಲಿ ಸ್ವಲ್ಪವನ್ನು ಕೊಂಡೊಯ್ದು ಅಂಗಡಿಯಿಂದ ಬೇಕು ಬೇಕಾದ ಪದಾರ್ಥಗಳನ್ನೆಲ್ಲಾ ತಂದಳು. ತರುವಾಯ ನಿಂದು ಹಬ್ಬದ ದಿನವೋ ಎಂಬಂತೆ ಭಕ್ಷ್ಯಭೋಜ್ಯಗಳಿಂದ ದಿವ್ಯಪಾಕವನ್ನು ಸಿದ್ಧಪಡಿಸುತ್ತಿದ್ದಳು.

ಆ ವೇಳೆಗೆ ಮೇಲ್ಕಂಡಂತೆ ದೇವಾಲಯದಿಂದ ಮಗನೊಂದಿಗೆ ಹೊರಟ ಗುಣಾಬಾಯಿಯು ಮನೆಗೆ ಬಂದು ಸೇರಿದಳು. ತಾನು ಹೊರಡುವಾಗ ಮನೆಯಲ್ಲಿ ಒಂದು ಅಕ್ಕಿಯ ಕಾಳು ಇರಲಿಲ್ಲ. ಈಗ ನೋಡಿದರೆ ದೊಡ್ಡ ಹಬ್ಬವೋ ಎಂಬಂತೆ ಅಗಾಧ ಭಕ್ಷ್ಯಭೋಜ್ಯಗಳ ದಿವ್ಯಪಾಕವು ಸಿದ್ಧವಾಗುತ್ತಿದೆ. ಅದನ್ನು ಕಂಡು ಅತ್ತೆಯು ಬಹು ಸಂತೋಷಪಟ್ಟಳು. ಆದರೆ ನಾಮದೇವನು ಮಾತ್ರ, ಇದೇನೋ ವಿಚಿತ್ರವಾಗಿದೆಯೆಂದುಕೊಂಡು-ಸಂಗತಿಯೇನೆಂದು ವಿಚಾರಿಸಲು, ಕೇಶವಶೆಟ್ಟಿ ಎಂಬೊಬ್ಬ ವರ್ತಕನು ಬಂದು ದ್ರವ್ಯವನ್ನು ಕೊಟ್ಟುಹೋದನೆಂಬ ವರ್ತಮಾನವು ತಿಳಿಯಿತು. ನಾಮದೇವನು, ಆ ಮಾತನ್ನು ಕೇಳಿದೊಡನೆಯೇ-'ದೇವಾ, ಈ ದ್ರವ್ಯದ ಹೊರೆಯನ್ನು ಹೊರಿಸಿ ನನ್ನನ್ನು ಪುನಃ ಈ ಸಂಸಾರ ಸಾಗರದಲ್ಲಿ ಮುಳುಗಿಸಲು ಇಚ್ಛಿಸಿದೆಯಾ ?' ಎಂದು, ನುಡಿದು ತನ್ನಾ ಸರ್ವಸ್ವವನ್ನೂ ಆ ಊರಲ್ಲಿದ್ದ ಬಡಬ್ರಾಹ್ಮಣರನ್ನೂ ಭಿಕ್ಷುಕರನ್ನೂ ಕರೆದು ಎಲ್ಲರಿಗೂ ದಾನಮಾಡಿಬಿಟ್ಟನು.

ಈ ದಿನಗಳಲ್ಲೆಲ್ಲ ನಾಮದೇವನು ಸರ್ವದಾ ಭಜನೆ ಸಂಕೀರ್ತನೆಗಳಲ್ಲೇ ಕಾಲಕಳೆಯುತ್ತಿದ್ದನು. ಉಷಃಕಾಲಕ್ಕೆ ಸರಿಯಾಗಿ ಎಚ್ಚತ್ತು, ಸ್ನಾನಮಾಡಿ ನಾಮಧಾರಣೆಮಾಡಿಕೊಂಡು, ತುಲಸೀಮಾಲೆಯನ್ನು ಹಾಕಿಕೊಂಡು ಕೈಯಲ್ಲಿ ತಾಳವನ್ನು ಹಿಡಿದು ದೇವಸ್ಥಾನಕ್ಕೆ ಹೋಗಿ ವಿಠ್ಠಲಸ್ವಾಮಿಯ ಎದುರಿಗೆ ಭಜನೆ ಮಾಡುತ್ತಾ ನಿಂತುಬಿಟ್ಟನೆಂದರೆ-ತರುವಾಯ ಆತನಿಗೆ ಹಸಿವೆ ನೀರಡಿಕೆಗಳಾಗಲೀ, ನಿದ್ರೆ ಅಲಸಿಕೆಗಳಾಗಲೀ ಏನೂ ಉಂಟಾಗುತ್ತಿರಲಿಲ್ಲ. ಮನೆಯ ಕಡೆಯ ಯೋಚನೆಯೇ ಆತನನ್ನು ಸೋಕುತ್ತಿರಲಿಲ್ಲ. ಹೆಂಡಿರುಮಕ್ಕಳು ತಂದೆತಾಯಿಗಳು ಮುಂತಾದ ಪ್ರಾಪಂಚಿಕ ಯೋಚನೆಯು ಸಂಪೂರ್ಣವಾಗಿ ಮರೆತು ಹೋಗುತ್ತಲಿತ್ತು. ಭಕ್ತ್ಯಾಧಿಕ್ಯ

ದಿಂದ ಕಣ್ಣುಗಳನ್ನು ಅರ್ಧಮುಚ್ಚಿ ಅಂತರ್ದೃಷ್ಟಿಯುಳ್ಳ ಮಹಾಯೋಗಿಯಂತೆ ಆ ಸಾಧುವರ್ಯನು, ಭಗವನ್ಮಾಹಾತ್ಮ್ಯ ಪೂರ್ಣವಾದ ಪೂರ್ವಕವಿಗಳ ದಿವ್ಯಗೀತಗಳನ್ನು ಹೇಳಿಕೊಂಡು, ತಲ್ಲೀನನಾಗುವನು. ಕೆಲವು ದಿನಗಳು ಕಳೆದಮೇಲೆ ಆತನ ಬಾಯಿಂದಲೇ - ಸ್ತೋತ್ರಗಳು, ಕವಿತ್ವರೂಪದಿಂದ ಹೊರಬೀಳ ಹತ್ತಿದುವು. ಆ ಪದಗಳನ್ನು ಕೇಳುವುದಕ್ಕಾಗಿಯೂ ನಾಮದೇವನ ಸಂಕೀರ್ತನೆಯ ಸವಿಯನ್ನು ರುಚಿನೋಡಲಿಕ್ಕಾಗಿಯೂ, ಜನಗಳು ಗುಂಪು ಗುಂಪಾಗಿ ಬಂದು ದೇವಾಲಯದಲ್ಲಿ ನೆರೆಯುವರು. ನಾಮದೇವನಿಗಾದರೋ ಜನಸಮೂಹವನ್ನು ನೋಡಿ ನೋಡಿದಂತೆ ದೇಹದ ಮೇಲೆ ಸ್ಮೃತಿತಪ್ಪಿದಂತಾಗುವುದು. ತಾಳ ಹಾಕಿಕೊಂಡು ವಿಠ್ಠಲನ ನಾಮಸ್ಮರಣೆಮಾಡತೊಡಗಿದನೆಂದರೆ ಆನಂದಬಾಷ್ಪವು ಧಾರಾಳವಾಗಿ ಸುರಿದು ಹೋಗುವುದು. ನಾಮದೇವನ ಭಕ್ತಿ ವೈರಾಗ್ಯಗಳು ಆತನ ವಯಸ್ಸಿನವರೆಲ್ಲರಿಗೂ ಆತನಲ್ಲಿ ಭಕ್ತಿ ಗೌರವಗಳನ್ನುಂಟುಮಾಡಿಸಿದುವು. ಆತನಿಗಿಂತಲೂ ವಯೋವೃದ್ಧರಾದವರೂ ಆತನನ್ನು ಮಹಾನುಭಾವನೆಂದು ತಿಳಿದು ಗೌರವಿಸುತ್ತಿದ್ದರು. ಭಕ್ತಿ ಭಾವವುಳ್ಳವರ ಮನಸ್ಸಿನಮೇಲೆ ಉತ್ತಮ ಪರಿಣಾಮವನ್ನುಂಟುಮಾಡಿದರೂ, ನಾಮದೇವನ ಚರ್ಯೆಯು, ಮತಶ್ರದ್ಧೆ ಆಚಾರಶೀಲತೆಗಳನ್ನುಂಟಾಗಿದ್ದ ಕೆಲವರಿಗೆ ವಿರೋಧವಾಗಿ ತೋರಸಾಗಿತು. ಅವರಲ್ಲನೇಕರು-ಭಕ್ತರೆಂದೆನ್ನಿಸಿಕೊಂಡ ಈ ಕೆಲವರು, ದೇವರನ್ನು ಆಟದ ಬೊಂಬೆಯಂತೆ ಮಾಡಿಟ್ಟರೆಂದು, ನಮ್ಮ ಕಥಾನಾಯಕನನ್ನೂ ಆತನ ಪರಿವಾರವನ್ನೂ ದೂರುತ್ತಿದ್ದರು.

ನಾಮದೇವನು ಸಾಮಾನ್ಯರ ಅಂತಸ್ತಿನಿಂದ ಎಷ್ಟೋ ಉನ್ನತ ಸ್ಥಿತಿಯಲ್ಲಿದ್ದನಾದರೂ ಇನ್ನೂ ಭಕ್ತಿಸಿದ್ಧನಾಗಿರಲಿಲ್ಲ. ಇದನ್ನು ವ್ಯಕ್ತಪಡಿಸುವ ಒಂದು ಸಂಗತಿಯು ಆ ಕಾಲದಲ್ಲಿ ನಡೆದ ಹಾಗೆ ಒಂದು ಕಥೆಯು ಹೇಳಲ್ಪಟ್ಟಿದೆ. ಒಂದು ದಿನ ವಿಠ್ಠಲನ ಭಕ್ತರೆಲ್ಲರೂ ಒಂದೆಡೆ ನೆರೆದು ಭಗವತ್ಕಥಾ ಗೋಷ್ಠಿಯಲ್ಲಿ ತೊಡಗಿದ್ದಾಗ ಗೋರ ಎಂಬ ಹೆಸರಿನ ಕುಂಬಾರ ಜಾತಿಯ ಭಕ್ತಶ್ರೇಷ್ಠನೊಬ್ಬನು, ತನ್ನ ಕೈಯ್ಯಲ್ಲಿದ್ದ ಗಡಿಗೆಗಳನ್ನು ತಟ್ಟುವ ಹಲಗೆಯಿಂದ ಎಲ್ಲಾ ಭಕ್ತರ ತಲೆಯ ಮೇಲೂ ಒಂದೊಂದು ಏಟನ್ನು ತಟ್ಟುತ್ತಾ ಬಂದನು. ತಲೆಯ ಬುರುಡೆಗೆ ಏಟು ಬಿದ್ದಾಗ್ಗೆ ಯಾರೂ ಏನೂ

ಹೇಳದೇ ನೋವನ್ನು ಸಹಿಸಿಕೊಂಡು ಸುಮ್ಮನಿದ್ದರು. ಆದರೆ ನಾಮದೇವನ ತಲೆಯಮೇಲೆ ಹಾಗೆಯೇ ತಟ್ಟಿದಾಗ ಮಾತ್ರ, ಆತನು - 'ಹಾ, ನೋಯುತ್ತವೆ' ಎಂದಿನಂತೆ! ಅದನ್ನು ಕೇಳಿದ ಆ ಗೋರಾ ಕುಂಬಾರನು,- ಈತನು ಇನ್ನೂ ಪರಿಪಕ್ವ ಸ್ಥಿತಿಯನ್ನು ಹೊಂದಿದವನಲ್ಲವೆಂಬರ್ಥವನ್ನು ಕೊಡುವ-'ಈ ಘಟವು ಇನ್ನೂ ಚೆನ್ನಾಗಿ ಬೆಂದುದಲ್ಲ-ಕಚ್ಚಾ' ಎಂದು ನುಡಿದನು. ಅದನ್ನು ಕೇಳಿದ ನಾಮದೇವನು, ತನ್ನ ಸ್ಥಿತಿಗಾಗಿ ಮನಸ್ಸಿನಲ್ಲಿ ಬಹು ನೊಂದುಕೊಂಡು, ಅಲ್ಲಿಂದ ತನ್ನ ಇಷ್ಟ ದೈವವಾದ ವಿಠ್ಠಲಸ್ವಾಮಿಯ ದೇವಾಲಯಕ್ಕೆ ಬಂದು ಸ್ವಾಮಿ ಸನ್ನಿಧಿಯಲ್ಲಿ ಪಾದದಮೇಲೆ ಬಿದ್ದು ಹೊರಳಾಡುತ್ತಾ,-'ತಂದೇ ನನ್ನ ಗತಿಯೇನು? ಸಜ್ಜನರ ಕೂಟದಿಂದ ಬಾಹಿರನಾದ ನನ್ನನ್ನು ಏಕೆ ಸೃಷ್ಟಿಸಿದೆ? ನನ್ನನ್ನು ಅಪಕ್ವ ಘಟವೆಂದು ನುಡಿದು ಗೋರಾನು ಅವಮಾನಗೊಳಿಸಿದನಲ್ಲ, ಅದು ನಿನಗೆ ಅರಿಕೆಯಿಲ್ಲವೆ?' ಎಂದು ಮುಂತಾಗಿ ಹಲುಬಿಕೊಂಡು ದುಃಖಿಸಿದನು. ಅವನ ನಿಷ್ಕಪಟನೋಭಾವಕ್ಕೆ ಮೆಚ್ಚಿ ಸ್ವಾಮಿಯು-'ಮಗೂ ನಾಮದೇವ ಚಿಂತಿಸಬೇಡ. ಅದರಿಂದ ನಿನಗೆ ಅಪಮಾನವೇನೂ ಇಲ್ಲ. ಮನುಷ್ಯನು ಜ್ಞಾನಸಿದ್ಧಿ ಹೊಂದಿ ಮೋಕ್ಷಸಾಮ್ರಾಜ್ಯ ಸುಖವನ್ನು ಸೂರೆಗೊಳ್ಳಬೇಕಾಗಿದ್ದರೆ, ಮೊದಲು ಒಬ್ಬ ಯೋಗ್ಯ ಗುರುವನ್ನು ಆಶ್ರಯಿಸಬೇಕು. ಗುರೂಪದೇಶದಿಂದ ಪವಿತ್ರಗಾತ್ರನಾದರಲ್ಲದೆ ಸಾಧಕನಿಗೆ ಯುಕ್ತಮಾರ್ಗವೇ ಗೋಚರಿಸದು ಆದುದರಿಂದ ನೀನು ಒಬ್ಬ ಗುರುವನ್ನಾಶ್ರಯಿಸಿ ಜ್ಞಾನಸಿದ್ಧಿಯನ್ನು ಹೊಂದಬೇಕೆಂಬುದನ್ನು ಸೂಚಿಸಲು ಗೋರಾನು ಹಾಗೆ ಹೇಳಿದನಲ್ಲದೆ ಬೇರಲ್ಲ' ಎಂದು ನುಡಿದನು. ಅದನ್ನು ಕೇಳಿದ ನಾಮದೇವನು-'ನನಗೆ ನಿನಗಿಂತಲೂ ಇನ್ನು ಗುರುವೆಂದರಾರು? ನೀನೇ ಉಪದೇಶ ಮಾಡು, ಹಾಗಿಲ್ಲದಿದ್ದರೆ ಯೋಗ್ಯನಾದ ಒಬ್ಬ ಗುರುವನ್ನು ತೋರಿಸು' ಎಂದು ಪ್ರಶ್ನಿಸಿದನು.-'ಆಗ ನಾಮದೇವ, ವಿಸೋಬಾಕೇಶನೆಂಬ ಜ್ಞಾನಿಯು ನಿನಗೆ ಗುರುವಾಗಲು ಸರ್ವವಿಧದಿಂದಲೂ ಅರ್ಹನು. ಆತನು ಬ್ರಹ್ಮಜ್ಞಾನಿಯು. ಆತನಿಂದ ಉಪದೇಶ ಪಡೆದೆಯಾದರೆ ನಿನ್ನ ಜನ್ಮವು ಸಾರ್ಥಕವಾಗುವುದು' ಎಂದು ಸ್ವಾಮಿಯು ಅಪ್ಪಣೆಯಾಯಿತು. ನಾಮದೇವನು ಒಡನೆ ಅಲ್ಲಿಂದ ಹೊರಟು, ವಿಸೋಬಾಕೇಶನು ವಾಸವಾಗಿದ

ಮಲ್ಲಿಕಾರ್ಜುನ ಸ್ವಾಮಿಯ ಆಲಯಕ್ಕೆ ಬಂದನು. ನಾಮದೇವನಿಗೂ ವಿಸೋಬಾನಿಗೂ ಪ್ರಥಮ ದರ್ಶನವಾದ ವಿಚಾರವು ಬಹು ವಿಚಿತ್ರವಾಗಿ ಹೇಳಲ್ಪಟ್ಟಿದೆ. ನಾಮದೇವನು ದೇವಾಲಯಕ್ಕೆ ಹೋಗಿ ನೋಡಿದಾಗ್ಗೆ ವಿಸೋಬಾನು ಅಲ್ಲಿದ್ದ ಒಂದು ಲಿಂಗದಮೇಲೆ ಪಾದಗಳನ್ನಿಟ್ಟುಕೊಂಡು ಮಲಗಿದ್ದುದು ಕಾಣಿಸಿತು. ಆ ದೃಶ್ಯವನ್ನು ಕಂಡೊಡನೆಯೇ ಬಹು ವಿಷಾದಪಟ್ಟುಕೊಂಡು ನಾಮದೇವನು-'ಅಕ್ಕಟಾ, ಇದಾವ ಜನ್ಮದ ಪ್ರಾರಬ್ಧಕರ್ಮವಿದ್ದೀತು.' ಎಂದುಕೊಂಡು ಸಮೀಪಕ್ಕೆ ಬಂದು-ಆತನ ಕಿವಿಯಲ್ಲಿ-'ಸ್ವಾಮೀ ಇದೇನನ್ಯಾಯ ? ಲಿಂಗರೂಪೀ ಪರಶಿವನಮೇಲೆ ಕಾಲಿಟ್ಟುಕೊಂಡು ಮಲಗಬಹುದೇ ?' ಎಂದು ಕೇಳಿದನು. ಅದಕ್ಕೆ ಆ ಮುದುಕನು-'ಅಯ್ಯಾ ವೃದ್ಧಾಪ್ಯದಿಂದ ಕೈಕಾಲುಗಳ ಸ್ವಾಧೀನವನ್ನು ಕಳೆದುಕೊಂಡಿರುವ ನಾನು ಬೇರೆಡೆಗೆ ಕಾಲೆತ್ತಿ ಇಡಲೂ ಅಶಕ್ತನಾಗಿದ್ದೇನೆ. ಯುವಕನೂ ಬಲಶಾಲಿಯೂ ಆದ ನೀನು ಆ ಕಾಲನ್ನು ಎತ್ತಿ ದೇವರಿಲ್ಲದ ಬೇರೊಂದು ಸ್ಥಳವಲ್ಲಿಡಪ್ಪಾ'' ಎಂದು ನುಡಿದನು.

ನಾಮದೇವನು ಹಾಗೆಯೇ ಮಾಡಿದನು. ನೋಡಿದರೆ ಹೊಸದಾಗಿ ಪಾದಗಳನ್ನು ಇಟ್ಟ ಸ್ಥಳದಲ್ಲೂ ಒಂದು ಲಿಂಗವು ಕಾಣಿಸಿತು. ಗಾಬರಿಗೊಂಡು, ಅಲ್ಲಿಂದ ಎತ್ತಿ ಬೇರೊಂದೆಡೆಯಲ್ಲಿಟ್ಟನು. ಅಲ್ಲೂ ಒಂದು ಲಿಂಗವು ಕಾಣಿಸಿಕೊಂಡಿತು. ಹೀಗೆ ನಾಮದೇವನು ಆ ಸಾಧುವಿನ ಪಾದಗಳನ್ನು ದೇವಾಲಯದ ಎಲ್ಲಾ ಸ್ಥಳಗಳಲ್ಲೂ ಇಟ್ಟು ನೋಡಿದನು. ಎಲ್ಲಾ ಸ್ಥಳಗಳಲ್ಲೂ ಒಂದೊಂದು ಲಿಂಗವು ಕಾಣಿಸತೊಡಗಿತು. ಇದನ್ನು ಕಂಡ ಆ ಭಕ್ತನಿಗೆ ಅದ್ಭುತವೆನ್ನಿಸಿತು. ದೇವರನ್ನು ಇಷ್ಟುಮಟ್ಟಿಗೆ ಸ್ವಾಧೀನಪಡಿಸಿಕೊಂಡು, ಸರ್ವತ್ರ ವ್ಯಾಪ್ತನಾಗಿರುವ ಪರಬ್ರಹ್ಮವಸ್ತುವನ್ನು ಹೀಗೆ ಪ್ರತ್ಯಕ್ಷೀಕರಿಸಿಕೊಂಡಿದ್ದ ಆತನನ್ನು ಕಂಡು ನಿಜವಾಗಿಯೂ ಆತನು ಮಹಾನುಭಾವನೆಂದುಕೊಂಡನು. ಒಡನೆ ಆತನ ಪಾದಗಳಿಗೆ ನಮಸ್ಕರಿಸಿ ತನಗೆ ಆತ್ಮಸಿದ್ಧಿಯ ಮಾರ್ಗವನ್ನು ಉಪದೇಶಿಸಿ, ಕಾಪಾಡಬೇಕೆಂದು ಬೇಡಿಕೊಂಡನು. ವಿಸೋಬಾಕೇಶನೂ ಅಂತಹ ಭಕ್ತೋತ್ತಮನು ಶಿಷ್ಯನಾಗಿ ದೊರೆತುದಕ್ಕಾಗಿ ಪರಮಾನಂದಪಟ್ಟು ಯುಕ್ತ ಸಂಪ್ರದಾಯವನ್ನನುಸರಿಸಿ, ನಾಮದೇವನಿಗೆ ಬೋಧನೆಮಾಡಿದನು ''ಮಗೂ, ಕೇಳು-ಪ್ರಾಕೃತ ಶರೀರ

ದಲ್ಲಿ ಜೀವಾತ್ಮನು ಹೇಗೆ ವ್ಯಾಪಿಸಿರುವನೋ, ಹಾಗೆಯೇ ಬ್ರಹ್ಮಾಂಡದ ಸಕಲ ಚರಾಚರ ವಸ್ತುಗಳಲ್ಲೂ ಪರಮಾತ್ಮನು ವ್ಯಾಪಿಸಿಕೊಂಡಿರುವನು. ಈ ತತ್ತ್ವವನ್ನು ತಿಳಿಯದ ಮನುಷ್ಯರು, ನಾನು ಹುಡುಗ, ನಾನು ಮುದುಕ, ನಾನು ಶ್ರೀಮಂತ, ನಾನು ಬಡವ, ನಾನು ಪಂಡಿತ, ನಾನು ಅಜ್ಞಾನಿ ಎಂದು ಅಜ್ಞಾನದಿಂದ ವ್ಯವಹರಿಸುತ್ತಿರುವರು. ನಾನು ಎಂಬರ್ಥದಿಂದ ತನ್ನನ್ನು ಉದ್ದೇಶಿಸಿಕೊಂಡು ಹೇಳಿಕೊಂಡಾಗ್ಗೆ ಅದು ಸ್ಥೂಲವಾದ ಶರೀರವನ್ನು ಕುರಿತುದೆಂದು ಅಜ್ಞಾನಿಯು ತಿಳಿಯುವನು. ಆದರೆ ಜ್ಞಾನಿಯಾದರೋ ಅದು ಜೀವಾತ್ಮನನ್ನು ಕುರಿತುದೆಂದು ತಿಳಿದು, ಸುಖ ದುಃಖ ಶೀತ ಉಷ್ಣ ಲಾಭ ನಷ್ಟ ಮುಂತಾದ ಯಾವ ದ್ವಂದ್ವದಿಂದಲೂ ಲಿಪ್ತನಾಗದೆ ನಿತ್ಯತೃಪ್ತನಾಗಿರುವನು. ಭಗವಂತನು ಚೇತನಾಚೇತನಾತ್ಮಕವಾದ ಸಮಸ್ತವನ್ನೂ ಅಂತರ್ಯಾಮಿಯಾಗಿ ವ್ಯಾಪಿಸಿರುವನಾದುದರಿಂದ ಸಮದೃಷ್ಟಿಯುಳ್ಳ ಜ್ಞಾನಿಯು ಎಲ್ಲೆಲ್ಲಿಯೂ ಭಗವಂತನನ್ನೇ ನೋಡುವನು. ಇಂತಹ ನಿಶ್ಚಯ ಜ್ಞಾನದಿಂದ ಕೂಡಿದ ಮಹಾನುಭಾವನನ್ನು ರಾಗದ್ವೇಷಾದಿಗಳು ಬಾಧಿಸವು. ಅವನು ಸಮಸ್ತ ಕಾರ್ಯಗಳನ್ನೂ, ಭಗವಂತನು ಸೂತ್ರಧಾರಿಯಾಗಿದ್ದು ನಡೆಸುವನಲ್ಲದೆ ಕರ್ತನು ತಾನಲ್ಲವೆಂದು ತಿಳಿದು ನಿಶ್ಚಿಂತನಾಗಿರುವನು. ಇಂತಹ ಸಮತ್ವಭಾವನೆಯು ಯಾರಿಗೆ ಪ್ರಾಪ್ತಿಸುವುದೋ ಅವನೇ ಧನ್ಯನು. ನಾಮದೇವಾ ನೀನು ಧನ್ಯನು. ಲೋಕವೆಲ್ಲವೂ ನಿನಗೆ ಪಾಂಡುರಂಗ ವಿಠ್ಠಲನ ಸ್ವರೂಪವಾಗಿಯೇ ಕಾಣುತ್ತದೆ. ವಿಠ್ಠಲನ ಪರಿಪೂರ್ಣಾನುಗ್ರಹವು ನಿನ್ನ ಮೇಲಿದೆ' ಎಂದು ಆತನ ತಲೆಯ ಮೇಲೆ ಕೈಯಿಟ್ಟು ಆಶೀರ್ವದಿಸಿದನು.

ಹೀಗೆ ಗುರೂಪದೇಶಗೊಂಡು, ನಿರ್ಮಲ ಮನಸ್ಕನಾದ ನಾಮದೇವನು, ಭಗವಂತನು ಸರ್ವಶಕ್ತ, ಸರ್ವವ್ಯಾಪಿ ಎಂಬೀ ತತ್ತ್ವಗಳನ್ನು ಪ್ರತ್ಯಕ್ಷ ಕಂಡು, ಮಹದಾನಂದದಿಂದ ಗುರುವಿನ ಅಪ್ಪಣೆಯನ್ನು ಪಡೆದು ಊರಿಗೆ ಬಂದನು. ಗುರೂಪದೇಶವಾಗುವುದಕ್ಕೆ ಮುಂಚೆ 'ಕಚ್ಚಾ' ಆಗಿದ್ದ ನಾಮದೇವನು, ಉಪದೇಶಪಡೆದು ಈಗ 'ಪಕ್ಕಾ' (ಪಕ್ವ ಘಟಸ್ವರೂಪಿಯಾದವನು) ಆಗಿ ಸಕಲರ ಗೌರವಕ್ಕೂ ಪಾತ್ರನಾಗಿದ್ದನು.



ಅಧ್ಯಾಯ ೪. "ತೀರ್ಥಯಾತ್ರಾ"

ಹಿಂದೂಮತಾನುಯಾಯಿಗಳು ಆಚರಿಸಬೇಕಾದ ಧಾರ್ಮಿಕ ಕೃತ್ಯಗಳಲ್ಲಿ ತೀರ್ಥಕ್ಷೇತ್ರಾದಿಗಳ ಯಾತ್ರೆಯೂ ಒಂದು. ಪೂರ್ವಕಾಲದಲ್ಲಿ, ಹೊಗೇಗಾಡಿಯೇ ಮುಂತಾದ ಯಾನಸಾಧನಗಳಿಲ್ಲದಿದ್ದಾಗ ಎಷ್ಟುದೂರದ ಯಾತ್ರೆಯಾದರೂ ಕಾಲುನಡಿಗೆಯಲ್ಲೇ ಸಾಗುತ್ತಿದ್ದಿತು. ಇದರಿಂದ ಯಾತ್ರಿಕರಲ್ಲಿ ಶ್ರದ್ಧಾ ಭಕ್ತಿಗಳು ಅಭಿವೃದ್ಧಿಯಾಗುತ್ತಿದ್ದುದು ಮಾತ್ರವಲ್ಲ; ದೇಶ ಸಂಚಾರದಿಂದ ಪ್ರಾಪ್ತವಾಗಬಹುದಾದ ಸಕಲ ಪ್ರಯೋಜನಗಳೂ ಉಂಟಾಗುತ್ತಿದ್ದುವು. ಯಾತ್ರೆಗೆಂಬ ಉದ್ದೇಶದಿಂದ ಈಗ ಗುಂಪುಗುಂಪಾಗಿ ನಡೆಯುತ್ತಿರುವ ಜನಗಳ ಪ್ರಯಾಣದಿಂದ ರೈಲ್ವೆ ಕಂಪೆನಿಯವರಿಗೆ ಆಗುವ ದ್ರವ್ಯರೂಪ ಪ್ರಯೋಜನದ ಕಾಲು ಭಾಗದಷ್ಟು ಧಾರ್ಮಿಕಪ್ರಯೋಜನವಾದರೂ ಯಾತ್ರಿಕರಿಗೆ ಲಭಿಸುವುದಾದರೆ ಅದು ಬಹು ಸಂತೋಷಕರವಾದ ಸಂಗತಿಯೇ ಸರಿ !

ನಾಮದೇವನ ಜೀವಿತದಲ್ಲಿ ಆತನು ಮಾಡಿದ ತೀರ್ಥಯಾತ್ರೆಯೂ ಆ ಸಂದರ್ಭದಲ್ಲಿ ನಡೆದ ಕೆಲವು ಅಮಾನುಷಕಾರ್ಯಗಳೂ ವಿವರಿಸಲ್ಪಟ್ಟಿವೆ ! ಯಾತ್ರೆಗಾಗಿ ಹೊರಟ ಈತನೊಂದಿಗೆ ಧ್ಯಾನದೇವನು ಪ್ರಯಾಣಮಾಡಿದನೆಂದೂ, ಜ್ಞಾನದೇವನು ಪ್ರಯಾಣಮಾಡಿದನೆಂದೂ ಎರಡು ಪಾಠಗಳುಂಟು. ಧ್ಯಾನದೇವನೆಂಬ ಸಾಧುವರ್ಯನು ಈತನಿಗಿಂತಲೂ ನೂರುವರ್ಷಗಳಿಗೆ ಮುಂಚೆ ಜೀವಿಸಿದ್ದವನಾದ್ದರಿಂದ ಆತನು ಈತನೊಂದಿಗೆ ಯಾತ್ರೆಗಾಗಿ ಪ್ರಯಾಣಮಾಡಿದನೆಂಬುದು ಅಸಂಭವ. ಇನ್ನು ಜ್ಞಾನದೇವನೆಂಬೊಬ್ಬ ಭಕ್ತನೂ ನಮ್ಮ ಕಥಾನಾಯಕನೂ ಯಾತ್ರೆಗಾಗಿ ಪ್ರಯಾಣಮಾಡಿರಬಹುದು. ಅದಂತಿರಲಿ.—

ಜ್ಞಾನದೇವ ನಾಮದೇವರಿಬ್ಬರೂ ಚಂದ್ರಭಾಗಾ ನದಿಗೆ ಹೊರಟು ಸ್ನಾನಮಾಡಿ ಅಲ್ಲಿಂದ ವಿಠ್ಠಲನ ಆಲಯಕ್ಕೆ ಬಂದು ಸ್ವಾಮಿಯ ಸೇವೆ ಮಾಡಿ, ಭಾರತದೇಶದಲ್ಲಿರುವ ತೀರ್ಥಕ್ಷೇತ್ರಗಳ ಯಾತ್ರೆ ಮಾಡಿಕೊಂಡು ಬರಬೇಕೆಂದು ಸಂಕಲ್ಪಿಸಿ, ಪಂಡರಾಪುರದಿಂದ ಹೊರಟರು. ದಿನಕ್ಕೆ ಸ್ವಲ್ಪ ಸ್ವಲ್ಪ ದೂರ ಪ್ರಯಾಣಮಾಡಿಕೊಂಡು, ಆಯಾ ಸ್ಥಳಗಳ ವಿಶೇಷ

ಗಳನ್ನು ನೋಡುತ್ತಾ, ಅಲ್ಲಲ್ಲಿಯ ದೇವಾಲಯಗಳನ್ನು ಸಂದರ್ಶಿಸುತ್ತಾ, ಕೆಲವು ದಿನಗಳ ಮೇಲೆ ಹಸ್ತಿನಾಪುರಕ್ಕೆ ಬಂದರು. ಅಲ್ಲಿ ನಾಮದೇವನು ತಾವು ಇಳಿದುಕೊಂಡಿದ್ದ ಧರ್ಮಶಾಲೆಯಲ್ಲಿಯೇ ಎಂದಿನಂತೆ ಭಜನೆಗೆ ತೊಡಗಲು ಆ ಪಟ್ಟಣದ ನಿವಾಸಿಗಳು ಬಂದು, ಕರ್ಣಾನಂದಕರವಾದ ಆ ಭಜನೆಯನ್ನು ಕೇಳಿ ಪರಮಾನಂದಪಟ್ಟು ಹೋಗುತ್ತಿದ್ದರು. ದಿನದಿನಕ್ಕೆ ನಾಮದೇವನ ಸಂಕೀರ್ತನದ ಮಹಿಮೆಯು ಎಲ್ಲೆಲ್ಲೂ ವ್ಯಾಪಿಸಿ ಕೊನೆಗೆ ರಾಜನ ಕಿವಿಗೂ ಹೋಯಿತು. ಆಗ ಅಲ್ಲಿ ಆಳುತ್ತಿದ್ದ ರಾಜನು ಬಹು ದುಷ್ಕೃತ್ಯವನಾದುದರಿಂದ, ನಾಮದೇವ ಜ್ಞಾನದೇವರು ನಿಜವಾದ ಭಕ್ತರೇ ಅಥವ ವೇಷಗಾರರೇ ಎಂಬುದನ್ನು ಪರೀಕ್ಷಿಸಬೇಕೆಂದು ಇಚ್ಛಿಸಿದನು. ಆದರೆ ಪರೀಕ್ಷಿಸುವುದೆಂದರೆ ಹೇಗೆ ? ಧರ್ಮಬಾಹಿರನಾದ ಆತನು ಒಂದು ಹಸುವನ್ನು ಕೊಲ್ಲಿಸಿ, ಅದನ್ನು ನಾಮದೇವನು ಬದುಕಿಸುವುದಾದರೆ, ಆತನನ್ನು ಗೌರವಿಸುವುದಾಗಿಯೂ, ಇಲ್ಲದಿದ್ದರೆ ಅವಮಾನಗೊಳಿಸಿ ಶಿಕ್ಷಿಸುವುದಾಗಿಯೂ ಹೇಳಿಹೋದನು. ನಾಮದೇವನು-'ಅಕ್ಕಟಾ, ಲೋಕದಲ್ಲಿ ಎಂತಹ ಅನ್ಯಾಯಗಳು ನಡೆಯುತ್ತಿರುವುವಲ್ಲಾ, ಪ್ರಾಣಿಹಿಂಸೆಯೂ ಧರ್ಮಬಾಹಿರತ್ವವೂ ಹೆಚ್ಚಿಹೋದುವಲ್ಲಾ' ಎಂದು ಚಿಂತಿಸಿ, ಆ ಸತ್ತ ಗೋವಿನ ತಲೆಯನ್ನು ತನ್ನ ತೊಡೆಯಮೇಲಿಟ್ಟುಕೊಂಡು ವಿಠ್ಠಲನನ್ನು ನೆನೆನೆನೆದು ಹಲವು ಬಗೆಯಿಂದ ಪ್ರಾರ್ಥಿಸಿದನು. –'ಪಾಂಡುರಂಗಸ್ವಾಮಿ, ಈ ಮೃತಗೋವನ್ನು ದಯೆಮಾಡಿ ರಕ್ಷಿಸು. ದ್ರೌಪದಿ, ಕರಿರಾಜ, ಧ್ರುವ ಪ್ರಹ್ಲಾದ ಮುಂತಾದ ಭಕ್ತಾಗ್ರೇಸರರನ್ನು ಅನೇಕ ಆಪದಗಳಿಂದ ತಪ್ಪಿಸಿ ಕಾಪಾಡಿದ ನಿನಗೆ ಇದೊಂದು ಘನವಾದುದಲ್ಲ. ನೀನಿಂದು ಈ ಸತ್ತಹಸುವನ್ನು ರಕ್ಷಿಸದಿದ್ದರೆ, ಆ ನೀಚನು ನನ್ನ ತಲೆಯನ್ನು ಹೊಡೆಯಿಸಲೂ ಹೇಸನು. ನಿನ್ನ ಭಕ್ತನಾದ-ನೀನೇ ಸರ್ವಸ್ವವೂ ಎಂದು ನಂಬಿ ಶರಣಾಗತನಾಗಿರುವವನಾದ ನಾನು ದುರ್ಮರಣ ಹೊಂದಬೇಕೆಂಬುದು ನಿನ್ನ ಇಚ್ಛೆಯಾಗಿದ್ದಲ್ಲಿ, ನಾನು ಅದಕ್ಕೆ ಅಂಜುವುದಿಲ್ಲ. ಆದರೆ, ಅದರಿಂದ ಈ ದುರುಳನು ಆ ಕಾರಣವನ್ನು ತೆಗೆದುಕೊಂಡು, ನಿನ್ನ ಹೆಸರನ್ನು ಹೆಚ್ಚುರೀತಿಯಿಂದ ಕಳಂಕಗೊಳಿಸುವನು' ಎಂದು ಪ್ರಾರ್ಥಿಸಿದನು. ಭಗವನ್ಮಹಿಮೆಯು ವಿಚಿತ್ರವಾದುದು. ಎಲ್ಲರೂ ನೋಡುತ್ತಿದ್ದಂತೆಯೇ ಕೊಲ್ಲಲ್ಪಟ್ಟು ಸತ್ತುಬಿದ್ದ

ದ್ದ ಆ ಗೋವು ನಾಮದೇವನ ಹಸ್ತಸ್ಪರ್ಶದಿಂದ ಎದ್ದುನಿಂತು ಮೇಯಲಾ ಡಲಾರಂಭಿಸಿತು ಆ ಸಂಗತಿಯು ಧೂರ್ತನಾದ ಆ ರಾಜನಿಗೆ ತಿಳಿಸಲ್ಪಟ್ಟಿ ತು. ಒಡನೆ ಆತನು ನಾಮದೇವನ ಮಹಿಮೆಗಾಗಿ ಅತಿಶಯ ಗಾಬರಿ ಪಟ್ಟು, ಭಯಭಕ್ತಿಯಿಂದ ನಡೆದು ಬಂದು ಆತನ ಪಾದಗಳನ್ನು ಹಿಡಿದು ನಮಸ್ಕರಿಸಿ-'ಮಹಾಭಾಗವತರೇ, ದುರ್ಮದಾಂಧನಾದ ನಾನು ಪಾದದಲ್ಲಿ ಮಹಾಪರಾಧಮಾಡಿದೆ ಅದನ್ನು ಮನಸ್ಸಿನಲ್ಲಿಡದೆ ಕ್ಷಮಿಸಿ, ಶರಣಾಗತ ನಾದ ನನ್ನನ್ನು ಸಂರಕ್ಷಿಸಬೇಕು.' ಎಂದು ಬಹು ಬಗೆಯಿಂದ ಬೇಡಿಕೊಂ ಡನು. ನಾಮದೇವನು, ಅವನಲ್ಲಿ ನಿಜವಾದ ಪಶ್ಚಾತ್ತಾಪವುಂಟಾಗಿದೆ ಎಂಬುದನ್ನು ತಿಳಿದು, ಹೃದಯದಲ್ಲಿ ಧರ್ಮಾಂಕುರವನ್ನು ನೆಟ್ಟು, ಅದ ನ್ನು ಹರಿನಾಮ ಹರಿಸೇವೆ ಮುಂತಾದ ಸಾಧನಗಳಿಂದ ವೃದ್ಧಿಗೊಳಿಸಿಕೊಂ ಡು ಜನ್ಮಸಾರ್ಥಕ್ಯವನ್ನುಂಟುಮಾಡಿಕೊಳ್ಳೆಂದು ಉಪದೇಶಿಸಿ ಎಲ್ಲರೊಂ ದಿಗೆ ಅಲ್ಲಿಂದ ಮುಂದಕ್ಕೆ ಪ್ರಯಾಣ ಮಾಡಿದನು.

ಜ್ಞಾನದೇವ ನಾಮದೇವರು, ಹಸ್ತಿನಾಪುರದಿಂದ ಪ್ರಯಾಣಮಾಡಿ ವಾರಣಾಸಿಯನ್ನು ಸೇರಿ, ಅಲ್ಲಿ ಗಂಗಾಸ್ನಾನಮಾಡಿ, ವಿಶ್ವೇಶ್ವರನನ್ನು ಸೇ ವಿಸುತ್ತಾ, ಯಥಾಪೂರ್ವವಾಗಿ ತಮ್ಮ ವಾಸಸ್ಥಳದಲ್ಲಿ ಹರಿಭಜನೆ ನಾಮ ಸಂಕೀರ್ತನೆಗಳನ್ನು ಸಾಗಿಸುತ್ತಾ, ಆ ಪಟ್ಟಣದ ಜನರೆಲ್ಲರಿಗೂ ಮಹದಾ ನಂದವನ್ನುಂಟುಮಾಡುತ್ತಿದ್ದರು. ಅಲ್ಲಿಂದ ಮುಂದಕ್ಕೆ ಪ್ರಯಾಗ ಕ್ಷೇ ತ್ರಕ್ಕೆ ಪ್ರಯಾಣಮಾಡಿ, ಗಂಗಾ ಯಮುನಾ ಸಂಗಮ ಸ್ನಾನದಿಂದ ಸಂತು ಷ್ಟರಾಗಿ ತರುವಾಯ ಅಯೋಧ್ಯೆ, ಮಥುರ, ಗೋಕುಲ, ಬೃಂದಾವನ ಮುಂ ತಾದ ಪುಣ್ಯಕ್ಷೇತ್ರಗಳನ್ನೂ ಸಂದರ್ಶಿಸಿ ಹರಿದ್ವಾರವನ್ನು ಕುರಿತು ಪ್ರಯಾ ಣಮಾಡಿದರು. ಮಾರ್ಗದಲ್ಲಿ ಮಾರವಾಡ ದೇಶದಲ್ಲಿ ಸಂಚಾರಮಾಡುತ್ತಿ ದ್ದಾಗ್ಗೆ, ಒಂದುದಿನ ಅವರಿಗೆ ವಿಶೇಷ ಬಾಯಾರಿಕೆಯುಂಟಾಯಿತು. ಜ್ಞಾನ ದೇವನು ಅಲ್ಲೇ ಸಮೀಪದಲ್ಲಿದ್ದ ಒಂದು ಬಾವಿಯಲ್ಲಿಳಿದು ಜಲಪಾನ ಮಾ ಡಿದನು. ಆದರೆ ನಾಮದೇವನಿಗೆ ಬಾವಿಯಲ್ಲಿಳಿದು ಅಭ್ಯಾಸವಿಲ್ಲದಿದ್ದುದರಿಂದ ಆತನು ವಿಠ್ಠಲನನ್ನು ಸ್ಮರಿಸಿ, ಬಾವಿಯೊಳಗಿನ ನೀರು ಮೇಲಕ್ಕೆ ಉಕ್ಕಿ ಹರಿ ಯಬೇಕೆಂದು ಅಪೇಕ್ಷಿಸಿದನು. ಪರಮಾಶ್ಚರ್ಯದ ಸಂಗತಿ! ಒಡನೆ ಬಾವಿ ಯನೀರು ಮೇಲಕ್ಕೆ ಉಕ್ಕಿ ಹರಿದು ಆತನ ಬಳಿ ಪ್ರವಹಿಸಿತಂತೆ! ಮಾರ್ಗಶಿರ

ಮಾಸದಲ್ಲಿ ಆ ತೀರ್ಥಸ್ನಾನಕ್ಕೆಂದು ಈಗಲೂ ಅಲ್ಲಿಗೆ ಜನರು ಬರುವ ಪದ್ಧತಿಯಿದೆಯಂತೆ. ಅದು ನಾಮದೇವನ ತೀರ್ಥವೆಂದು ಪ್ರಸಿದ್ಧವಾಗಿದೆಯಂತೆ! ಗಂಗಾಸ್ನಾನಮಾಡಿ ಸ್ವಾಮಿಸೇವೆಯನ್ನು ತೀರಿಸಿಕೊಂಡ ತರುವಾಯ ಬದರಿಕಾಶ್ರಮ ದರ್ಶನಕ್ಕೆಂದು ಪ್ರಯಾಣಮಾಡಿದರು. ಅಲ್ಲಿ ಕೇದಾರನಾಥ ಬದರೀನಾಥ ಕ್ಷೇತ್ರಗಳಲ್ಲಿ ಸ್ವಾಮಿಸೇವೆಯನ್ನು ತೀರಿಸಿಕೊಂಡು, ಆ ಭಕ್ತರು ವೈದೇಶ್ವರ, ಜಗನ್ನಾಥ, ಶ್ರೀಕೂರ್ಮ, ಭೀಮೇಶ್ವರ ರಾಜಮಹೇಂದ್ರ, ಸಿಂಹಾಚಲ, ಶ್ರೀಶೈಲ, ಅಹೋಬಲ, ಕಾಂಚೀಪುರ, ವೇಂಕಟಾಚಲ, ಚಿದಂಬರ, ರಾಮೇಶ್ವರ, ಶ್ರೀರಂಗ, ಯಾದವಾದ್ರಿ ಮುಂತಾದ ದಿವ್ಯಕ್ಷೇತ್ರಗಳನ್ನು ಸಂದರ್ಶಿಸಿ ಅಲ್ಲೆಲ್ಲಾ ತೀರ್ಥಗಳಲ್ಲಿ ಸ್ನಾನಮಾಡಿ ಸ್ವಾಮಿಯನ್ನು ಸೇವಿಸಿ, ಸರ್ವದಾ ಭಜನೆ ಸಂಕೀರ್ತನೆಗಳನ್ನು ನಡೆಸುತ್ತಾ, ಜನರಿಗೆ ಧರ್ಮಬೋಧೆ ಮಾಡುತ್ತಾ, ಶಿವರಾತ್ರಿಯು ಪ್ರಾಪ್ತಿಸುವ ವೇಳೆಗೆ ನಾಗನಾಥಪುರವೆಂಬ ಮಹಾಶಿವ ಕ್ಷೇತ್ರಕ್ಕೆ ಬಂದು ಸೇರಿದರು. ಅಲ್ಲಿ ಕ್ರಮವಾಗಿ ತೀರ್ಥಸ್ನಾನ ಆಹ್ನಿಕಾದಿಗಳನ್ನು ತೀರಿಸಿಕೊಂಡು ಸ್ವಾಮಿದರ್ಶನಕ್ಕೆಂದು ದೇವಾಲಯಕ್ಕೆ ಬಂದು ನಾಮಸಂಕೀರ್ತನಕ್ಕೆ ಪ್ರಾರಂಭಿಸಿದರು. ಸುಸ್ವರದಿಂದ ನಡೆಯುತ್ತಿದ್ದ ಭಗವನ್ನಾಮ ಸಂಕೀರ್ತನವನ್ನು ಕೇಳುವುದಕ್ಕೆ ನೂರಾರು ಜನರು ಸುತ್ತಲೂ ನೆರೆದು, ಭಕ್ತ್ಯಾಧಿಕ್ಯದಿಂದ ಆನಂದ ಬಾಷ್ಪಗಳನ್ನು ಸುರಿಸುತ್ತಾ, ಕೋಲಾಹಲಮಾಡುತ್ತಾ ಇದ್ದರು. ಆ ವೇಳೆಗೆ ಯಾಮಪೂಜೆಗೆಂದು ಸ್ನಾನಾದಿಗಳನ್ನು ಮಾಡಿಕೊಂಡು ಬಂದ ಅರ್ಚಕರು, ಅಲ್ಲಿದ್ದ ಜನಸಂದಣಿಯನ್ನು ನೋಡಿ, ಅಸಹ್ಯಪಟ್ಟುಕೊಂಡು-'ಛೀ ಛೀ, ಏನಿದು ಗಲಭೆ ? ಎಷ್ಟು ಕೂಗು ? ಈ ಹುಚ್ಚುಕೂಗುಗಳಿಗೆ ದೇವರು ಒಲಿಯುವನೋ ? ದಾರಿ ಬಿಡಿ. ನಾವು ಮಡಿಯಲ್ಲಿದ್ದೇವೆ'' ಎಂದು ಮುಂತಾಗಿ ಕೂಗಾಡುತ್ತಾ ಇದ್ದರು. ನಾಮದೇವನು,-'ಸ್ವಾಮಿ, ನಾವೂ ಸ್ನಾನಮಾಡಿಯೇ ಬಂದಿದ್ದೇವೆ. ಭಗವತ್ಸಾನ್ನಿಧಿಯಲ್ಲಿ ಮಡಿ ಮೈಲಿಗೆಗಳೆಂದರೇನು ? ತಾವು ದೇವಸ್ಥಾನದೊಳಕ್ಕೆ ದಯಮಾಡಿಸಬಹುದಲ್ಲ' ಎಂದು ವಿನಯದಿಂದಲೇ ವಿಜ್ಞಾಪಿಸಿದನು. ಆದರೆ ಅವರಿಗದು ಸಮಾಧಾನವಾಗಲಿಲ್ಲ, - 'ಎಲೋ, ನೀನಲ್ಲವೆ ನಾಮದೇವನೆಂಬುವನು. ನಿಮಗೆ ದೇವರನಾಮವೆಂದರೆ ಬಹು ಅಗ್ಗವಾಗಿ ಹೋಗಿದೆ. ಭಜನೆ ಸಂಕೀ

ರ್ತನೆ ಎಂಬ ಹೆಸರಿನಿಂದ ಮತಧರ್ಮಗಳನ್ನೆಲ್ಲ ಹಾಳುಮಾಡಿಬಿಟ್ಟೆ! ಹೋಗು, ದೇವಸ್ಥಾನದ ಹಿಂದುಗಡೆಗೆ ಹೋಗಿ, ಅಲ್ಲಿ ನಿನ್ನೀ ಹುಚ್ಚು ಕೂಗಾಟವನ್ನೂ, ಕುಣಿತವನ್ನೂ ಬೇಕಾದಂತೆ ಮಾಡಿಕೋ!'' ಎಂದು ಬಹು ತುಚ್ಛಭಾವದಿಂದ ಆಕ್ಷೇಪಿಸಿದರು. ನಾಮದೇವನು ಕರ್ಣಕಠೋರವಾದ ಆ ಮಾತುಗಳನ್ನು ಕೇಳಿ,-'ಅಕ್ಕಟಾ ನಮ್ಮ ಪಂಡರಿನಾಥನ ಸಾನ್ನಿಧ್ಯದಲ್ಲಿ ಈ ಹೆಚ್ಚು ಕಡಮೆಗಳೆಂಬ ಭಾವನೆಯೇ ಇಲ್ಲದೆ, ಸ್ವಾಮಿಯು ಸರ್ವಸುಲಭನಾಗಿರುವನಲ್ಲಾ! ಜಗಜ್ಜನಕನಾದ ಸ್ವಾಮಿ ಸನ್ನಿಧಿಯಲ್ಲೂ ಈ ನಿರ್ಬಂಧಗಳೇಕೆ? ಈ ಹೆಚ್ಚು ಕಡಮೆಗಳೇಕೆ? ಈ ಭೇದ ಭಾವನೆಯೇಕೆ? ಈ ರಾಗದ್ವೇಷಾದಿಗಳೇಕೆ?'' ಎಂದು ಮನಸ್ಸಿನಲ್ಲಿ ಕಳವಳಪಟ್ಟುಕೊಂಡು, ಆ ಅರ್ಚಕರ ಹೇಳಿಕೆಯಂತೆಯೇ ಅಲ್ಲಿಂದ ಹೊರಟು ಆ ದೇವಾಲಯದ ಹಿಂಭಾಗಕ್ಕೆ ನಡೆದನು. ಜನಗಳ ಗುಂಪು ಅಲ್ಲೂ ನೆರೆಯಿತು. ಭಕ್ತಾದಿಗಳೆಲ್ಲರೂ ಆನಂದೋದ್ರೇಕದಿಂದ ಕರತಾಳಗಳನ್ನು ಹಾಕುತ್ತಾ, ಕೀರ್ತನೆಯಲ್ಲಿ ಮಗ್ನರಾಗಿ ಕೇಕೆಹಾಕುತ್ತಾ, ಹೀಗೆ ರಾತ್ರಿಯನ್ನೆಲ್ಲಾ ನಾಮಸಂಕೀರ್ತನೆಯಲ್ಲೇ ಕಳೆದರು ಪ್ರಾತಃಕಾಲ ಹೊರಕ್ಕೆ ಬಂದು ನೋಡಲಾಗಿ, ಸೂರ್ಯನು ಪಶ್ಚಿಮದಲ್ಲಿ ಮೂಡಿದಂತೆ ಕಾಣಬಂದಿತು. ಭಕ್ತನ ಭಜನೆಗೆ ಮೆಚ್ಚಿ ಸ್ವಾಮಿಯು ಪಶ್ಚಿಮಾಭಿಮುಖನಾಗಿ ತಿರುಗಿಬಿಟ್ಟನು. ಭಕ್ತಪರಾಧೀನನಾದ ಸ್ವಾಮಿಯ ಆಲಯವು, ನಾಮದೇವನು ಭಜನೆಮಾಡುತ್ತಿದ್ದ ದಿಕ್ಕಿಗೇ ತಿರುಗಿದ್ದ ಈ ಪರಮಾಶ್ಚರ್ಯಕರವಾದ ಸಂಗತಿಯನ್ನು ಕಂಡು ನೆರೆದ ಸಮಸ್ತಜನರೂ ಭ್ರಾಂತರಾದರು. ಅರ್ಚಕರ ಸ್ಥಿತಿಯಂತೂ, ಆ ಸಂದರ್ಭದಲ್ಲಿ ಬಹು ಶೋಚನೀಯವಾಗಿದ್ದಿತು. ಅವರು ಆ ಪರಿಸ್ಥಿತಿಯನ್ನು ಕಂಡು ಅತಿಶಯ ಭಯಪಟ್ಟು, ನಾಮದೇವನ ಸನ್ನಿಧಿಗೆ ಬಂದು-'ಭಕ್ತಶಿರೋಮಣೀ, ನಿನ್ನ ಮಹಿಮೆಯನ್ನು ತಿಳಿಯದೆ ಪಾಮರರಾದ ನಾವು, ಬಿರುನುಡಿಗಳನ್ನಾಡಿ ನಿನಗೆ ಅತಿಶಯ ದ್ರೋಹಮಾಡಿದೆವು. ಅದನ್ನು ಮನಸ್ಸಿನಲ್ಲಿಡದೆ ಅನುಗ್ರಹಮಾಡು' ಎಂದು ಪ್ರಾರ್ಥಿಸಿಕೊಂಡರು. ಸಜ್ಜನರಾದ ಭಕ್ತರು ರಾಗದ್ವೇಷಾದಿ ದ್ವಂದ್ವಗಳಿಂದ ಮುಕ್ತರಾಗಿರುವರಲ್ಲವೆ? ನಾಮದೇವನು, ಮನಸ್ಸಿನಲ್ಲಿ ಲೇಶಮಾತ್ರವೂ ಕಳಂಕವಿಲ್ಲದೆ, ಅವರನ್ನೆಲ್ಲಾ ಉಚಿತ

ವಚನಗಳಿಂದ ಆದರಿಸಿ ಎಲ್ಲರೊಂದಿಗೆ ಬೆರೆದು, ಸ್ವಾಮಿಯ ಮಹಿಮೆಯನ್ನು ಕುರಿತು ಮತ್ತೂ ವಿಶೇಷವಾಗಿ ಭಜನೆಮಾಡಿದನು.

ನಾಗನಾಥ ಕ್ಷೇತ್ರದೊಂದಿಗೆ ನಮ್ಮ ಕಥಾನಾಯಕನು, ತನ್ನ ತೀರ್ಥಯಾತ್ರೆಯನ್ನು ಮುಗಿಸಿಕೊಂಡು ಸಂಗಡಿಗರೊಂದಿಗೆ ಹೊರಟು ಪಂಡರಿನಾಥನ ಸನ್ನಿಧಿಗಾಗಿ ಪ್ರಯಾಣಮಾಡಿದನು. ಯಥಾಪೂರ್ವವಾಗಿ ಚಂದ್ರಭಾಗಾ ನದಿಯಲ್ಲಿ ಸ್ನಾನಮಾಡಿ, ಪಾಂಡುರಂಗಸ್ವಾಮಿಯ ಆಲಯಕ್ಕೆ ಬಂದು, ತನ್ನಾ ಇಷ್ಟದೈವವನ್ನು ಕಣ್ಣಾರೆ ಕಂಡು, ಬಾಯಾರೆ ಹೊಗಳಿ, ಮನಸಾರೆ ಧ್ಯಾನಿಸಿ, ಬಹುದಿನಗಳಿಂದ ಅಗಲಿಪ್ಪ ಆ ದೇವರ ದೇವನನ್ನು, ತಾಯನ್ನಗಲಿದ ಎಳೆಗಂದಿಯು ಕರುಪಿಸಂತೆ ಕಂಡು ಪರಮಾನಂದಪಟ್ಟನು.

---

## ಅಧ್ಯಾಯ ೫ "ವಿಠ್ಠಲಸ್ವಾಮಿ"

ಮಹಾರಾಷ್ಟ್ರ ದೇಶದಲ್ಲಿ ಭಕ್ತ ಭಾಗವತರ,-ಸಾಧು ಸಂತರ ಪೂತ ಚರಿತ್ರೆಯನ್ನು ಬರೆದು ಹೆಸರುಗೊಂಡಿರುವ ಮಹೀಪತಿಯು, ನಾಮದೇವನ ಚರಿತ್ರೆಯನ್ನೂ ಬರೆದಿದ್ದಾನೆ. ಅದರಲ್ಲಿ ಆತನು ಯಾತ್ರೆಯಿಂದ ಬಂದ ತರುವಾಯ ಮಾಡಿದ ಬ್ರಾಹ್ಮಣ ಸಂತರ್ಪಣೆಯ ವಿಚಾರವು ಹೀಗೆ ವರ್ಣಿತವಾಗಿದೆ.—'ನಾಮದೇವನು, ಈ ಯಾತ್ರೆಯನ್ನು ಮುಗಿಸಿ ಪಂಡರಾಪುರಕ್ಕೆ ಹಿಂದಿರುಗಿ ಬಂದ ತರುವಾಯ ಶಿಷ್ಟ ಸಂಪ್ರದಾಯವನ್ನನುಸರಿಸಿ, ಬ್ರಾಹ್ಮಣ ಸಮಾರಾಧನೆಯನ್ನು ಮಾಡಬೇಕೆಂದು ಇಚ್ಛಿಸಿದನು. ಆದರೆ ಬಡವನೂ, ಕುಲದಲ್ಲಿ ಕೀಳಾದವನೂ ಆದ ತನಗೆ ಅದು ಸಾಧ್ಯವೇ ಎಂಬ ಚಿಂತೆಯು ಮನಸ್ಸಿಗೆ ವಿಶೇಷ ವ್ಯಥೆಯನ್ನುಂಟುಮಾಡಲು ತನ್ನ ಇಷ್ಟ ದೈವವಾದ ಪಾಂಡುರಂಗಸ್ವಾಮಿಯ ಸನ್ನಿಧಿಯನ್ನು ಸೇರಿ 'ಸ್ವಾಮಿಾ, ನಾನೇನು ಮಾಡಲಿ. ನಿನ್ನ ಆಜ್ಞೆಯನ್ನನುಸರಿಸಿ ತೀರ್ಥಕ್ಷೇತ್ರಗಳ ಯಾತ್ರೆಮಾಡಿ ಬಂದುದಾಯಿತು. ಶಿಷ್ಟ ಸಂಪ್ರದಾಯದಂತೆ ಈಗ ಬ್ರಾಹ್ಮಣ ಸಂತರ್ಪಣೆ ಮಾಡಿ ಭೂತಶಾಂತಿಯ ಕಾರ್ಯಮಾಡತಕ್ಕುದು ಕರ್ತವ್ಯವಾಗಿದೆ, ಏನು

ಮಾಡಲಿ ? ನಾನು ಜಾತಿಯಲ್ಲಿ ಬ್ರಾಹ್ಮಣನಲ್ಲ, ಕುಲಹೀನನು. ಕೈಯು ಲ್ಲಾದರೆ ಒಂದು ಕಾಸಿಲ್ಲ. ಈ ಕಾರ್ಯವು ಹೇಗೆ ನಡೆದೀತು ? ಮುಂದೆ ಏಕ್ಕೇನು ?'' ಎಂದು ಮನಂತಾಗಿ ಗೋಳಿಟ್ಟುಕೊಂಡನು. ತನ್ನ ಆಪ್ತ ಭಕ್ತನಾದ ಆತನ ಮೊರೆಯನ್ನು ಕೇಳಿ ಸ್ವಾಮಿಯು ತಾನೇ ನಿಂತು ಆ ಕೆಲ ಸಗಳನ್ನು ನೆರವೇರಿಸುವುದಾಗಿ ಭರವಸೆಕೊಟ್ಟನಂತೆ. ಬೇಕಾದ ಸಮಸ್ತ ವಸ್ತುಗಳೂ ಸಂಗ್ರಹಿಸಲ್ಪಟ್ಟುವು. ಹತ್ತಿರದ-ದೂರದ ಸ್ಥಳಗಳಿಂದ ನೆರೆದ ಸಹಸ್ರಾರು ಬ್ರಾಹ್ಮಣ ವೃಂದಕ್ಕೆ ವಿನ್ಯ ಭಕ್ಷ್ಯ ಭೋಜ್ಯಗಳೂ ತಾಂಬೂಲ ದಕ್ಷಿಣೆಗಳೂ, ಒದಗಿ ಸಂತರ್ಪಣೆಯು ಅತಿಶಯ ವಿಜೃಂಭಣೆಯಿಂದ ನಡೆದು ಹೋಯಿತು. ನೆರೆದವರೆಲ್ಲರೂ,-'ಪಾಂಡುರಂಗವಿಠ್ಠಲನ ಪ್ರೀತಿಪಾತ್ರನಾದ ನಾಮದೇವನಿಗೆ ಯಾವ ಕಾರ್ಯವು ಅಸಾಧ್ಯ ! ಎಲ್ಲವನ್ನೂ ಸ್ವಾಮಿಯು ತಾನೇ ನಿಂತು ಆಗಮಾಡಿಸುವನು' ಎಂದು ಹೊಗಳಿ ಸಂತೋಷದಿಂದ ತಮ್ಮ ತಮ್ಮ ಸ್ಥಳಗಳಿಗೆ ನಡೆದರು. ಆದರೆ, ಅದರಲ್ಲಿ ಕೊನೆಯ ಭಾಗದಲ್ಲಿ ಮಾತ್ರ ಒಂದು ವಿಚಿತ್ರ ಸಂಗತಿ ನಡೆಯಿತು. ಆವರೆಗೂ ಬ್ರಾಹ್ಮಣ ರೂಪಿ ನಿಂದ ಸಂತರ್ಪಣೆಯ ಸಕಲ ಕಾರ್ಯಗಳನ್ನೂ ಮುಂದಾಳಾಗಿ ನಿಂತು ನಡೆಯಿಸಿದ ವಿಠ್ಠಲಸ್ವಾಮಿಯು ಶೂದ್ರನಾದ ನಾಮದೇವನೊಂದಿಗೆ ತಾನೂ ಕುಳಿತು ಸಹ ಪಙ್ತಿಭೋಜನ ಮಾಡಿಬಿಟ್ಟನಂತೆ ! ಬ್ರಾಹ್ಮಣ ಸಮಾಜ ದಲ್ಲಿ ಆ ಸಂಗತಿಯನ್ನು ಕುರಿತು, ಅತಿಶಯ ಗೊಂದಲವೆದ್ದಿತು. ಈ ಅನ್ಯಾ ಯವು ಎಲ್ಲಾದರೂ ಉಂಟೆ ? ಎಂದು ಸಕಲರೂ ಆಕ್ಷೇಪಿಸಲಾರಂಭಿಸಿದರು. ಮಾತ್ರವಲ್ಲ, ಶೂದ್ರನೊಂದಿಗೆ ಕುಳಿತು ಊಟಮಾಡಿದುದರಿಂದ ಬಹಿಷ್ಕಾರ ವಿಮೋಚನೆಯಾಗಿ ಶುದ್ಧಿ ಪ್ರಾಯಶ್ಚಿತ್ತವಾಗಬೇಕಾದುದೂ ಆವಶ್ಯಕವೆಂ ದು ಗುಲ್ಲನ್ನೆಬ್ಬಿಸಿದರು. ಆಗ ಸ್ವಾಮಿಯು ತನ್ನ ನಿಜರೂಪವನ್ನು ಪ್ರಕ ಟಿಸಿ, ನಿಜವಾದ ಮತಧರ್ಮವೆಂಬುದು ಈ ಜಾತಿ ಕುಲಗಳನ್ನು ಮೀರಿದ್ದು ಹೆಂದೂ ತನ್ನನ್ನು ಅನನ್ಯ ಭಕ್ತಿಯಿಂದ ಸೇವಿಸುವವರಲ್ಲಿ ಈ ಹೆಚ್ಚು ಕುಂದುಗಳನ್ನೆಣಿಸಬಾರದೆಂದೂ ಬೋಧಿಸಿದನಂತೆ !

ಮಹಾಭಕ್ತರಾದವರು ಹೇಗೆ ಸರ್ವಕಾಲ ಸರ್ವಾವಸ್ಥೆಗಳಲ್ಲೂ ಭಗ ವಂತನನ್ನೇ ಸಂದರ್ಶಿಸುತ್ತಾ ಹೇಗೆ ಸರ್ವಭೂತ ಹಿತತತ್ಪರರಾಗಿರುತ್ತಾ ರೆಂಬುದನ್ನು ಸ್ಥಾಪಿಸುವುದಕ್ಕಾಗಿ ನಮ್ಮ ಕಥಾನಾಯಕನ ಜೀವಿತದಲ್ಲಿ ಒಂ

ದೆರಡು ಸಂಗತಿಗಳು ಹೇಳಲ್ಪಟ್ಟಿವೆ. ಒಂದಾನೊಂದು ಏಕಾದಶಿಯ ದಿನ, ಪಂಡರಾಪುರ ಕ್ಷೇತ್ರದ ಒಂದು ಬಯಲು ಪ್ರದೇಶದಲ್ಲಿ ಕೆಲಮಂದಿ ಯಾತ್ರಿಕರು ತಮ್ಮ ಆಹಾರಕ್ಕೆಂದು ರೊಟ್ಟಿಗಳನ್ನು ಮಾಡಿಕೊಂಡಿರಲು, ಅಕಸ್ಮಾತ್ತಾಗಿ ಒಂದು ನಾಯಿಯು ಬಂದು ಒಂದು ರೊಟ್ಟಿಯನ್ನು ಕಚ್ಚಿಕೊಂಡು ಓಡಿತಂತೆ! ಒಡನೆ ಆ ಜನಗಳು ಗುಲ್ಲೆಬ್ಬಿಸಿ, ಅದನ್ನು ಅಟ್ಟಿಸಿಕೊಂಡು ಹೋದರು. ಕಲ್ಲಿನ ಏಟಿಗೆ ಹೆದರಿ, ಅದು ಓಡುತ್ತೋಡುತ್ತಾ ಮಾರ್ಗದಲ್ಲಿ ಸಿಕ್ಕಿದ ನಾಮದೇವನ ಮನೆಯನ್ನು ಹೊಕ್ಕಿತು. ನಾಮದೇವನು, ಸರ್ವಭೂತಗಳಲ್ಲೂ ಭಗವಂತನ ಅಂತರ್ಯಾಮಿತ್ವವನ್ನು ದರ್ಶಿಸುವಂತಹ ಆತ್ಮಸಿದ್ಧನಾದುದರಿಂದ, ಹಸಿದು ಹೆದರಿ ತನ್ನ ಮನೆಯನ್ನು ಹೊಕ್ಕ ಆ ನಾಯಿಯನ್ನು ಆದರಿಸಲೋಸುಗ, ತನ್ನ ಮನೆಯಲ್ಲಿದ್ದ ರೊಟ್ಟಿಗೆ ತುಪ್ಪವನ್ನು ಹಚ್ಚಿ ಆ ನಾಯಿಗೆ ಕೊಟ್ಟು, ಬೆನ್ನುತಟ್ಟಿ ಸಮಾಧಾನದಿಂದ ತಿನ್ನೆಂದು ಆದರಿಸಿದನು. ಅದನ್ನು ಕಂಡು ಆ ಜನಗಳೆಲ್ಲರೂ ಪರಮಾಶ್ಚರ್ಯಪಟ್ಟರು. ತನ್ನ ಭಕ್ತರ ದಾರ್ಢ್ಯವನ್ನೂ, ಸರ್ವಭೂತ ದಯಾಪರತ್ವವನ್ನೂ ಪರೀಕ್ಷಿಸಲು ವಿಠ್ಠಲನೇ ಆ ನಾಯಿಯಂತೆ ವೇಷಧಾರಣಮಾಡಿಕೊಂಡು ಬಂದಿದ್ದನೆಂಬುದನ್ನು ತಿಳಿದು ತರುವಾಯ ಆ ಜನಗಳೆಲ್ಲರೂ, ತಮ್ಮ ಅಜ್ಞತೆಗಾಗಿ ವಿಶೇಷ ಪಶ್ಚಾತ್ತಾಪಗೊಂಡರು.

ಮತ್ತೊಂದುವೇಳೆ, ನಾಮದೇವನ ತಾಯಿಗೆ ಏನೋ ದೇಹಾಲಸ್ಯವಾಗಿ, ಆ ಮುದುಕಿಯು ಮಗನನ್ನು ಕುರಿತು ಯಾವುದೋ ಒಂದು ಮೂಲಿಕೆಯನ್ನು ತರಬೇಕೆಂದು ಹೇಳಿದಳಂತೆ! ನಾಮದೇವನು, ಕೈಯಲ್ಲೊಂದು ಮಚ್ಚನ್ನು ತೆಗೆದುಕೊಂಡು ಹೊರಟು, ಆ ಮೂಲಿಕೆಯನ್ನು ಹುಡುಕಿ ಕಂಡುಹಿಡಿದು ಕೈಯಲ್ಲಿದ್ದ ಮಚ್ಚಿನಿಂದ ಕತ್ತರಿಸಲು, ಅದರಿಂದ ಸಾರೋದ್ಧಾರವಾಗಿ ಆ ಸಸ್ಯಸಾರವು ಸ್ರವಿಸತೊಡಗಿತು. ಅದನ್ನು ಕಂಡೊಡನೆಯೇ ನಾಮದೇವನ ಹೃದಯವು ಕರಗಿ ನೀರಾಗಿ ಹೋಯಿತು—'ಅಕ್ಕಟಾ, ಎಂತಹ ಅಕಾರ್ಯ ಮಾಡಿದೆನಲ್ಲಾ, ತನ್ನ ಮಟ್ಟಿಗೆ ಸುಖವಾಗಿ ಬೆಳೆದುಕೊಂಡಿದ್ದ ನಿರುಪದ್ರವಿಯಾದ ಈ ಸಸ್ಯವನ್ನು ಘಾತಿಸಿ ಮಹಾಪಾಪಿಯಾದೆನಲ್ಲಾ! ಇದರಿಂದ ಅದಕ್ಕೆಷ್ಟು ನೋವಾಯಿತೋ'' ಎಂದುಕೊಂಡು, ಒಡನೆ ಆ ಕತ್ತಿಯನ್ನೇ ತನ್ನ ಕಡೆಗೆ ತಿರುಗಿಸಿಕೊಂಡು ತನ್ನ ಕಾಲನ್ನೂ ಕೊಯ್ದು

ಕೊಂಡನು. ತನ್ನ ದೇಹವನ್ನು ಕತ್ತಿಯಿಂದ ಕೊಯ್ದರೆ ತನಗೆ ಹೇಗೆ ಬಾಧೆಯಾಗುವುದೋ, ಹಾಗೆಯೇ ಮಿಕ್ಕ ಪಶುಪಕ್ಷಿ ಮುಂತಾದ ಪ್ರಾಣಿಗಳಿಗೂ, ವೃಕ್ಷಗಳಿಗೂ ಸಸ್ಯಗಳಿಗೂ ಆಗುವುದೆಂದು ತಿಳಿದು ಆ ಸಾಧುವರ್ಯನು, ಮಹದಾತಂಕಯುಕ್ತನಾಗಿ ತನ್ನ ಅಪರಾಧ ಕ್ಷಮಾಪಣೆಗೆಂದು ಪಾಂಡುರಂಗಸ್ವಾಮಿಯಲ್ಲಿ ದೀನವಾಣಿಯಿಂದ ಮೊರೆಯಿಟ್ಟುಕೊಂಡನು.

ನಾಮದೇವನ ಸಮಕಾಲೀನರಾಗಿದ್ದ ಇತರ ಕೆಲವಂದಿ ಸಾಧುಸಂತರ ಚರಿತ್ರೆಯೂ ಮಹೀಪತಿಯಿಂದ ಕೊಡಲ್ಪಟ್ಟಿದೆ. ಜನಿ ಎಂಬೊಬ್ಬ ಭಕ್ತಳು, ವಿಠ್ಠಲನ ನಾಮಸ್ಮರಣಾನಂದದಲ್ಲಿ ತಾಯಿ ತಂದೆಗಳನ್ನು ತ್ಯಜಿಸಿ ಪಂಢರಾಪುರದಲ್ಲೇ ನಿಂತು, ನಾಮದೇವನ ಭಜನೆ–ಸಂಕೀರ್ತನೆಗಳಲ್ಲಿ ಭಾಗವಹಿಸುತ್ತಾ ಇದ್ದಳು. ಈಕೆಯೂ ತುಕಾರಾಮ ನಾಮದೇವ ಮುಂತಾದ ಭಕ್ತರಂತೆಯೇ ವಿಠ್ಠಲನ ಧ್ಯಾನಪರವಾದ ಕವಿತೆಗಳನ್ನು ನುಡಿದಿದ್ದಾಳೆ. ರಾಖಾ ಎಂಬುವನು ಕುಂಬಾರನು. ಇವನೂ ವಿಠ್ಠಲನ ಅಂತರಂಗ ಭಕ್ತರಲ್ಲಿ ಶ್ರೇಷ್ಠನೆಂದು ಹೆಸರುವಾಸಿಯಾದವನು. ಇವನ ಭಕ್ತಿಭಾವಕ್ಕೆ ಪಾಂಡುರಂಗವಿಠ್ಠಲನು ಎಷ್ಟುಮಟ್ಟಿಗೆ ಒಲಿದು ವಶನಾಗಿದ್ದನೆಂಬುದನ್ನು ತಿಳಿಸುವುದಕ್ಕೆ ಒಂದು ಅತಿವಿಚಿತ್ರವಾದ ಕಥೆಯು ಹೇಳಲ್ಪಟ್ಟಿದೆ. ಒಂದು ಸಾರಿ ಅವನು ತನ್ನ ವೃತ್ತಿ ಧರ್ಮವನ್ನನುಸರಿಸಿ ಹಲವು ಮಡಕೆಗಳನ್ನು ಮಾಡಿ ಒಣಗಲಿಕ್ಕೆ ಇಟ್ಟಿದ್ದನಂತೆ! ಅವುಗಳೊಳ್ಳೊಂದರಲ್ಲಿ ಮರಿಹಾಕಿದ್ದ ಒಂದು ಬೆಕ್ಕು ತನ್ನ ಚಿಕ್ಕ ಮರಿಗಳನ್ನು ಇಟ್ಟಿದ್ದಿತಂತೆ! ಈ ಸಂಗತಿಯು ತಿಳಿಯದೆ, ರಾಖಾನು ಭಾವನಾಪರ ಚಿತ್ತವೃತ್ತಿಯಿಂದ ಆ ಗಡಿಗೆಗಳನ್ನೆಲ್ಲ ಕೊಂಡೊಯ್ದು ಆವಿಗೆಯಲ್ಲಿಟ್ಟು ಬೆಂಕಿ ಹತ್ತಿಸಿದನು. ಒಲೆಯು ಚೆನ್ನಾಗಿ ಉರಿಯಹತ್ತಿ ಗಡಿಗೆಗಳೆಲ್ಲವೂ ಬೇಯ ತೊಡಗಿದಾಗ ಆ ತಾಯಿ ಬೆಕ್ಕು ಬಂದು ಅರಚಿಕೊಳ್ಳಲಾರಂಭಿಸಿತು. ಆಗ ರಾಖಾನಿಗೆ ಬೆಕ್ಕು ಗಡಿಗೆಯಲ್ಲಿ ಮರಿಗಳನ್ನಿಟ್ಟಿದ್ದ ಸಂಗತಿಯು ಜ್ಞಾಪಕಕ್ಕೆ ಬರಲು, ಮಹಾ ಪಾಪಭೀತನೂ ದಯಾಮಯ ಹೃದಯನೂ ಆದ ಭಕ್ತನು, ಉಪಾಯ ತೋರದೆ–'ಅಕ್ಕಟಾ, ಆ ನಿರಪರಾಧಿ ಪ್ರಾಣಿಗಳನ್ನು ಜೀವದೊಂದಿಗೆ ದಹಿಸುವ ಎಂತಹ ಭಯಂಕರ ಕೃತ್ಯವನ್ನು ಆಚರಿಸಿದೆನಲ್ಲಾ !

ನನಗೆ ಎಂತಹ ನರಕಯಾತನೆಯುಂಟಾಗುವುದೋ ತಿಳಿಯೆನಲ್ಲಾ ! ವಿಠ್ಠಲ ಸ್ವಾಮಿ, ಪಾಮರನಾದ ನಾನು ಅರಿಯದೆ ಮಾಡಿದ ಈ ಮಹಾಪರಾಧವನ್ನು ಕ್ಷಮಾಪಣೆಮಾಡು. ಆ ಚಿಕ್ಕ ಮರಿಗಳು ಮಾತ್ರ ಪ್ರಾಣದೊಂದಿಗೆ ರಕ್ಷಿಸಲ್ಪಟ್ಟವಾದರೆ ನಾನು ನನ್ನದೆಂದಿರುವ ಸಮಸ್ತವನ್ನೂ ದಾನಮಾಡಿ ನನ್ನ ಜೀವಮಾನವನ್ನೆಲ್ಲ ನಿನ್ನ ಸೇವೆಯಲ್ಲೇ ಕಳೆಯುವೆನು.' ಎಂದು ಬೇಡಿಕೊಂಡನು. ಭಗವನ್ಮಹಿಮೆಯು ಪರಮಾಶ್ಚರ್ಯಕರ ವೃತ್ತಾಂತವನ್ನು ಪಾಮರ ವಾಣಿಯಿಂದ ಏನೆಂದು ವರ್ಣಿಸುವುದು ? ಒಲೆಯು ಉರಿಯು ಆರಿದ ತರುವಾಯ ಅದನ್ನು ತೆಗೆದು ನೋಡಲು, ಆ ಮರಿಗಳು ಸುರಕ್ಷಿತವಾಗಿದ್ದುದನ್ನು ಕಂಡು ರಾಜನು ಪರಮ ಹರ್ಷಿತನಾಗಿ, ದೇವ ದೇವನಾದ ವಿಠ್ಠಲಸ್ವಾಮಿಯನ್ನು ಮನಸಾರೆ ಹೊಗಳಿದನು. ಮತ್ತು, ತಾನೂ ತನ್ನ ಹೆಂಡತಿಯೂ ಉಟ್ಟ ಬಟ್ಟೆಗಳಮೇಲೆ ಮನೆಯಿಂದ ಹೊರಕ್ಕೆ ಬಂದು ತಮ್ಮದೆಂದಿದ್ದ ಸಮಸ್ತ ಪ್ರಾಪಂಚಿಕ ವಸ್ತುಗಳನ್ನೂ ಮನೆ ಬಾಗಿಲು ವಸ್ತ್ರ ಒಡವೆಗಳನ್ನೂ ದೀನಾನಾಥರಿಗೆ ದಾನವಾಗಿ ಕೊಟ್ಟು ತಾವು ಭಿಕ್ಷೆ ಬೇಡದೆ ಕಾಡಿನಲ್ಲಿ ಬಿದ್ದಿದ್ದ ಕಟ್ಟಿಗೆಗಳನ್ನಾರಿಸಿ ತಂದು, ಮಾರಿ ಬಂದ ದುಡ್ಡಿನಿಂದ ಜೀವನಯಾತ್ರೆಯನ್ನು ಸಾಗಿಸುತ್ತಿದ್ದರು. ಅವರ ವೈರಾಗ್ಯವೂ ನಿಸ್ಪೃಹತ್ವವೂ ಎಷ್ಟುಮಟ್ಟಿಗೆ ಅಭಿವೃದ್ಧಿಗೊಂಡಿದ್ದುವೆಂದರೆ, ನಾಲ್ಕು ಕಟ್ಟಿಗೆಗಳು ಒಂದೆಡೆ ಕಲೆತು ಬಿದ್ದಿದ್ದರೆ, ಅದು ಯಾರೋ ಸೇರಿಸಿಟ್ಟುದಾಗಿರಬಹುದೆಂದೂ ಅದನ್ನು ತೆಗೆದುಕೊಂಡರೆ ಪರಸ್ವಾಪಹಾರಮಾಡಿದಂತಾಗಬಹುದೆಂದೂ ರಾಜನೂ ಅವನ ಹೆಂಡತಿಯೂ ಬೆದರಿ, ಒಂದೊಂದೇ ಕಟ್ಟಿಗೆಗಳು ಬಿದ್ದಿದ್ದುವನ್ನೇ ಆರಿಸುತ್ತಿದ್ದರಂತೆ !

ಭಕ್ತಾಭೀಷ್ಟಪ್ರದನಾದ ವಿಠ್ಠಲಸ್ವಾಮಿಯು ಹೀಗೆ ಸರ್ವ ಸುಲಭನಾಗಿ ತನ್ನನ್ನು ಭಕ್ತಿ ಶ್ರದ್ಧೆಗಳಿಂದ ಸೇವಿಸಿದ ಸಮಸ್ತರಿಗೂ ಭುಕ್ತಿ ಮುಕ್ತಿಪ್ರದನಾಗಿ, ದೀನಜನ ಶರಣ್ಯನಾಗಿ ಲೋಕೋದ್ಧಾರಕ್ಕಾಗಿ ನೆಲೆಸಿರುವನು.



# ಉ ಪ ಸ ಂ ಹಾ ರ

ನಾಮದೇವನು, ಆಡಂಬರ ರಹಿತವಾದ ಜೀವನದಿಂದಲೂ, ಆಂತರಂಗಿಕವೂ ಶ್ರದ್ಧಾಪೂರ್ವಕವೂ ಆದ ಭಕ್ತಿಯಿಂದಲೂ ಭಗವಂತನಾದ ಶ್ರೀ ವಿಠ್ಠಲಸ್ವಾಮಿಯನ್ನು ಒಲಿಸಿಕೊಂಡುದು ಮಾತ್ರವಲ್ಲ, ತನ್ನ ಜೀವಿತವನ್ನೆಲ್ಲ ಭಗವತ್ಕೀರ್ತನೆಗಳನ್ನು ರಚಿಸುವುದರಲ್ಲೂ, ಭಗವದ್ಭಕ್ತಿ ಭಾಗ್ಯವನ್ನು ಗಳಿಸಿಕೊಳ್ಳುವಂತೆ ಜನಗಳಿಗೆ ಬೋಧಿಸುವುದರಲ್ಲೂ ವ್ಯಯಗೊಳಿಸಿದನು. ಈತನು ರಚಿಸಿದುವುಗಳೆಂಬ ಮೂರು ನಾಲ್ಕು ಸಹಸ್ರ ಕೃತಿಗಳು ಭಕ್ತರ ಮನರಂಜನೆಯನ್ನುಂಟುಮಾಡುತ್ತಾ, ಭಗವದ್ಭಕ್ತಿಯನ್ನು ಹೆಚ್ಚಿಸಲು ಸಹಕಾರಿಗಳಾಗಿ ಈಗಲೂ ದೊರೆಯುತ್ತಿವೆ. ಈ ಕೃತಿಗಳಲ್ಲೆಲ್ಲ, ಸಂಸಾರದ ಬೇಗೆಯಿಂದ ನೊಂದ ಮಾನವ ಹೃದಯವು ಶಾಂತಿದಾಯಕವಾದ ಭಗವತ್ಸಾನ್ನಿಧ್ಯವನ್ನು ಪಡೆವುದಕ್ಕಾಗಿ ದೀನವಾಣಿಯಿಂದ ಮಾಡಿಕೊಂಡ ಪ್ರಾರ್ಥನೆಯೇ-ಆರ್ತನಾದವೇ ಕಂಡುಬರುತ್ತದೆ. ಅವುಗಳ ಪಠನೆಯಿಂದ ಎಂತಹ ಶಿಲಾಹೃದಯವಾದರೂ ಕರಗಿ ಅಲ್ಲಿ ಭಗವದ್ಭಕ್ತಿಯ ಅಮೃತ ಪ್ರವಾಹವು ಪ್ರವಹಿಸುವಂತೆ ಮಾಡಿ ಮಾನವ ವರ್ಗವನ್ನು ಮೋಕ್ಷ ಮಾರ್ಗಕ್ಕೆ ಕೊಂಡೊಯ್ಯುವಲ್ಲಿ ಸಹಕಾರಿಯಾಗಲು ಸಂದೇಹವಿಲ್ಲ. ಭವಸಾಗರದ ಬಡಬಾಗ್ನಿಯಲ್ಲಿ ಬೆಂದು ಕಾತರಗೊಂಡ ಮಾನವವರ್ಗಕ್ಕೆ ಇಂತಹ ಅಮೃತದ ಒರತೆಯನ್ನೇ ಕಲ್ಪಿಸಿಟ್ಟ ಶ್ರೀ ನಾಮದೇವನು ಎಪ್ಪತ್ತು ವರ್ಷ ವಯಸ್ಸಾಗುವವರೆಗೆ ಜೀವಿಸಿ ಕೊನೆಗೊಂದುದಿನ ವಿಠ್ಠಲನ ಆಲಯದ ಮಹಾದ್ವಾರದ ಬಳಿಯಲ್ಲೇ ಅಸುವನ್ನು ನೀಗಿ ಸದ್ಗತಿಗೆ ಸಂದನು. ಪಂಡರಾಪುರದ ಪಾಂಡುರಂಗಸ್ವಾಮಿಯ ಆಲಯದ ಮಹಾದ್ವಾರಕ್ಕೆ ಏರುವ ಮೆಟ್ಟಿಲುಗಳಲ್ಲಿ ಮೊದಲನೆಯದು ನಾಮದೇವನಿಗೆ ಅಂಕಿತ ಮಾಡಲ್ಪಟ್ಟಿತು. ಜಗದ ಜೀವಿಗಳನ್ನು ಭಗವತ್ಸಾನ್ನಿಧ್ಯಕ್ಕೆ ಕೊಂಡೊಯ್ಯುವ ಮಾರ್ಗವನ್ನು ರಚಿಸುವುದಕ್ಕಾಗಿಯೇ ತನ್ನ ಜೀವಮಾನವನ್ನು ವ್ಯಯಮಾಡಿದ ಆ ಮಹಾಭಕ್ತನಿಗೆ ಇದಕ್ಕಿಂತಲೂ ಶ್ರೇಷ್ಠವಾದ ಅಂಕಿತವು ನುತ್ತಿನ್ನಾವುದು ?

ಈ ಭಕ್ತಶ್ರೇಷ್ಠನ ಜೀವಿತವು ಸಕಲ ಸಜ್ಜನರಿಗೂ ಮುಕ್ತಿ ಮಾರ್ಗ ದರ್ಶಿಯಾಗಿ ಸಕಲರಲ್ಲೂ ಶ್ರದ್ಧಾ ಭಕ್ತಿ ವೈರಾಗ್ಯಭಾಗ್ಯಾದಿಗಳನ್ನು ಅಭಿವೃದ್ಧಿಗೊಳಿಸಲು ಸಹಕಾರಿಯಾಗಿರಲಿ.

ತಥಾಸ್ತು.



ಶ್ರೀರಾಮಸಹಾಯಂ.

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ
## (ಸಚಿತ್ರ ಮಾಸ ಪುಸ್ತಕಾವಳಿ)

**ಮುನ್ನುಡಿ** :—

ಚಾಲುಕ್ಯವಂಶ ವಿಭೂಷಿತನಾದ ಕರ್ಣಾಟಕ ಸಾರ್ವಭೌಮ ವಿಕ್ರಮಾದಿತ್ಯನ ನಾಮಧೇಯವು ದೇಶಚರಿತ್ರೆಯಲ್ಲಿ ಸುವರ್ಣಾಕ್ಷರಗಳಿಂದ ಬರೆದಿಡಲ್ಪಡಲು ಅರ್ಹವಾದುದು. ಕರ್ಣಾಟಕ ಐತಿಹಾಸಿಕ ಆಕಾಶದಲ್ಲಿ ನಕ್ಷತ್ರಗಳಂತೆ ದೇದೀಪ್ಯಮಾನರಾಗಿ ಹೊಳೆಯುತ್ತಿರುವ ಹಲವು ಮಂದಿ ಸುಪ್ರಸಿದ್ಧ ರಾಜರಿರಬಹುದು ; ಆದರೆ ನಮ್ಮ ಪ್ರಕೃತ ಕಥಾನಾಯಕನಾದ ವಿಕ್ರಮಾಂಕ ಸಾರ್ವಭೌಮನೆಂಬ ಪೂರ್ಣಚಂದ್ರೋದಯದಿಂದ ಮಿಕ್ಕ ನಕ್ಷತ್ರಗಳೆಲ್ಲವೂ ನಿಸ್ತೇಜ ಹೊಂದಿದುವೆಂದರೆ ಅದು ಅತಿಶಯೋಕ್ತಿಯಲ್ಲ. ಹನ್ನೊಂದನೆಯ ಶತಮಾನದಲ್ಲಿ, ಭಾರತದೇಶದಲ್ಲಿ ಶೂರರೆನ್ನಿಸಿದ್ದ ನರಪತಿಗಳಲ್ಲೆಲ್ಲ ಅಗ್ರೇಸರನೆಂದೆನ್ನಿಸಿ, ಅಪ್ರತಿಮ ಪ್ರೌಢಿಮೆಯಿಂದ ಅರ್ಧ ಶತಮಾನಕಾಲ ರಾಜ್ಯವಾಳಿ, ದೇಶದಲ್ಲಿ ಪುರಾಣ ಪ್ರಸಿದ್ಧವಾದ 'ರಾಮರಾಜ್ಯ'ವೋ ಎಂಬಷ್ಟುಮಟ್ಟಿನ ಶಾಂತಿ ಸುಖ ಸಮಾಧಾನಗಳನ್ನು ನೆಲೆಗೊಳಿಸಿ ಆಧಿಪತ್ಯ ಮಾಡುತ್ತಾ, ವಿಕ್ರಮಾದಿತ್ಯನು ಧರ್ಮ ಭೀಮಾರ್ಜುನರ ಏಕಾವತಾರವೋ ಎಂಬಂತೆ ಪ್ರಕಾಶಿಸಿದನು. ವಿಕ್ರಮಾಂಕನ ಕಾಲದಲ್ಲಿ ದೇಶದಲ್ಲಿ ಶಾಂತಿಯು ಎಷ್ಟುಮಟ್ಟಿಗೆ ನೆಲೆಗೊಂಡಿದ್ದಿತೆಂಬುದನ್ನು ಹೇಳಿದರೆ ಅದು ಕಟ್ಟುಕಥೆಯೆಂದು ಭಾಸವಾದೀತು ! ಕರ್ಣಾಟಕ ದೇಶವು ಪ್ರಾಚೀನಕಾಲದಲ್ಲಿ ಗಳಿಸಿ ಅನುಭವಿಸಿದ ವೈಭವವನ್ನು ಅಮೃತಮಯವಾಣಿಯಿಂದ ವರ್ಣಿಸಿರುವ 'ಕರ್ಣಾಟಕ ಗತವೈಭವ' ಎಂಬ ಗ್ರಂಥರತ್ನವು ಈ ವಿಚಾರವನ್ನು ಕುರಿತು ಹೀಗೆಂದು ಹೇಳುತ್ತಿದೆ.—'-ಜನರು ರಾತ್ರಿಯಲ್ಲಿ ತಮ್ಮ ಮನೆಯ ಬಾಗಿಲುಗಳನ್ನು ಕೂಡ ಮುಚ್ಚುತ್ತಿರಲಿಲ್ಲ ; ಅವರಿಗೆ ಕಳ್ಳರ ಭೀತಿಯೇ ಇರಲಿಲ್ಲ. ಕಳ್ಳರಿಗೆ ಬದಲು ಚಂದ್ರಕಿರಣಗಳು ಅವರ

ಗೃಹಗಳನ್ನು ಪ್ರವೇಶಿಸುತ್ತಿದ್ದುವು. ಈಗ ರಾಮೇಶ್ವರದಿಂದ ಕಾಶಿಯ ವರೆಗೆ ಕೋಲಿಗೆ ಬಂಗಾರ ತೂಗಹಾಕಿಕೊಂಡು ಹೋದರೂ ಅಂಜಿಕೆಯಿಲ್ಲ ವೆಂದು ಜನರು ನುಡಿಯುವಂತೆ, ಆಗ ಚಾಲುಕ್ಯ ವಿಕ್ರಮನ ಕಾಲದಲ್ಲೂ ಶಾಂತತೆಯು ಪೂರ್ಣವಾಗಿ ನೆಲೆಗೊಂಡಿತ್ತು.' ಇದು ಅತಿಶಯೋಕ್ತಿಯೆಂದು ಭಾವಿಸಲಾಗದು. ವಿಕ್ರಮಾಂಕನ ಕಾಲದಲ್ಲಿ ಸುಪ್ರಸಿದ್ಧ ಕವಿಯೆನ್ನಿಸಿದ್ದ ಬಿಲ್ಹಣನು 'ವಿಕ್ರಮಾಂಕದೇವ ಚರಿತ' ವೆಂಬೊಂದು ಸ್ವತಂತ್ರ ಗ್ರಂಥ ವನ್ನೇ ರಚನೆಮಾಡಿ, ಅದರಲ್ಲಿ ಈ ಸಂಗತಿಯನ್ನು ಮುಕ್ತಹಸ್ತನಾಗಿ ವರ್ಣಿಸಿರುತ್ತಾನೆ. ಅದೇ ಗ್ರಂಥದಲ್ಲೇ ನಮ್ಮ ಕಥಾನಾಯಕನ ರಾಜ ಧಾನಿಯಾದ ಕಲ್ಯಾಣನಗರದ ಶ್ರೇಷ್ಠತೆಯೂ ವರ್ಣಿತವಾಗಿದೆ. ಅವನ್ನೂ ವಾಚಕ ಮಹಾಶಯರು ಪರಾಂಬರಿಸಲಿ:—

> '' ನಾಸೀದಸ್ತಿ ಭವಿಷ್ಯತಿ ಕ್ಷಿತಿತಲೇ ಕಲ್ಯಾಣ ಕಲ್ಪಂಪುರಂ
> ನೋದೃಷ್ಟಃ ಶ್ರುತಏವವಾ ಕ್ಷಿತಿಪತಿಃ ಶ್ರೀ ವಿಕ್ರಮಾರ್ಕೋಪಮಃ ''
> .... .... .... .... .... .... ....

ಎಂದರೆ ಪೃಥ್ವಿಯಮೇಲೆ ಕಲ್ಯಾಣಪುರಿಯಂಥ ಪಟ್ಟಣವು ಹಿಂದೆ ಇರ ಲಿಲ್ಲ, ಈಗ ಯಿಲ್ಲ; ಮುಂದೆಯೂ ಹುಟ್ಟುವುದಿಲ್ಲ. ವಿಕ್ರಮಾರ್ಕನಿಗೆ ಸಮಾನನಾದ ಒಬ್ಬ ನರಪತಿಯನ್ನೂ ನೋಡಿಯೂ ಕೇಳಿಯೂ ಇಲ್ಲ..... '

ಇಂತಹ ವಿಚಾರಗಳನ್ನೆಲ್ಲ ನಂಬಿ, ತಮ್ಮ ಮಾತೃಭೂಮಿಯ ಗತವೈ ಭವಕ್ಕಾಗಿ ಹೆಮ್ಮೆಗೊಂಡು, ಅದನ್ನು ಮುಂದೂ ಅಂತಹ ಅಂತಸ್ತಿಗೆ ಏರಿಸ ಬೇಕೆಂದು ಇಚ್ಛಿಸುವಷ್ಟು ಸ್ವಾಭಿಮಾನವೂ ಧೈರ್ಯ ಸಾಹಸಗಳೂ ಇಂದು ಕನ್ನಡಿಗರಲ್ಲಿ ಉಳಿದಿವೆಯೇ ಎಂದು ಸಂದೇಹವಾಗುತ್ತದೆ. ಪಾಶ್ಚಾತ್ಯವಿದ್ಯಾ ಮತ್ತು ಸಂಸ್ಕೃತಿ ಇವುಗಳ ಸಂಸರ್ಗದೋಷದಿಂದ ಅವರಲ್ಲಿ ಮನೆಮಾಡಿ ಕೊಂಡಿರುವ ಭಾವದಾಸ್ಯವು ಅವರ ಸ್ವಾಭಿಮಾನ, ಆತ್ಮಾವಲಂಬನೆ ಮುಂ ತಾದ ಪೌರುಷ ಪ್ರದರ್ಶಕ ಗುಣಗಳನ್ನೆಲ್ಲ ಉಡುಗಿಸಿಬಿಟ್ಟಿದೆ. ದಾಸ್ಯ ಮನೋವೃತ್ತಿಯಿಂದ ಕೂಡಿರುವ ಅವರು, ಕೇವಲ ಪರಕೀಯರು ನಡೆಸಿ ದಂತೆ ನಡೆದು, ನುಡಿಸಿವಂತೆ ನುಡಿದು, ಬಹುದಿನಗಳಿಂದಲೂ ಈ ಬಗೆಯ

ಅಭ್ಯಾಸದಲ್ಲೇ ಬೆಳೆದು ಬಂದುದರಿಂದ ಈಗ ಸತ್ಯಾಸತ್ಯತೆಗಳನ್ನು ವಿಮರ್ಶಿಸುವ ಸಾಮರ್ಥ್ಯವನ್ನು ಕಳೆದುಕೊಂಡಿರುವರು. ತಮ್ಮ ಹಿರಿಯರೂ ಪೂರ್ವ ಕವಿಗಳೂ ಹಿತಚಿಂತಕರೂ ಹೇಳಿದ ವಿಷಯಗಳನ್ನು ನಂಬುವಷ್ಟು ಸಹನೆಯೂ ಅವರಿಗಿಲ್ಲ.-ಅಲ್ಲ, ಪರದೇಶೀಯ ಐತಿಹಾಸಿಕರು ವರ್ಣಿಸಿರುವ ತಮ್ಮ ಜನ್ಮಭೂಮಿಯ ಪ್ರಾಚೀನ ವೈಭವಪೂರ್ಣಸ್ಥಿತಿಯು ನಿಜವೆಂದು ನಂಬಲೂ ಸಹ ಅವರು ಹಿಂದೆ ಮುಂದೆ ನೋಡುವಂತಹ ಸ್ಥಿತಿಯು ಪ್ರಾಪ್ತಿಸಿದೆ. ಇದಕ್ಕೆ ಕಾರಣವು ಹೊರಗಿನಿಂದ ಉಂಟಾದುದಲ್ಲ! ತಾವಾರು, ತಮ್ಮ ದೇಶವಾವುದು, ಅದರ ಪೂರ್ವಚರಿತ್ರೆಯೇನು, ಅದನ್ನು ಆಳಿದವರಾರು, ಅವರು ಮಾಡಿದ ಮಹತ್ಕಾರ್ಯಗಳೆಂಥವು ಎಂಬ ಮುಂತಾದ ವಿಚಾರಗಳಲ್ಲಿ ಅವರಿಗಿರುವ ಅಜ್ಞತೆಯೇ ಮಾತೃದೇಶ ವಿಚಾರದಲ್ಲಿ ಈ ಬಗೆಯ ಉದಾಶೀನ ಭಾವವುಂಟಾಗಲು ಪ್ರಬಲಕಾರಣವಾಗಿದೆ. ಈ ಉದಾಶೀನತೆಯು ಹೋಗಿ ಆ ಸ್ಥಾನದಲ್ಲಿ ಸ್ವಾಭಿಮಾನ-ಸ್ವಾತಂತ್ರ್ಯಾಭಿಲಾಷೆಗಳು ಉಂಟಾಗಬೇಕಾಗಿದ್ದರೆ, ತಮ್ಮ ದೇಶ ಮತ್ತು ಭಾಷೆಗಳ ಗತವೈಭವವನ್ನು ಕುರಿತ ನಿಶ್ಚಯಜ್ಞಾನವುಂಟಾಗತಕ್ಕುದು ಪರಮಾವಶ್ಯಕ. ಕನ್ನಡಿಗರು, ತಾವು ತಮ್ಮ ಪೂರ್ವಜರ ಉದರಸಂಭೂತರೆಂಬ ಹೆಸರನ್ನು ಸಾರ್ಥಕಪಡಿಸಿಕೊಳ್ಳಬೇಕೆಂದು ಇಚ್ಛಿಸಿದರೆ,—ತಪ್ಪಿಬಂದಿರುವ ಈ ಮಾರ್ಗದಿಂದಲೇ ಹಿಂದಕ್ಕೆ ಹೋಗಿ ಪ್ರಯತ್ನಿಸಬೇಕು. ಪ್ರಾರಂಭಕ್ಕೆ ಮಾತೃಭಾಷಾ ಪುಸ್ತಕಗಳ ವಾಚನದಲ್ಲಿ ಅಭಿರುಚಿಯನ್ನು ಗಳಿಸಿಕೊಳ್ಳಬೇಕು. ತರುವಾಯ ಮಾತೃಭಾಷೆ ಮಾತೃಭೂಮಿ ಮೊದಲಾದುವುಗಳ ಪ್ರಾಚೀನ ವೈಭವ ಸಂಪನ್ನತೆಯನ್ನು ವರ್ಣಿಸುವ ಗ್ರಂಥಗಳ ಪಾರಾಯಣಮಾಡಿ, ತಮ್ಮ ಹಿರಿಯರಿದ್ದ ಮಹೌನ್ನತ್ಯಸ್ಥಾನದ-ಬಂಗಾರದ ಹೊಗೆಯನ್ನು ಹಾಯಿಸುತ್ತ ಸಂಪತ್ತು ಸೌಭಾಗ್ಯಗಳಲ್ಲಿ ಮೆರೆಯುತ್ತಿದ್ದ ತಮ್ಮ ದೇಶದ, ಪ್ರಾಚೀನ ವೈಭವ ಸ್ಥಿತಿಯ ಪರಿಚಯಮಾಡಿಕೊಳ್ಳಬೇಕು. ಅವುಗಳ ವಿಷಯದಲ್ಲಿ ಸ್ವಾಭಿಮಾನವನ್ನು ವಹಿಸಬೇಕು. ಅವುಗಳ ಅವನತಸ್ಥಿತಿಗಾಗಿ ಮರುಗಬೇಕು. ಮಾತೃಭಾಷೆ-ಮಾತೃಭೂಮಿ ಇವುಗಳ ಪುನರುತ್ಥಾನಕ್ಕಾಗಿ ತಮ್ಮ ತನುಮನ ಧನಗಳನ್ನು ಸಮರ್ಪಿಸಿ ಯೋಗ್ಯತಾನುಸಾರ ದುಡಿಯಲು ಕೃತನಿಶ್ಚಿತರಾಗಬೇಕು. ಸಾರ್ಥಕಜೀವಿಗಳೆನ್ನಿಸಬೇಕು.

ಸುಬೋಧ ಕುಸುಮಾಂಜಲಿ ಗ್ರಂಥಮಾಲೆಯು, ಮಹನೀಯ ವ್ಯಕ್ತಿಗಳ ಜೀವನಚರಿತ್ರೆಗಳ ದ್ವಾರಾ ಕರ್ಣಾಟಕದೇಶದ ಮತ್ತು ಭಾರತದೇಶದ ಗತ ವೈಭವವನ್ನು ವರ್ಣಿಸಿ ಈ ಬಗೆಯ ಚಿಕ್ಕಚಿಕ್ಕ ಪುಸ್ತಕಗಳ ರೂಪದಲ್ಲಿ ಕರ್ಣಾಟಕ ದೇಶದ ಬಾಲಕ ಬಾಲಿಕೆಯರಿಗೆ ಒದಗಿಸಿಕೊಟ್ಟು ಅವರಲ್ಲಿ ಸ್ವದೇಶ-ಸ್ವಭಾಷೆಗಳ ವಿಷಯದಲ್ಲಿ ಅಭಿಮಾನವನ್ನು ಉಂಟುಮಾಡಲು ಪ್ರಯತ್ನಿಸುತ್ತಿದೆ. ಮಹನೀಯರಾದ ಕರ್ಣಾಟಕ ದೇಶಬಾಂಧವರು, ಗ್ರಂಥಮಾಲೆಯು ಈ ಸೇವೆಯನ್ನು ಮನ್ನಿಸಿ, ಸ್ವಹಸ್ತ ಪರಹಸ್ತ ಪ್ರೋತ್ಸಾಹಿಸಿ ಅದರ ಅಭಿವೃದ್ಧಿಗೆ ಸಹಾಯಕರಾಗಬೇಕೆಂದು ಪ್ರಾರ್ಥಿಸುತ್ತೇವೆ.

ಬೆಂಗಳೂರು<br>
ತಾ|| ೧೩-೪-೧೯೩೧

ಇತಿ ಸುಜನವಿಧೇಯ,

**ಯಂ. ರಾಮರಾವ್.**

ಸುಬೋಧ ಮುದ್ರಣಾಲಯ, ಬೆಂಗಳೂರು ನಗರ.

ಶ್ರೀರಾಮಸಹಾಯಂ

ಕರ್ಣಾಟಕ ವೀರಮಣಿ

# ಚಕ್ರೇಶ್ವರ ಚಾಲುಕ್ಯ ವಿಕ್ರಮ

ಅಧ್ಯಾಯ ೧. 'ಸಂಚತ್ಪೂರ್ವಕಥಾನುವಾದ'

ನಮ್ಮ ಮಾತೃಭೂಮಿ ಭಾರತ ದೇಶಕ್ಕೆ ವಳಿತವಾದ ಪ್ರಬಲರಾಷ್ಟ್ರಗಳಲ್ಲಿ ಕರ್ಣಾಟಕವೂ ಒಂದೆಂಬುದೂ, ಅದನ್ನು ಪೂರ್ವದಿಂದಲೂ, ಪ್ರೌಢಪ್ರತಾಪಿಗಳೆನ್ನಿಸಿದ ಹಲವುಮಂದಿ ರಾಜವರೇಣ್ಯರು ಪಾಲಿಸಿಕೊಂಡು ಬಂದರೆಂಬುದೂ ನಿರ್ವಿವಾದಾಂಶವು. ಹಾಗೆ ಇತಿಹಾಸ ಪ್ರಸಿದ್ಧರಾದ ಧರಾರಮಣರಲ್ಲಿ ಕದಂಬರು, ಗಂಗರಸರು, ಚಾಲುಕ್ಯರು, ರಾಷ್ಟ್ರಕೂಟರು, ಕಲಚೂರ್ಯರು,-ಯಾದವರು,-ಹೊಯ್ಸಳರು, ವಿಜಯನಗರದ ಅರಸರು ಇವರೇ ಮುಖ್ಯರಾದವರು. ಈ ಒಂದೊಂದು ವಂಶದಲ್ಲೂ ಹೆಸರಾದ ಅನೇಕಮಂದಿ ರಾಜರು ತಮ್ಮ ಆಡಳಿತಕ್ಕೆ ಒಳಪಟ್ಟಷ್ಟು ನಾಡಿನಲ್ಲಿ ಸತ್ಯ ಧರ್ಮ ನ್ಯಾಯಮಾರ್ಗಗಳಿಗೆ ಕುಂದಿಲ್ಲದಂತೆ ರಾಜ್ಯಭಾರ ಮಾಡಿ ಕೀರ್ತಿಶೇಷರಾದರು. ಅವರಲ್ಲಿ ಕೆಲವರಂತೂ, ತಮ್ಮ ವಿಕ್ರಮ, ವೈಭವ, ವಿದ್ವತ್ತು, ಸಂಪತ್ತು, ರಾಜ್ಯವಿಸ್ತಾರ, ಮುಂತಾದುವುಗಳಿಂದ ಆದ್ಯಂತ ಭಾರತದೇಶದಲ್ಲೆಲ್ಲ ಅಪ್ರತಿಮರೆನ್ನಿಸಿಕೊಂಡು, ದೇಶಾಂತರ ಖಂಡಾಂತರಗಳವರೆಗೂ ಪ್ರಸಿದ್ಧಿಯನ್ನು ಪಡೆದು, ಜಗತ್ತಿನ ಪ್ರಶಂಸೆಗೆ ಪಾತ್ರರಾದವರು. 'ನಮ್ಮ ಕರ್ಣಾಟಕವೆಂದರೆ ಎಲ್ಲೋ ಒಂದು ಕ್ಷುದ್ರನಾಡು; ಕನ್ನಡಿಗರೆಂದರೆ ಎಲ್ಲೋ ಇಂದು-ನಿನ್ನೆಯವರು; ಅವರ ಹಿರಿಯರು-ಅನಾಮಧೇಯರು' ಎಂದು ಇಂದಿನ ಕನ್ನಡಿಗರು ಹತಾಶರಾಗಲು ಯಾವ ಕಾರಣವೂ ಇಲ್ಲ. ಅವರು, ತಮ್ಮ ಪೂರ್ವಿಕರ ವೈಭವ ಕೀರ್ತಿಸಂಪನ್ನತೆಗಳಿಗಾಗಿ ಹೆಮ್ಮೆಗೊಂಡು,—'ಜಗದ ಜನಾಂಗಗಳಲ್ಲಿ ತಾವು ಯಾರಿಗೂ ಕಡಮೆ

ಯಾದವರಲ್ಲ;-ಎಂದೂ ಯಾರಿಗೂ ಕೀಳೆನ್ನಿಸಿ ಅಡಿಯಾಳುಗಳಾಗಿ ಜೀವಿಸಿದ್ದವರಲ್ಲ' ಎಂದು ಧೈರ್ಯದಿಂದ ತಲೆಯೆತ್ತಿಕೊಂಡು—ಎದೆಯುಬ್ಬಿಸಿಕೊಂಡು ನಡೆಯಲು ಸಕಲ ಸಲಕರಣೆಗಳೂ, ಅವರ ದೇಶಚರಿತ್ರೆಯಲ್ಲೂ ಭಾಷಾ ಭಾಂಡಾರದಲ್ಲೂ ತುಂಬಿ ತುಳುಕುತ್ತಿವೆ. ಕರ್ಣಾಟಕ ತರುಣರೂ ತರುಣಿಯರೂ-ಬಾಲಕರೂ ಬಾಲಿಕೆಯರೂ, ಪರಕೀಯ ಸ್ವಾರ್ಥಸಾಧಕರ ಮಾತುಗಳಿಗೆ ಕಿವಿಗೊಡುವುದನ್ನು ಮಾತ್ರ ಬಿಟ್ಟು, 'ತಾವಾರು, ತಮ್ಮ ದೇಶವೆಂಥದು, ಅದರ ಪೂರ್ವ ಚರಿತ್ರೆಯೇನು?' ಎಂಬ ಮುಂತಾದ ವಿಚಾರಗಳನ್ನು ತಿಳಿದುಕೊಳ್ಳಲೆತ್ನಿಸಿದರೆ, ಅವರಲ್ಲಿ ಸ್ವಾಭಿಮಾನವೂ ಧೈರ್ಯಸಾಹಸಗಳೂ ತಪ್ಪದೆ ಉಂಟಾಗುವುವು. ಇದು ಸತ್ಯವು.

ಮೇಲೆ ಹೇಳಿದ ಕರ್ಣಾಟಕದ ರಾಜವಂಶಗಳಲ್ಲಿ*ಚಾಲುಕ್ಯರ ವಂಶವು ಬಹು ಪ್ರಸಿದ್ಧವಾದುದು. ಜಗದ್ವಿಖ್ಯಾತವಾದುದು. ಆ ವಂಶದ ಇಬ್ಬರು ರಾಜವರೇಣ್ಯರು ಚಕ್ರೇಶ್ವರರೆಂದು ಹೊಗಳಿಸಿಕೊಂಡು ತಮ್ಮ ವಂಶಚರಿತ್ರೆಯನ್ನು ಅಜರಾಮರವೆನ್ನಿಸಿದರು. ಬಾದಾಮಿಯಲ್ಲಿ ರಾಜ್ಯವಾಳಿದ ಎರಡನೇ ಪುಲಿಕೇಶಿ, ಕಲ್ಯಾಣದಲ್ಲಿ ರಾಜ್ಯವಾಳಿದ ಚಾಲುಕ್ಯ ವಿಕ್ರಮಾಂಕ— ಈ ಇಬ್ಬರು ಕರ್ಣಾಟಕ ಸಾರ್ವಭೌಮರ ಚರಿತ್ರೆಯಿಂದ ಚಾಲುಕ್ಯವಂಶ ಮಾತ್ರವಲ್ಲ— ಇಡೀ ಕರ್ಣಾಟಕ ದೇಶವೇ ಅಮರವೆನ್ನಿಸಿದೆ. ಇವರಲ್ಲಿ ಪುಲಿಕೇಶಿಯು ಏಳನೆಯ ಶತಮಾನದ ಮಧ್ಯಕಾಲದವರೆಗೂ ರಾಜ್ಯವಾಳಿ ಕೀರ್ತಿಶೇಷನಾದ ತರುವಾಯ ಚಾಲುಕ್ಯವಂಶದ ಅರಸರು ಮುಂದೆ ಒಂದು ಶತಮಾನಕಾಲ ಬಾದಾಮಿಯಲ್ಲೇ ಆಳಿಕೊಂಡಿದ್ದರು. ವಿಜಯಾದಿತ್ಯನ ಮಗ-ವಿಕ್ರಮಾದಿತ್ಯ ಮತ್ತು ಆತನ ವೀರಪತ್ನಿ ಲೋಕಮಹಾದೇವಿಯರು ಬಾದಾಮಿ ನಗರದಲ್ಲಿ ಆಳಿಕೊಂಡಿದ್ದ ಕಾಲವೇ (೭೩೩-೭೪೬) ಚಾಲುಕ್ಯರ ವೈಭವ ಕಾಲದ ಅಂತಿಮಾವಸ್ಥೆ

*ಈ ಚಾಲುಕ್ಯರ ವಂಶೋತ್ಪತ್ತಿ ವಿಚಾರವೂ, ಆ ಸಂಬಂಧ ವರ್ಣನೆಯೂ 'ಸುಬೋಧ ಕುಸುಮಾಂಜಲಿ ಗ್ರಂಥಮಾಲೆ'ಯ ೯ನೆಯ ಕುಸುಮವಾದ' **'ಸಾರ್ವಭೌಮ ಪುಲಿಕೇಶಿ'** ಎಂಬ ಪುಸ್ತಕದಲ್ಲಿ ವಿಸ್ತಾರವಾಗಿ ಕೊಡಲ್ಪಟ್ಟಿದೆ. (ಪುಟ. ೭-೮)

ಯೊನ್ನಬೇಕು. ಏಕೆಂದರೆ ಈ ರಾಜದಂಪತಿಗಳ ಮಗನಾದ ಎರಡನೇ ಕೀರ್ತಿವರ್ಮನ ಕಾಲದಲ್ಲೇ ರಾಷ್ಟ್ರಕೂಟವಂಶದ ದಂತಿದುರ್ಗನೆಂಬ ಅರಸನು, ಅವನಿಂದ ರಾಜ್ಯವನ್ನು ಸೆಳೆದುಕೊಂಡು ಬಾದಾಮಿಯಲ್ಲಿ ತನ್ನ ವಂಶದ ಆಧಿಪತ್ಯವನ್ನು ಸ್ಥಾಪಿಸಿದನು. ಚಾಲುಕ್ಯವಂಶದ ರಾಜವರೇಣ್ಯರು ಜಗನ್ನಾಟಕ ರಂಗದಲ್ಲಿ ಇಂತು ಒಂದು ಅಂಕವನ್ನು ಮುಗಿಸಿಕೊಂಡು ಕಣ್ಮರೆಯಾದರು-ಆ ವಂಶದವರ ಇತಿಹಾಸದ ಪೂರ್ವಾರ್ಧ್ಯಾಯವು, ಸುಮಾರು ಎರಡು ಶತಮಾನಕಾಲ (೫೫೦-೭೫೭) ಬಾದಾಮಿ ನಗರದ ದಿವ್ಯ ಕ್ಷೇತ್ರದಲ್ಲಿ ಬರೆಯಲ್ಪಟ್ಟು ಇಂತು ಅಂತವಾಯಿತು.

ರಾಷ್ಟ್ರಕೂಟರ ಪ್ರಾಬಲ್ಯದಿಂದ ತಮ್ಮ ರಾಜ್ಯ ವೈಭವವನ್ನೂ ಸಂಪತ್ಸೌಭಾಗ್ಯಗಳನ್ನೂ ಕಳೆದುಕೊಂಡು ದೌರ್ಬಲ್ಯಕ್ಕೀಡಾದ ಚಾಲುಕ್ಯವಂಶಜರು, ಜಗತ್ತಿಗೆ ತೋರಿಸಲು ಮುಖವಿಲ್ಲದೆ, ಅನಾಮಧೇಯರೆನ್ನಿಸಿ ಕೆಲಕಾಲ ಅಲ್ಲಲ್ಲೆ ಅಡಗಿ ಜೀವಿಸಿದ್ದರು ತಮ್ಮ ಪೂರ್ವಿಕರು ಪ್ರಬಲರಾಷ್ಟ್ರಪ್ರಾಂದಕ್ಕೆ ಒಡೆಯರಾಗಿ ಇಂದ್ರಭೋಗಗಳನ್ನನುಭವಿಸಿದವರೆಂಬ ಸ್ಮರಣೆಯು, ಅವರ ಕ್ಷುದ್ರಜೀವಿತದೆದುರಿಗೆ ಬಂದು ನಿಂತು ಯಾವಾಗಲೂ ಅವರ ಜೀವವನ್ನು ಹಣ್ಣುಮಾಡುತ್ತಿದ್ದಿತು. ಮಾಂಡಲಿಕರಾಜರ ಮಣಿಮುಕುಟಗಳಿಂದ ವಂದಿಸಲ್ಪಟ್ಟು, ಸುವರ್ಣಮಯ—ರತ್ನಮಯ ಸಿಂಹಾಸನಗಳಲ್ಲಿ ಕುಳಿತು, ವಂದಿಮಾಗಧರಿಂದ-ಜಯ ಚಕ್ರೇಶ್ವರ-ಎಂದು ಮುಂತಾಗಿ ಹೊಗಳಿಸಿಕೊಂಡ ಮಹಾ ವೀರಾದಿವೀರರ ವಂಶದಲ್ಲಿ ಜನ್ಮಿಸಿದ ತಾವು, ಮತ್ತಾವ ಮಹತ್ಕಾರ್ಯ ಸಾಧನೆಗಾಗಿಯೂ ಅಲ್ಲ, ಕೇವಲ ಹೊಟ್ಟೆ ಹೊರೆಯುವುದಕ್ಕೂ ಕಂಡವರ ಕಾಲಡಿಯಲ್ಲಿ ಬಿದ್ದು ತುತ್ತು ಕೂಳಿಗೆ ಹಲ್ಗಿರಿಯಬೇಕಾಯಿತಲ್ಲಾ ಎಂದು ದಿನದಿನವೂ ಅವರ ಕರುಳು ಸುಟ್ಟು-ಸುಣ್ಣವಾಗುತ್ತಿತ್ತು. ತಮ್ಮ ವಂಶವನ್ನು ಮೂಲೆಗೊತ್ತಿ, ಬಾದಾಮಿಯಲ್ಲಿ ರಾಜ್ಯಭಾರ ಮಾಡುತ್ತಿದ್ದ ರಾಷ್ಟ್ರಕೂಟರ ರಾಜಮನೆತನವನ್ನು ಮಣ್ಣುಗೂಡಿಸಿ, ಅವರ ಸಮಾಧಿಯ ಮೇಲೆ ಎಂದಿಗೆ ಪುನಃ ತಮ್ಮ ವಿಜಯ ಧ್ವಜವನ್ನು ನಿಲ್ಲಿಸೇವು ಎಂಬುದೇ ಅವರ ನಿತ್ಯದ ಜಪವಾಗಿತ್ತು. ಆದರೆ ಇನ್ನೂ ಕಾಲಾನುಕೂಲತೆಯೊದಗಿರಲಿಲ್ಲ. ರಾಷ್ಟ್ರಕೂಟರು ಪ್ರಬಲರಾಗಿದ್ದರು. ಅವರ ರಾಜ್ಯದಲ್ಲಿ ಒಡಕು

ಹುಟ್ಟಿರಲಿಲ್ಲ. ಅರಸರೂ ಅಧಿಕಾರಿಗಳೂ ಭೋಗಲಾಲಸರಾಗಿರಲಿಲ್ಲ-ರಾಜ್ಯದ ನೌಕರರು ವಿಷಯಪರಾಯಣರಾಗಿರಲಿಲ್ಲ. ಮೋಹ ಮದಾಂಧಕಾರಗಳು ರಾಷ್ಟ್ರಕೂಟದ ರಾಜರ ಕಣ್ಣುಗಳನ್ನು ಮುಂಕುಗೊಳಿಸಿರಲಿಲ್ಲ. ಆದುದರಿಂದ ಅವರ ರಾಜ್ಯವು ಇನ್ನೂ ಅಳಿಯಲನುವಾಗಿರಲಿಲ್ಲ. ಅಲ್ಲದೆ ಇತ್ತ ಚಾಲುಕ್ಯ ಮನೆತನದವರ ರಾಜ್ಯಾಧಿಕಾರ ಸಂಪಾದನಾಪೇಕ್ಷೆಯೂ ಉತ್ಕಟಾವಸ್ಥೆಯನ್ನು ಮುಟ್ಟಿರಲಿಲ್ಲ. ಮನಸ್ಸು ವಾಕ್ಕುಗಳಲ್ಲಿದ್ದ ಅವರ ಇಚ್ಛೆಯು ಕಾರ್ಯರೂಪಕ್ಕೆ ಬರಲು ಇನ್ನೂ ಸಿದ್ಧವಾಗಿರಲಿಲ್ಲ. ದೇಹವು ಕಷ್ಟಸಹಿಷ್ಣುತೆಯ ಕಾರ್ಯಕ್ಷೇತ್ರದಲ್ಲಿ ದುಡಿಯಲು ಇನ್ನೂ ಬಳಕೆಗೊಂಡಿರಲಿಲ್ಲ. ರುಚಿಯಾದ ತಿಂಡಿ ತೀರ್ಥಗಳ ಹಂಬಲವು ನಾಲಿಗೆಗೂ, ಮೆತ್ತನೆಯ ಹಾಸಿಕೆ ಹೊದಿಕೆಗಳ ಹಂಬಲವು ಮೈಗೂ ಇನ್ನೂ ಅಸಹ್ಯವೆನ್ನಿಸಿರಲಿಲ್ಲ. ಆಹಾರ ನಿದ್ರೆಗಳು—ಆಸ್ತಿಪಾಸ್ತಿಗಳು ಆತ್ಮೀಯರು ಮುಂತಾದುವನ್ನು ತೊರೆದಾದರೂ ಉದ್ದಿಷ್ಟ ಕಾರ್ಯವನ್ನು ಸಾಧಿಸೇವು ಎಂಬ ತೀಕ್ಷ್ಣ ರಾಜಕೀಯ ವೈರಾಗ್ಯವು ಇನ್ನೂ ಅವರ ಮನಸ್ಸನ್ನು ಆಕ್ರಮಿಸಿರಲಿಲ್ಲ. ರಣದಲ್ಲಿ ಜಯಿಸಿದರೆ ಭೂಲೋಕ ಸಾಮ್ರಾಜ್ಯ ವೈಭವಾದಿಗಳನ್ನು ಅನುಭವಮಾಡಬಹುದು-ರಣದಲ್ಲಿ ಮಡಿದರೆ ವೀರಸ್ವರ್ಗವನ್ನು ಗಳಿಸಿ, ಯಶೋಮಯ ಶರೀರಿಗಳಾಗಿ ಇತಿಹಾಸಾಕಾಶದಲ್ಲಿ ನಕ್ಷತ್ರಗಳಂತೆ ಬೆಳಗಬಹುದು ಎಂಬೊಂದು ನಿಶ್ಚಯಾಭಿಪ್ರಾಯವು ಇನ್ನೂ ಅವರ ಮನಸ್ಸಿಗೆ ಬಂದಿರಲಿಲ್ಲ—ಆ ಹಂಬಲವೇನೋ ಮನಸ್ಸಿನಲ್ಲಿದ್ದಿತಾದರೂ ಇನ್ನೂ ದಾರ್ಢ್ಯಭಾವವು ಮಾತ್ರ ಉಂಟಾಗಿರಲಿಲ್ಲ. ಆದರೆ ಆ ಹಂಬಲದಿಂದಲೂ ಆ ಹಲುಬುವಿಕೆಯಿಂದಲೂ ಏನೂ ಪ್ರಯೋಜನವಾಗಿರಲಿಲ್ಲವೆನ್ನಬಾರದು. ನಿತ್ಯವೂ ಮನಸ್ಸನ್ನು ಕೊರೆಯುತ್ತಿದ್ದ ಆ ಯೋಚನೆಯೇ ಕಾಲಾಂತರದಲ್ಲಿ ಆ ಕಾರ್ಯಸಾಧನೆ ಮಾಡಬಲ್ಲ ಒಂದು ವ್ಯಕ್ತಿಯನ್ನು, ಆ ವಂಶದಲ್ಲಿ ಸೃಷ್ಟಿಸಲು ಸಹಾಯಕವಾಯಿತು. ದಂತಿದುರ್ಗನಿಂದ ಪರಾಜಿತವಾಗಿ ವೈಭವ ಸ್ಥಾನದಿಂದ ಪತನ ಹೊಂದಿದಾಗಿನಿಂದಲೂ, ಆ ವಂಶೀಯರು ಮಾಡುತ್ತಾ ಬಂದ ತಪಸ್ಸಿನ ಫಲವಾಗಿ ಜನಿಸಿದ ಸಿದ್ಧಪುರುಷನೇ ನೂರ್ಮಡಿ ತೈಲಪನು. ಈ ತ್ರೈಲೋಕ್ಯಮಲ್ಲನೇ ಚಾಲುಕ್ಯರ ಇತಿಹಾಸದ ಎರಡನೆಯ ಅಧ್ಯಾಯವನ್ನು ಬರೆಯಲೆಡೆಗೊಟ್ಟ ನರವೀರನು.

ಚಾಲುಕ್ಯ ರಾಜವಂಶ ನಾಟಕದ ಎರಡನೆಯ ಅಂಕವು ತ್ರೈಲೋಕ್ಯಮಲ್ಲ ಅಥವ ನೂರ್ಮಡಿ ತೈಲಪನಿಂದ ೯೭೩ನೆಯ ಸಂವತ್ಸರದಲ್ಲಿ ಪುನಃ ಪ್ರಾರಂಭಿಸಲ್ಪಟ್ಟಿತು. ಆ ವೇಳೆಗೆ ದಂತಿದುರ್ಗನಿಂದ ಚಾಲುಕ್ಯರು ಪರಾಜಯಹೊಂದಿ ಎರಡು ಶತಮಾನಕಾಲವು ಕಳೆದುಹೋಗಿತ್ತು. ಹಾಗೆ ಇನ್ನೂರು ವರ್ಷಕಾಲ ಅಲ್ಲಿ ಬಿದ್ದಿಲ್ಲಿಬಿದ್ದು, ಪಡಬಾರದ ಕಷ್ಟನಷ್ಟಗಳನ್ನೆಲ್ಲ ಪಟ್ಟತರುವಾಯ ಆ ವಂಶದಲ್ಲಿ ಈ ತೈಲಪನೆಂಬ ನರಕೇಸರಿಯು ಜನ್ಮಿಸಿ ಬಾದಾಮಿಯ ಅರಸರನ್ನು ಜಯಿಸಿ, ತಮ್ಮ ಪೂರ್ವಜರು ಏರಿದ್ದ ಗದ್ದಿಗೆಯನ್ನೇ ಪುನಃ ಏರಿ ಕುಳಿತನು.

ರಾಷ್ಟ್ರಕೂಟರು ಮತ್ತು ಚಾಲುಕ್ಯರು ಈ ಎರಡು ಮನೆತನಗಳವರಿಗೆ ನಡೆದ ರಾಜಕೀಯ ವ್ಯವಹಾರದಲ್ಲಿ ಒಂದು ಚಮತ್ಕಾರವುಂಟು. ಪ್ರಾರಂಭದಿಂದಲೂ ಈ ಎರಡು ವಂಶಗಳಿಗೂ ಒಂದು ಬಗೆಯ ಮಲ್ಲಯುದ್ಧವೇ ನಡೆಯುತ್ತಾ ಬಂದಿತೆಂದು ಹೇಳಬಹುದು. ನಾಲ್ಕನೆಯ ಶತಮಾನದ ಕೊನೆಯ ಭಾಗದಲ್ಲಿ, ರಾಷ್ಟ್ರಕೂಟರ ಇಂದ್ರನೆಂಬ ರಾಜನನ್ನು ಸೋಲಿಸಿ ಚಾಲುಕ್ಯರ ಜಯಸಿಂಹನು ತಮ್ಮ ವಂಶವೃಕ್ಷವನ್ನು ನಟ್ಟನು. ಅದು ಚೊಳೆತು ಬೆಳೆದು ಪುಲಿಕೇಶಿ ಮುಂತಾದ ನರವರೇಣ್ಯರ ಕಾಲದಲ್ಲಿ ಪುಷ್ಪಫಲಭರಿತವಾಗಿ ಕಂಗೊಳಿಸಿ, ಸುಮಾರು ಎರಡುನೂರು ವರ್ಷಕಾಲ ಜೀವಿಸಿತೆಂಬ ವೇಳೆಗೆ ರಾಷ್ಟ್ರಕೂಟದ ದಂತಿವರ್ಮನು ಚಾಲುಕ್ಯವಂಶದ ಕೀರ್ತಿವರ್ಮನನ್ನು ಜಯಿಸಿ ತನ್ನ ಕೀರ್ತಿ ಧ್ವಜವನ್ನು ನಟ್ಟನು. ಅದು ಮುಂದೆ ಎರಡುನೂರು ವರ್ಷಕಾಲ ಜೀವಿಸಿದ್ದ ತರುವಾಯ, ಮೇಲೆ ಹೇಳಿದಂತೆ ತೈಲಪನು ರಾಷ್ಟ್ರಕೂಟರನ್ನು ಸೋಲಿಸಿ ಪುನಃ ಚಾಲುಕ್ಯರ ವಿಜಯ ಧ್ವಜವನ್ನು ಎತ್ತಿ ಹಿಡಿದನು. ಅಷ್ಟುಮಾತ್ರವಲ್ಲ-ಇದರಲ್ಲಿ ಇನ್ನೊಂದು ವಿಶೇಷವೂ ಉಂಟು. ಹಿಂದೆ ಹೇಳಿದ ರಾಷ್ಟ್ರಕೂಟರ ದಂತಿವರ್ಮನು ಚಾಲುಕ್ಯ ಮನೆತನಕ್ಕೆ ಅಳಿಯನಾಗಿದ್ದು, ಮಾವನ ಮನೆತನವನ್ನು ಮುರಿದೊತ್ತಿ ತನ್ನ ವಂಶವನ್ನು ಸ್ಥಾಪಿಸಿದ್ದನು. ಈಗ ತ್ರೈಲೋಕ್ಯಮಲ್ಲನಾದರೂ ರಾಷ್ಟ್ರಕೂಟ ಮನೆತನದ ಹೆಣ್ಣನ್ನೇ ಮದುವೆಯಾಗಿದ್ದು, ತನ್ನ ಮಾವನಾದ ಕಕ್ಕಲನನ್ನು ಜಯಿಸಿ ಆತನಿಂದ ರಾಜ್ಯಾಧಿಪತ್ಯವನ್ನು ಸೆಳೆದುಕೊಂಡು ಮಳಖೇಡದಲ್ಲಿ ಪಟ್ಟವೇರಿದನು. ದಿನದಿನಕ್ಕೆ ಸುತ್ತುಮು

ತ್ರಿನ ರಾಜರನೇಕರು ಆತನಿಗೆ ವಶವರ್ತಿಗಳಾದರು. ಹಲವುಮಂದಿ ಸಾಮಂತರಾಜರಿಂದ ಓಲಗಿಸಲ್ಪಟ್ಟವನಾಗಿ, ತ್ರೈಲೋಕ್ಯಮಲ್ಲ ನರೇಶ್ವರನು ಅದ್ವಿತೀಯನೆನಿಸಿ, ಅರಿವೃಂದ ಭಯಂಕರನಾಗಿ, ಜಗದೇಕವೀರನೆಂದು ಕೀರ್ತಿಹೊಂದಿ ಇಪ್ಪತ್ತಾಲ್ಕು ವರ್ಷಕಾಲ ರಾಜ್ಯವಾಳಿದನು. ಈ ಭೂಪಾಲನ ಕಾಲದಲ್ಲಿ ಲಕ್ಷ್ಮೀ ಸರಸ್ವತಿಯರಿಬ್ಬರೂ ಏಕತ್ರ ಸನ್ನಿಹಿತರಾಗಿದ್ದರು. ತೈಲಪನು, ರಣಭೀಮನೆನ್ನಿಸಿಕೊಂಡು ಶತ್ರುಭಯಂಕರನಾಗಿದ್ದಂತೆಯೇ, ಸಾಹಿತ್ಯಪ್ರೇಮಿಯಾಗಿ ವಿದ್ವಜ್ಜನ ಸಮುದಾಯಕ್ಕೆ ಆಶ್ರಯದಾತನಾಗಿಯೂ ಇದ್ದನು. ಈ ಮಹಾರಾಯನ ಕಾಲದಲ್ಲೇ 'ಗದಾಯುದ್ಧ'ವೆಂಬ ಗ್ರಂಥರತ್ನವನ್ನು ರಚಿಸಿ, ಕರ್ಣಾಟಕ ವಾಙ್ಮಯವನ್ನೇ ಅಮರವನ್ನಾಗಿರಿಸಿದ ರನ್ನನೆಂಬ ಕವಿಶೇಖರನು ಜೀವಿಸಿದ್ದುದು. ರನ್ನ, ಚಾವುಂಡರಾಯ ಎಂಬಿಬ್ಬರು ನೂರ್ಮಡಿ ತೈಲಪನಿಗೆ ದಂಡನಾಯಕರಾಗಿದ್ದರು ಮಾತ್ರವಲ್ಲ, ಆತನ ಆಸ್ಥಾನದಲ್ಲಿ ಕವಿಶೇಖರರಾಗಿಯೂ ಇದ್ದರು. ಹೀಗೆ ಶಾಪಾದಪಿ—ಶರಾದಪಿ, ಪ್ರೌಢ ಪಾಂಡಿತ್ಯವನ್ನು ಗಳಿಸಿದ ನರಕೇಸರಿಗಳಿಂದ ಓಲಗಿಸಲ್ಪಟ್ಟಿದ್ದ ತ್ರೈಲೋಕ್ಯಮಲ್ಲ ನರೇಂದ್ರನು ಮೇಲೆ ಹೇಳಿದಂತೆ ಇಪ್ಪತ್ನಾಲ್ಕು ವರುಷಕಾಲ ರಾಜ್ಯಭಾರಮಾಡಿ ಕೀರ್ತಿಶೇಷನಾದನು.

ತ್ರೈಲೋಕ್ಯಮಲ್ಲನು ೯೯೭ನೆಯ ಸಂವತ್ಸರದಲ್ಲಿ, ಸ್ವರ್ಗಸ್ಥನಾದ ತರುವಾಯ, ಸತ್ಯಾಶ್ರಯ ವಿಕ್ರಮಾದಿತ್ಯ, ಜಯಸಿಂಹ ಎಂಬ ಮೂವರು ರಾಜರು ಆತನ ಗದ್ದುಗೆಯನ್ನೇರಿ, ರಾಜವಂಶ ವೃಕ್ಷವನ್ನು ನಾಲ್ವತ್ತೂಕ್ರರು ವರ್ಷಕಾಲ ರಕ್ಷಿಸಿಕೊಂಡು ಬಂದರು. ಅವರ ಕಾಲದಲ್ಲಿ ಇತಿಹಾಸಪ್ರಸಿದ್ಧವೆನ್ನುವಂತಹ ಯಾವ ಮಹತ್ಕಾರ್ಯವೂ ನಡೆಯಲಿಲ್ಲವಾದರೂ, ಅವರು ವಂಶಕರ್ತ ತೈಲಪನ ಕೀರ್ತಿಗೆ ಕಳಂಕತರುವಂತಹ ಯಾವ ಕಾರ್ಯವನ್ನೂ ಮಾಡಲಿಲ್ಲ. ಹೊಸದಾಗಿ ರಾಜ್ಯಕೋಶಗಳನ್ನು ಜಯಿಸಿ, ದೇಶವನ್ನು ವಿಶೇಷ ವಿಸ್ತರಗೊಳಿಸಲಿಲ್ಲವಾದರೂ, ಅವರು ಅಸಲರಾಗಿ ಕುಳಿತು ಇದ್ದುದನ್ನು ಕಳೆದುಕೊಳ್ಳದಂತೆ ಜಾಗ್ರತರಾಗಿದ್ದರು. ಅವರೂ ಧೈರ್ಯ ಸಾಹಸ ಸಂಪನ್ನರೂ ಉದಾರಿಗಳೂ ಆದವರು. ಜಯಸಿಂಹನು ೧೦೪೦ ರಲ್ಲಿ ಮೃತನಾಗಲು ಆತನ ಮಗನಾದ ಸೋಮೇಶ್ವರನೆಂಬ ಶೂರಾಗ್ರಣಿಯು ಆತನನ್ನು ಹಿಂಬಾಲಿಸಿ ಗದ್ದುಗೆಯನ್ನೇರಿದನು. ಈತನ ಕಾಲದಲ್ಲಿ ಕನ್ನಡಿಗರು ತಮ್ಮ

ನೆರೆಯ ಕನ್ನಡಿಗರಾದ ರಾಷ್ಟ್ರಕೂಟರೊಂದಿಗಲ್ಲ-ಬೇರೊಬ್ಬ ಹೊಸ ಶತ್ರು ಪಂಗಡದೊಂದಿಗೆ ಹೋರಾಡಬೇಕಾಯಿತು. ತಮಿಳರಾದ ಚೋಳರು, ಕರ್ಣಾಟಕ ದೇಶವನ್ನು ಒತ್ತಿಕೊಳ್ಳುತ್ತ ಬರಸಾಗಿದ್ದರು ಚೋಳರ ದೊರೆಯಾದ ರಾಜರಾಜ ನರೇಂದ್ರನು ಕರ್ಣಾಟಕ ದೇಶವನ್ನು ಹೊಕ್ಕು ಗಂಗಮಂಡಲವನ್ನು ಮುಳುಗಿಸಿ, ಉತ್ತರಕ್ಕೆ ಬರಲಾರಂಭಿಸಿದ್ದನು. ಕೃಷ್ಣಾ ತುಂಗಭದ್ರಾ ನದಿಗಳ ಮಧ್ಯದ ಫಲವತ್ತಾದ ಸೀಮೆಯಮೇಲೆ, ಚೋಳರಾಜರ ಕಣ್ಣುಬಿದ್ದು ಅದನ್ನು ಅಪಹರಿಸಲಿಕ್ಕಾಗಿ ಅವರು ದಂಡೆತ್ತಿ ನುಗ್ಗಿದರು. ಕರ್ಣಾಟಕವನ್ನು ತಮ್ಮ ಮಾತೃದೇವತೆಯೋ ಎಂಬಂತೆ ಆರಾಧಿಸುತ್ತಿದ್ದ ಚಾಲುಕ್ಯ ರಾಜವರೇಣ್ಯರು ತಮ್ಮ ಮಾತೃದೇಶದಮೇಲೆ ಪರಕೀಯರು ಮಾಡುತ್ತಿದ್ದ ಈ ಧಾಳಿಯನ್ನು ಸಹಿಸಿ ಹೇಗೆ ಕುಳಿತಿರಲಾಪರು ? ಸೋಮೇಶ್ವರನು, ರಾಜರಾಜನೊಂದಿಗೆ ಯುದ್ಧಕ್ಕೆ ಅನುವಾದನು. ಚೋಳರರಸನು, ನಿರ್ಘೃಣನೆಂದು ವಿಖ್ಯಾತನಾದವನು. ಅವನು ತನ್ನ ಪ್ರಚಂಡ ಸೈನ್ಯಸಹಾಯದಿಂದ ಚಾಲುಕ್ಯ ರಾಜಧಾನಿಯಾದ ಕಲ್ಯಾಣದವರೆಗೂ ಸಾಗಿ ಬಂದು, ಅದನ್ನು ಸುಟ್ಟನು. ಆ ಸಂಗತಿಯು, ಆ ಸಂದರ್ಭದಲ್ಲಿ ರಾಜಧಾನಿಯಿಂದ ದೂರಪ್ರಾಂತದಲ್ಲಿದ್ದ ಸೋಮೇಶ್ವರನಿಗೆ ತಿಳಿಯಿತು. ಸೋಮೇಶ್ವರನು ರೋಷಭೀಷಣನಾಗಿ ಅಲ್ಲಲ್ಲಿದ್ದ ತನ್ನ ಸೈನ್ಯವನ್ನೆಲ್ಲ ಒಟ್ಟುಗೂಡಿಸಿಕೊಂಡು, ಚೋಳವೀರನಿಗೆ ಯುದ್ಧಭಿಕ್ಷೆಯನ್ನು ನೀಡಲು ತುಂಗಭದ್ರಾ ತೀರದ ಕೊಪ್ಪದ ಬಳಿ ಕಾದಿದ್ದನು. ಚಾಲುಕ್ಯವೀರ ಸೋಮೇಶ್ವರನು ತನಗಾಗಿ ಅಲ್ಲಿ ಕಾದಿರುವನೆಂಬುದನ್ನು ಕೇಳಿದ ಕಡುಗಲಿ ರಾಜರಾಜನು, ದಂಡೆತ್ತಿ ಅಲ್ಲಿಗೂ ನಡೆದನು. ಚೋಳ-ಚಾಲುಕ್ಯ ಸೈನ್ಯಶರಧಿಗಳೆರಡೂ ಪ್ರಳಯ ರಭಸದಿಂದ ಒಂದನ್ನೊಂದು ಸಂಧಿಸಿದುವು. ಭಯಂಕರ ಯುದ್ಧವೊಂದು ನಡೆದು, ರಕ್ತವು ಹಳ್ಳವಾಗಿ ಹರಿದು ತುಂಗಭದ್ರೆಯ ಸ್ವಚ್ಛ ಜಲವನ್ನು ಕೆಂಪಾಗಿಸಿತು. ರಣಭೂಮಿಯು, ಮಜ್ಜೆ ಮಾಂಸಾದಿ ಅಸಹ್ಯ ವಸ್ತುಗಳಿಂದ ಹೇಸಿಕೆಯಾಯಿತು. ಉಭಯ ದಳದಲ್ಲೂ ಸಹಸ್ರಾರು ಹಸ್ತ್ಯಶ್ವರಥಪದಾತಿಗಳು ಭೂಶಯನ ಮಾಡಿದುವು ಹೀಗೆ ಭಯಂಕರ ಯುದ್ಧ ನಡೆದು, ಮುಂದೇನಾಗಲಿರುವುದೋ ಎಂದು ಉಭಯ ದಳದವರೂ ಶ್ರಾಂತರಾಗುತ್ತಿದ್ದರೆಂಬ ವೇಳೆಗೆ, ಕರ್ಣಾಟಕ ವೀರ ಸೋಮೇಶ್ವರನು ಶತ್ರು

ಸೈನ್ಯವು ಸೋತಿರುವುದೆಂಬ ಸುಳಿವನ್ನು ತಿಳಿದು ತನ್ನ ಸೈನ್ಯವನ್ನು ಹುರಿದುಂಬಿಸಿದನು. ಕನ್ನಡಿಗ ಕಡುಗಲಿಗಳು ತಮ್ಮ ನರಪತಿಯಿಂದ ಹೀಗೆ ಪ್ರೋತ್ಸಾಹಿತರಾಗಿ, ಜೀವದ ಮೇಲಿನ ಹಂಗುದೊರೆದು, ಶತ್ರುದಳದ ಮೇಲೆ ಬಿದ್ದರು. ಚೋಳ ಸೈನ್ಯವು ಧ್ವಂಸಿತವಾಯಿತು. ರಾಜರಾಜ ಚೋಳನು, ಈ ಅನರ್ಥವನ್ನು ಕಂಡು ಸ್ವತಃ ಆಯುಧಹಸ್ತನಾಗಿ ರಣಾಂಗಣಕ್ಕಿಳಿದನು. ಒಡನೆ ಸೋಮೇಶ್ವರನೂ ಕೈದುಗಳನ್ನು ಕೈಗೆತ್ತಿಕೊಂಡು ಆತನಿಗಿದಿರಾದನು. ಉಭಯ ಕಲಿಗಳಿಗೂ ಯುದ್ಧವು ಕರ್ಣಾರ್ಜುನರಂಗೆ ನಡೆದಂತೆ ಬಹು ಭಯಂಕರವಾಗಿ ನಡೆಯಿತು. ಚೋಳರಾಜೇಂದ್ರನೇನು ಹತವೀರ್ಯನಲ್ಲ-ಆದರೆ, ಕರ್ಣಾಟಕ ವೀರಶಿರೋಮಣಿ ಸೋಮೇಶ್ವರನ ಕೈಯು ಈ ಯುದ್ಧದಲ್ಲಿ ಮೇಲಾಯಿತು. ವೀರಾಧಿವೀರ ರಾಜರಾಜ ಚೋಳನು, ಚಾಲುಕ್ಯವೀರನ ಕರ ಕೃಪಾಣಹತಿಗೆ ಬಲಿಯಾಗಿ ನೆಲಕ್ಕೆ ಬಿದ್ದನು. ಒಡನೆ ಚೋಳ ಸೈನ್ಯವೆಲ್ಲವೂ ದಿಕ್ಕಪಾಲಾಗಿ ಓಡಿಹೋಯಿತು.

ಮಹಾವೀರ ಚೋಳನರೇಂದ್ರನನ್ನು ರಣಲಕ್ಷ್ಮಿಗೆ ಬಲಿಯಿತ್ತ ಸೋಮೇಶ್ವರನನ್ನು ಅಪ್ರತಿಮ ಪರಾಕ್ರಮಿ-ಲೋಕೈಕವೀರ ಎಂದು ಸಕಲರೂ ಮುಕ್ತಕಂಠದಿಂದ ಹೊಗಳಿದರು. ಸೋಮೇಶ್ವರನು ತಾಯ್ನಾಡನ್ನು ಕಬಳಿಸಲು ಬಂದಿದ್ದ ಮಹದ್ಭೂತವೊಂದನ್ನು ನಿವಾರಿಸಿದೆನಲ್ಲಾ ಎಂದು ಸಂತಸಗೊಂಡಿರುವವೇಳೆಗೆ, ಮೃತನ ತಮ್ಮನಾದ ರಾಜೇಂದ್ರದೇವನು ಅಣ್ಣನ ಸ್ಥಾನದಲ್ಲಿ ನಿಂತು ಸೈನ್ಯವನ್ನು ನಡೆಯಿಸುತ್ತಾ ಎದುರಿಸಿದನು. ಆವರೆಗೆ ನಡೆದ ಯುದ್ಧದಿಂದ ವಿಶೇಷ ಶ್ರಾಂತವಾಗಿದ್ದ ಕರ್ಣಾಟಕ ಸೈನ್ಯವೂ, ಸೋಮೇಶ್ವರನೂ ಹೊಸ ಹುರುಪಿನಿಂದ ಬಂದ ಆ ಶತ್ರುಸೈನ್ಯವನ್ನು ಹಿಮ್ಮೆಟ್ಟಿಸಲಾರದಾದರು. ರಾಜೇಂದ್ರದೇವನು, ಮುಂದೆ ಕೊಲ್ಲಾಪುರದವರೆಗೂ ಹೋಗಿ, ಅಲ್ಲಿಂದು ಜಯಸ್ತಂಭವನ್ನು ಸ್ಥಾಪಿಸಿ, ತನ್ನ ವಿಜಯಯಾತ್ರೆಯನ್ನು ಸ್ಥಿರಗೊಳಿಸಿದನು. ಮುಂದೆ ನಾಲ್ಕಾರು ವರ್ಷಗಳಲ್ಲೇ ಅವನು ಮೃತನಾಗಲು, ಅವನನ್ನು ಹಿಂಬಾಲಿಸಿ ಪಟ್ಟವೇರಿದ ತಮ್ಮನಾದ ವೀರರಾಜೇಂದ್ರ ಚೋಳನಿಗೂ ಸೋಮೇಶ್ವರನಿಗೂ ಹಲವೆಡೆಗಳಲ್ಲಿ ಕದನಗಳಾದುವು. ಹಲವುವೇಳೆ ಇಂತಹ ಭಯಂಕರ ಯುದ್ಧಗಳಲ್ಲಿ ಹೋರಾಡಿದನಾದರೂ, ಕಲಿ ಸೋಮೇಶ್ವರನಿಗೆ ತಣಿವೆಂಬುದೇ

ಉಂಟಾಗಲಿಲ್ಲ ಆತನ ತೋಳತೀಟೆಯು ಕುಂದಲೇ ಇಲ್ಲ. ನಾಲ್ಕು ತಿಂಗಳಕಾಲ ರಣಾಂಗಣದ ದರ್ಶನವಾಗದಿದ್ದರೆ, ಅವನು ಅಸ್ವಸ್ಥನಾಗುತ್ತಿದ್ದನು. ಒಂದುವೇಳೆ ಹಾಗೆ ಸುಮ್ಮನಿರಲು ಸಮಾಧಾನವುಂಟಾಗದಿದ್ದುದರಿಂದ ವೀರರಾಜೇಂದ್ರ ಚೋಳನಿಗೆ-'ಸುಮ್ಮನೆ ಕಾಲಹರಣ ಮಾಡಲು ಬೇಸರವೆನ್ನಿಸುತ್ತದೆ. ಯುದ್ಧಕ್ಕೆ ಬರುವೆಯಾ ? ' ಎಂದು ಬರೆದು ಕಳುಹಿಸಿದನು. ಶತ್ರುವನ್ನು ನನ್ನಮೇಲೆ ದಂಡೆತ್ತಿ ಬಾರೆಂದು ಹೇಳಿಯುವಿತ್ತು ಕರೆವ ನರವೀರರು ಜಗತ್ತಿನ ಇತಿಹಾಸದಲ್ಲಿ ಎಷ್ಟು ಮಂದಿ ದೊರೆಯುವರು ? ಕನ್ನಡಿಗರು ಎಂತಹ ಕಡುಗಲಿಗಳಾಗಿದ್ದವರು, ಎಂಬುದನ್ನು ವರ್ಣಿಸುವುದಕ್ಕೆ ಶುಷ್ಕಮಾತುಗಳೇತಕ್ಕೆ ? ಈ ಬಗೆಯ ಅವರ ಕೃತಿಗಳೇ ಸಾಲವೆ ?

ಆಹವಮಲ್ಲ ಸೋಮೇಶ್ವರನ ಆಹ್ವಾನವನ್ನು ಅನುಸರಿಸಿ, ವೀರರಾಜೇಂದ್ರ ಚೋಳನು, ತನ್ನ ಪ್ರಚಂಡ ಸೈನ್ಯದೊಂದಿಗೆ ಪ್ರಯಾಣವಾಗಿ ಹೊರಟು ತುಂಗಭದ್ರಾತೀರದಲ್ಲಿ ಬಂದಿಳಿದನು. ಆದರೆ ಆ ವೇಳೆಗೆ ಸೋಮೇಶ್ವರನು ರೋಗಗ್ರಸ್ತನಾಗಿ ಅಸಹ್ಯ ಜ್ವರಬಾಧೆಯಿಂದ ಸಂಕಟಪಡುತ್ತಿದ್ದನು ಶತ್ರುವು ಸೈನ್ಯದೊಂದಿಗೆ ಬಂದು ತನ್ನ ರಾಜ್ಯವನ್ನು ಹೊಕ್ಕಿದ್ದಾನೆಂದು ತಿಳಿಯಿತು. ಆದರೂ ಹೋಗಿ ಅವನೊಂದಿಗೆ ಯುದ್ಧಮಾಡಿ ಜಯಿಸಿ ಓಡಿಸಲು, ಸಾಧ್ಯವಾಗದುದಕ್ಕಾಗಿ ಬಹುವ್ಯಥೆಯಾಯಿತು. ಜ್ವರವಾದರೋ ದಿನದಿನಕ್ಕೆ ಏರುತ್ತಲೇ ಇದ್ದಿತು. ಆ ಜ್ವರಬಾಧೆಯನ್ನು ಸಹಿಸುವುದು ಆತನಿಂದ ಸಾಧ್ಯವಿಲ್ಲವಾಯಿತು. ಅಲ್ಲದೆ, ತಾನಿನ್ನು ಬದುಕಲಾರನೆಂಬುದೂ ಆತನಿಗೆ ದೃಢವಾಯಿತು. ಹಾಗೆ ಸಾವೇ ನಿಶ್ಚಯವಾದಮೇಲೆ ಮನೆಯಲ್ಲಿ ಹಂಸತೂಲಿಕಾತಲ್ಪದಲ್ಲಿ ಮಲಗಿ ನರಳುತ್ತ ಸಾಯುವುದಕ್ಕೆ ವೀರಾಗ್ರಣಿಯಾದ ಆತನ ಮನಸ್ಸು ಒಪ್ಪದಾಯಿತು. ಒಡನೆ ಯೋಚಿಸಿ, ತಾನು ಪ್ರಾಣತ್ಯಾಗ ಮಾಡಬೇಕಾದ ಮಾರ್ಗವಾವುದೆಂಬುದನ್ನು ನಿರ್ಧರಿಸಿದನು. ಅಂತ್ಯಕಾಲದ ದಾನ ಧರ್ಮಗಳನ್ನೆಲ್ಲ ವಿಶೇಷವಾಗಿ ಮಾಡಿ, ಅರಮನೆಯಿಂದ ಹೊರಟು ತುಂಗಭದ್ರೆಯ ತೀರವನ್ನು ಸೇರಿದನು. ಜಲದಲ್ಲೂ ಇಳಿದುದಾಯಿತು. ಅಸಹ್ಯ ಜ್ವರ ಬಾಧೆಯಿಂದ ನರಳುತ್ತಿದ್ದ ತಮ್ಮ ರಾಜನು ನದಿಗೆ ಬಂದುದೇಕೆ ? ನೀರಿನಲ್ಲಿಳಿದುದೇಕೆ ? ಎಂದು ಯಾರಿಗೂ

ತಿಳಿಯುದಾಯಿತು. ಎಲ್ಲರೂ ನದಿಯ ಎರಡು ದಂಡೆಗಳಲ್ಲೂ ಸಾಲು ಸಾಲಾಗಿ ಗುಂಪು ಕಟ್ಟಿ ಸಂತು ಏನು ವಿಚಿತ್ರವೋ ಎಂದು ಕೌತುಕದಿಂದ ನೋಡಿಕೊಂಡಿರುತ್ತಿರಲು, ರಾಜನು ದೃಢವಾಗಿ ಅಡಿಗಳನ್ನಿತ್ತಿಡುತ್ತಾ, ನೀರಿನಲ್ಲಿಮುಂದು ಮುಂವಕ್ಕೆ ಹೋಗುತ್ತಲೇ ಇದ್ದನು. ಮೊಣಕಾಲು, ತೊಡೆ, ನಡುವುಗಳವರೆಗೂ ನೀರು ಬಂದಿತು. ಜನಗಳು ಒಬ್ಬರ ಮುಖವನ್ನೊಬ್ಬರು ನೋಡಿಕೊಳ್ಳತೊಡಗಿದ್ದರು. ಆದರೆ ಸೋಮೇಶ್ವರನೇನೋ, ಒಬ್ಬರ ಕಡೆಗೂ ನೋಡದೆ, ಒಬ್ಬರೊಂದಿಗೂ ಮಾತನಾಡದೆ, ನೇರವಾಗಿ ನಡೆದುಹೋಗುತ್ತಲೇ ಇದ್ದನು. ನೀರು ಎದೆ ಮಟ್ಟಕ್ಕೆ ಬಂತು. ಕುತ್ತಿಗೆಯುವರೆಗೂ ಬಂದಿತು.. ಪ್ರಜೆ ಪರಿವಾರಗಳವರು, ತಮ್ಮ ರಾಜನು ಜಲಸಮಾಧಿಯಿಂದ ಪ್ರಾಣಬಿಡಲು ನಿಶ್ಚಯಿಸಿದ್ದಾನೆಂಬುದನ್ನು ಆಗ ತಿಳಿದರು. ಎಲ್ಲರೂ, ಹಾ ಘಾತವಾಯಿತು, ಘಾತವಾಯಿತು ಎನ್ನುತ್ತಿರುವ ವೇಳೆಗೆ ಸೋಮೇಶ್ವರ ರಾಜೇಂದ್ರನ ಶಿರಸ್ಸು ನೀರಿನಲ್ಲಿ ಮುಳುಗಿಹೋಗಿದ್ದಿತು. ರಾಜನು ನಿಶ್ಚಲ ಮನೋಭಾವದಿಂದ ಜಲಸಮಾಧಿಯನ್ನು ಹೊಂದಿ ಪ್ರಾಣತ್ಯಾಗ ಮಾಡಿದನು. ವೀರಾಗ್ರಗಣ್ಯನೂ ದೃಢಚಿತ್ತನೂ ಆದ ಆತನ ಪವಿತ್ರ ಚೇತನವು ಆ ಒಂದು ಕೃತಿಯಿಂದ ಘೋರ ಜ್ವರ ಬಾಧೆಯಿಂದ ಮಾತ್ರವಲ್ಲ-ಪಾಂಚ ಭೌತಿಕ ಶರೀರದ ಬಂಧನದಿಂದಲೂ ನಿರ್ಮುಕ್ತವಾಯಿತು. ಮಹಾತಾಯಿ ತುಂಗಭದ್ರೆಯು ತನ್ನ ಎಡಬಲ ದಡಗಳಲ್ಲೇ ಗುಡುಗಾಡಿ ಬೆಳೆದ ಆ ಕಡುಗಲಿಯನ್ನು ಮಡಲಲ್ಲಿಟ್ಟುಕೊಂಡು ಸಂತಯಿಸಿದಳು. ಇಂತು ಸೋಮೇಶ್ವರನು, ಯೋಗಸಮಾಧಿಯಲ್ಲಿ ಕುಳಿತು ಶ್ವಾಸಬಂಧನ ಮಾಡಿ ಸದ್ಗತಿ ಗೈದುವ ಮಹಾಯೋಗಿಯುಂತೆಯೇ ಜಲಸಮಾಧಿಗೈದು ಪರಮ ಶಾಂತತೆಯಿಂದ, ನಿಷ್ಕಲ್ಮಷ ಚಿತ್ತವೃತ್ತಿಯಿಂದ, ಧೈರ್ಯದಿಂದ ಪ್ರಾಣವಾಯುಗಳನ್ನು ಬಿಟ್ಟು ಸದ್ಗತಿಗೆ ಸಂದನು.

ನಮ್ಮ ಕಥಾನಾಯಕನ ಜೀವಿತ ಚರ್ಯೆಗಳನ್ನು ಬರೆಯಲಾರಂಭಿಸುವುದಕ್ಕೆ ಮೊದಲು, ಚಾಲುಕ್ಯವಂಶದಲ್ಲಿ ಸುಪ್ರಸಿದ್ಧರೆನ್ನಿಸಿದ ನರಪುಂಗವರನ್ನು ಕುರಿತ ಈ ಕಿಂಚಿತ್ಪೂರ್ವಕಥಾನುವಾದದಿಂದ ಅವರ ಲೇಶಮಾತ್ರ ಪರಿಚಯಕೊಟ್ಟು, ಇನ್ನುಮುಂದೆ ಸಾಗಲೆಳೆಸುತ್ತೇವೆ. ವಾಚಕ ಮಹಾಶಯರು ಸಾವಧಾನವಾಗಿ ಮುಂದರಿಸಬೇಕು.

**ಅಧ್ಯಾಯ ೨ "ರಾಜ್ಯಭ್ರಷ್ಟತೆ"**

ಆಹವಮಲ್ಲ ಸೋಮೇಶ್ವರನ ಆಧಿಪತ್ಯದಲ್ಲಿ ಚಾಲುಕ್ಯ ಸಾಮ್ರಾಜ್ಯವು ವೈಭವ ಶಿಖರದ ಒಂದೊಂದೇ ಮೆಟ್ಟಿಲನ್ನು ಏರತೊಡಗಿದ್ದಿತೆಂಬುದನ್ನು ಹಿಂದಿನ ಅಧ್ಯಾಯದಲ್ಲಿ ಸೂಕ್ಷ್ಮವಾಗಿ ವಿವರಿಸಲಾಯಿತಷ್ಟೆ ! ಸೋಮೇಶ್ವರನು ಅನ್ವರ್ಥ ಆಹವಮಲ್ಲನೆನ್ನಿಸಿದವನು. ಪಟ್ಟವೇರಿದೊಡನೆ ಚೋಳರಾಜನೊಡನೆ ಕಾದಿದನು. ತರುವಾಯ ಉತ್ತರ ಭಾಗಕ್ಕೆ ವಿಜಯಯಾತ್ರೆ ಬೆಳಸಿ, ಧಾರಾನಗರವನ್ನು ಮುತ್ತಿ ಚರಿತ್ರ ಪ್ರಸಿದ್ಧನಾದ ಭೋಜರಾಜನನ್ನು ಜಯಿಸಿದನು. ಆಮೇಲೆ ಚೇದಿದೇಶದ ರಾಜಾ ಕರ್ಣನನ್ನು ಪರಾಜಯಗೊಳಿಸಿದನು. ನಂತರ ಕೊಂಕಣ ರಾಜ್ಯದಮೇಲೆ ದಂಡೆತ್ತಿನಡೆದು, ಅಲ್ಲಿಯ ಅರಸನನ್ನು ಗೆಲಿದು ಅಲ್ಲೊಂದು ಜಯಸ್ತಂಭವನ್ನು ನಟ್ಟನು. ತರುವಾಯ ಚೋಳ ರಾಜಧಾನಿಯಾದ ಕಂಚಿಯನ್ನು ಸಾಧಿಸಿದನು. ಆಮೇಲೆ ಕನ್ಯಾಕುಬ್ಜವನ್ನು ಸ್ವಾಧೀನಗೊಂಡನು. ಹೀಗೆ ಆಳಿಕೆಯನ್ನು ಪ್ರಾರಂಭಿಸಿದಾಗಿನಿಂದ (೧೦೪೨) ಅದು ಕೊನೆಗೊಂಡ (೧೦೬೮) ವರೆಗೆ ಎಂದರೆ ೨೮ ವರ್ಷಕಾಲದಲ್ಲಿ ಪ್ರತಿವರ್ಷವೂ ಒಂದಲ್ಲ ಒಂದು ಯುದ್ಧದಲ್ಲಿ ತೊಡಗಿ ಶ್ರಮಿಸಿದನಲ್ಲದೆ, ದೇಹಸೌಖ್ಯವನ್ನಾಶಿಸಿ ವಿಶ್ರಾಂತಿಗೊಂಡಿದ್ದವನಲ್ಲ ಈತನೇ, ನೂತನವಾಗಿ ಕಲ್ಯಾಣ ನಗರಿಯನ್ನು ನಿರ್ಮಾಣಗೊಳಿಸಿ, ಮಳಖೇಡದಿಂದ ತನ್ನ ರಾಜ್ಯಭಾರವನ್ನು ಅಲ್ಲಿಗೆ ವರ್ಗಾಯಿಸಿ, ಅದನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡವನು. ಈತನ ಕಾಲದಿಂದ ಚಾಲುಕ್ಯ ಮನೆತನಕ್ಕೆ ಕಲ್ಯಾಣವೇ ರಾಜಧಾನಿಯಾಗಿ ಪರಿಣಮಿಸಿತು.

ಈ ಸೋಮೇಶ್ವರನಿಗೆ ಇಮ್ಮಡಿ ಸೋಮೇಶ್ವರ, ವಿಕ್ರಮಾಂಕ, ಮತ್ತು ಜಯಸಿಂಹ ಎಂಬ ಮೂರುಮಂದಿ ಮಕ್ಕಳು. ಇವರಲ್ಲಿ ವಿಕ್ರಮಾಂಕನೇ ಎಲ್ಲರಿಗಿಂತಲೂ ಮಹಾಪ್ರಬಲನಾದವನು. ಶೂರನಾದ ಆಹವಮಲ್ಲ ಸೋಮೇಶ್ವರನಿಗೆ ತನ್ನ ಇತರ ಮಕ್ಕಳಿಗಿಂತಲೂ, ವಿಕ್ರಮನಲ್ಲೇ ಹೆಚ್ಚು ಪ್ರೇಮವಿದ್ದಿತು. ತನ್ನ ತರುವಾಯ ತನ್ನ ಹೆಸರನ್ನು ಉಳಿಸಬಲ್ಲ ಧೀರನು ವಿಕ್ರಮನೇ ಎಂಬುದು ಆತನ ನಂಬಿಕೆಯಾಗಿತ್ತು. ಆದುದರಿಂದ

ಜ್ಯೇಷ್ಠಕನಿಷ್ಠವಿಚಾರವನ್ನು ಸಹ ಬದಿಗೊತ್ತಿ, ತನ್ನ ತರುವಾಯ ವಿಕ್ರಮಾಂಕನೇ ಪಟ್ಟವೇರಬೇಕೆಂದು ಆತನು ಇಚ್ಛಿಸಿದ್ದನು. ಆದರೆ ವಿಕ್ರಮಾಂಕನು ಧೀರನು, ನ್ಯಾಯಪರನು. ರಾಜ್ಯಲೋಭಕ್ಕೊಳಗಾಗಿ ತನ್ನ ಕೀರ್ತಿಗೆ ಕಳಂಕ ತಂದುಕೊಳ್ಳಲು ಅವನ ಮನಸ್ಸು ಒಗ್ಗಲಿಲ್ಲ. ತಂದೆಯ ತರುವಾಯ ಹಿರಿಯಣ್ಣನು ರಾಜನಾಗತಕ್ಕುದು ನ್ಯಾಯವಾಗಿರುವಲ್ಲಿ, ಕೇವಲ ತಂದೆಗೆ ವಿಶೇಷ ಪ್ರೀತಿಪಾತ್ರನೆಂಬುದರಮೇಲೆ, ಆ ಲೌಕಿಕ ನೀತಿಗೆ ವಿರುದ್ಧವಾಗಿ ನಡೆಯುವುದಕ್ಕೆ ಆತನ ಮನೋದೇವತೆಯು ಸಮ್ಮತಿಸಲಿಲ್ಲ. ಮಗನ ಈ ನ್ಯಾಯಪರತೆಯು ಸೋಮೇಶ್ವರನಿಗೆ ವಿಶೇಷ ಸಂತೋಷವನ್ನುಂಟುಮಾಡಿತು. ಯೌವರಾಜ್ಯಾಭಿಷೇಕವೇನೋ ಹಿರಿಯ ಮಗನಾದ ಇಮ್ಮಡಿ ಸೋಮೇಶ್ವರನಿಗೇ ಆಗಿದ್ದರೂ, ಆಹವಮಲ್ಲನು ಆದ್ಯಂತ ಸೈನ್ಯವನ್ನೂ, ವಿಕ್ರಮಾಂಕನ ಸ್ವಾಧೀನದಲ್ಲೇ ಇಟ್ಟು ಹತ್ತಿರದ ದೂರದ ಶತ್ರುಗಳೊಂದಿಗೆ ಪ್ರಾಪ್ತವಾದ ಯುದ್ಧಗಳಿಗೆಲ್ಲ ಆತನನ್ನೇ ಕಳುಹಿಸುತ್ತಿದ್ದನು. ವಿಕ್ರಮಾಂಕನು, ತಂದೆಯು ಜೀವಂತನಾಗಿದ್ದ ಕಾಲದಲ್ಲೇ ಅನೇಕ ರಣಾಂಗಣಗಳಲ್ಲಿ, ಸುಪ್ರಸಿದ್ಧರಾದ ಅನೇಕಮಂದಿ ವೀರಾದಿವೀರರೊಂದಿಗೆ ಹೋರಾಡಿದ್ದನು. ಸೋಮೇಶ್ವರನಿಗೆ ಚೋಳನರೇಶ್ವರರೊಂದಿಗೆ ಯುದ್ಧವೊದಗಿದಾಗಲೆಲ್ಲ, ಎದೆಗೊಟ್ಟು ಹೋರಾಡಿದವನು ವಿಕ್ರಮದೇವನೇ! ಇನ್ನೂ ಯುದ್ಧವಿದ್ಯೆಯ ಪ್ರಾರಂಭಕಾಲದಲ್ಲೇ ಚೋಳರಾಜನೊಂದಿಗೆ ಹೋರಾಡಿ, ಕೇವಲ ತನ್ನ ಧೈರ್ಯಸಾಹಸಾದಿಗಳಿಂದಲೇ ಆ ಶತ್ರುರಾಜನನ್ನು ಪದಭ್ರಷ್ಟನನ್ನಾಗಿ ಮಾಡಿದ್ದನು. ತರುಣನೂ ಮಹಾ ಪರಾಕ್ರಮಿಯೂ ಆದ ಈ ಚಾಲುಕ್ಯವೀರನ ಕೀರ್ತಿಯು ಎಲ್ಲೆಲ್ಲೂ ಹಬ್ಬಿತು. ಆ ಸಮಕಾಲದಲ್ಲೇ ಮಾಳವದರಸನು ತನ್ನ ಶತ್ರುವಿನಿಂದ ಪರಾಜಿತನಾಗಿ ರಾಜ್ಯ ಕೋಶಗಳನ್ನು ಕಳೆದುಕೊಂಡು ಎಲ್ಲಾದರೂ ಆಶ್ರಯದೊರೆತೀತೇ ಎಂದು ಹುಡುಕಿಕೊಂಡು ಅಲೆಯುತ್ತಿರುವಲ್ಲಿ ಚಾಲುಕ್ಯರಾಜರ ಕೀರ್ತಿ ವೈಭವವನ್ನು ಕೇಳಿ, ಸೋಮೇಶ್ವರನಿಗೆ ಶರಣುಬಿದ್ದನು. ಆತನು ಶರಣು ಬಂದ ಮಾಳವಾಧಿಪನನ್ನು ಸಂತೈಸಿ, ಆತನಿಗೆ ಸಹಾಯಕವಾಗಿ ದೊಡ್ಡದೊಂದು ಸೈನ್ಯವನ್ನು ಅಣಿಗೊಳಿಸಿ, ಅದರ ಸ್ವಾಮ್ಯವನ್ನು ವಿಕ್ರಮಾಂಕನಿಗೆ ವಹಿಸಿ ವಿಜಯವಾಗಲೆಂದು ಆಶೀರ್ವದಿಸಿ

ರಾಜಾ ಸೋಮೇಶ್ವರನಿಗೆ, ವಿಕ್ರಮನ ಪ್ರತಾಪವೂ, ಅವನ ಪ್ರಜಾನುರಕ್ತತೆಯೂ ತನ್ನ ಆಳ್ವಿಕೆಗೆ ಕುಂದನ್ನುಂಟುಮಾಡದಂತೆ ಇರಬೇಕೆಂದು ಅಪೇಕ್ಷೆಯಿದ್ದಿತಲ್ಲದೆ, ಅವನು ತನಗೆ ಬೆಂಬಲವಾಗಿರದೆ ಹೊರಟುಹೋಗಬೇಕೆಂದಿರಲಿಲ್ಲ. ಆದರೆ ಮಾಡುವುದೇನು ? ತೇಜಸ್ವಿಯಾದ ವಿಕ್ರಮಾಂಕನು, ಸೋಮೇಶ್ವರನಿಗೆ ಅನುಗಾಲವೂ ದಾಸಾನುದಾಸನಾಗಿ, ಸ್ವಾಮಿಭೃತ್ಯನ್ಯಾಯಬದ್ಧನಾಗಿ ಬೆಳಕನ್ನು ಕತ್ತಲೆಂದೂ, ಕತ್ತಲನ್ನು ಬೆಳಕೆಂದೂ ನುಡಿಯಲು ಹೇಸದೆ, ಮನಸಾಕ್ಷಿಯನ್ನು ಕೊಂದುಕೊಂಡು ಬಿದ್ದಿರಲು ಎಂದಿಗಾದರೂ ಒಪ್ಪುವುದು ಸಾಧ್ಯವೆ ? ಹಾಗಾಗದಿದ್ದ ಸಂದರ್ಭದಲ್ಲಿ ಸಿಂಹಾಸನವನ್ನಧಿರೋಹಿಸಿ ರಾಜಾಧಿರಾಜನೆಂದು ಹೊಗಳಿಸಿಕೊಂಡವನಿಗೆ, ಅದು ತನ್ನ ಮಾನಕ್ಕೆ ಕಡಮೆಯೆಂದು ತೋರುವುದು ಸ್ವಾಭಾವಿಕವೇ ! ಸ್ವಭಾವತಃ ಮುಖಹೇಡಿಯೂ ದುರಭಿಮಾನಿಯೂ ಶೀಘ್ರಕೋಪಿಯೂ, ಚಂಚಲ ಚಿತ್ತನೂ ಆದ ಸೋಮೇಶ್ವರನು ತನ್ನ ತಮ್ಮನ ವಿಷಯದಲ್ಲಿ ಅಸಮಾಧಾನಪಟ್ಟುಕೊಂಡುದರಲ್ಲಿ ಅತಿಶಯವೇನು ? ಹೀಗೆ ಕಾರಣಾಂತರಗಳಿಂದ ಪರಸ್ಪರರ ಮನಸ್ಸಿನಲ್ಲಿ ವಿಷಮಭಾವವು ಬೆಳೆದು ಬಂದಿತು. ಎಂತೂ ಮೇಲೆಹೇಳಿದಂತೆ ವಿಕ್ರಮಾಂಕನೇನೋ ರಾಜಧಾನಿಯಿಂದ ಹೊರಹೊರಟನು.

ಅಸಹಾಯ ಶೂರನೂ ತೇಜಸ್ವಿಯೂ ಆದ ತಮ್ಮನ ಬೆಂಬಲ ತಪ್ಪಿದುದು ಮಾತ್ರವಲ್ಲ-ರಾಜ್ಯಕ್ಕೆ ರಕ್ಷಕವಾಗಿದ್ದ ಅಪಾರ ಸೈನ್ಯವೂ ಅವನೊಂದಿಗೆ ಹೊರಟು ಹೋಯಿತು. ಅಲ್ಲದೆ, ಮತ್ತೊಬ್ಬ ತಮ್ಮನೂ ಅವನೊಂದಿಗೇ ಹೊರಟು ನಡೆದನು. ಹೀಗಾಗಿ, ತಾನು ಏಕಾಕಿಯಾದುದು ಸೋಮೇಶ್ವರನಿಗೆ ಅತಿಶಯ ಕಳವಳಕ್ಕೆ ಕಾರಣವಾಯಿತು. ಮುಂದೆ ಉಪಾಯವೇನೆಂದು ತೋರದಾಯಿತು. ಯಾವ ಹಂಚಿಕೆಯಿಂದ ಅವರನ್ನು ಹಿಂದಕ್ಕೆ ಕರೆಯಿಸಬಹುದೆಂಬುದು ತೋರಲಿಲ್ಲ. ಸಾಮಾನ್ಯ ಧನಕನಕ ಅಧಿಕಾರ ವೈಭವಾದಿಗಳ ಆಸೆಯು ವಿಕ್ರಮಾಂಕನನ್ನು ಮೆಚ್ಚಿಸತಕ್ಕುದಲ್ಲವೆಂಬುದು ಅವನಿಗೆ ತಿಳಿಯುವುದು. ಇನ್ನು ಪಿತ್ರಾರ್ಜಿತವಾದ ರಾಜ್ಯದಲ್ಲಿ, ತನ್ನ ಸೋದರರೇ ಆದ ಅವರಿಗೆ ಭಾಗಕೊಡುವ ಆಸೆಯನ್ನಿಟ್ಟು ಕರೆಯಿಸಬೇಕೆಂದರೆ, ರಾಜ್ಯಲೋಭವು ಅದಕ್ಕೆ ಅವಕಾಶಕೊಡಲಿಲ್ಲ. ಹೀಗೆ ಮಾರ್ಗತೋರದೆ ಮೂರ್ಖನಂತಾಗಿ ವಿ ಕ್ಕಿದ್ದ ತನ್ನ ಸೈನ್ಯವನ್ನೇ ಅವರಮೇಲೆ ಕಳುಹಿಸಿ,

ಸಾಧ್ಯವಾದರೆ ಸೌಮ್ಯಮಾರ್ಗದಿಂದ-ಹಾಗಲ್ಲದಿದ್ದರೆ, ಯುದ್ಧದಲ್ಲಿ ಕೈಸೆರೆ ಹಿಡಿದು ಎಂತೂ ಅವರಿಬ್ಬರನ್ನೂ ಪುನಃ ರಾಜಧಾನಿಗೆ ಕರೆತರಬೇಕೆಂದು ಅಪ್ಪಣೆಮಾಡಿದನು. ಚಾಳುಕ್ಯಸೈನ್ಯವು ಚಾಳುಕ್ಯ ರಾಜಪುತ್ರರನ್ನೇ ತರು ಮಿಕೊಂಡು ಹೋಯಿತು. ಸೈನ್ಯದೊಂದಿಗೆ ಹೋಗಿದ್ದ ಅಧಿಕಾರಿಗಳು ರಾಜಸಂದೇಶವನ್ನು ತಿಳಿಸಿ -'ದಯಮಾಡಿ ರಾಜ್ಯಕ್ಕೆ ಬಂದು ಎಂದಿನಂತೆಯೇ ಚತುರಂಗ ಸೈನ್ಯದ ಸರ್ವಾಧಿಪತ್ಯವನ್ನೂ ವಹಿಸಿ ಪಿತೃಪಿತಾಮಹರ ಕಾಲದಿಂದ ಬಂದ ರಾಜ್ಯವನ್ನು ರಕ್ಷಿಸಿಕೊಂಡು ಬರಬೇಕೆಂದು 'ವಿಕ್ರಮಾಂಕನಿಗೆ ಬಿನ್ನವಿಸಿದರು. ಆದರೆ ವಿಕ್ರಮಾಂಕನು ಬಹು ತೀಕ್ಷ್ಣ ಪ್ರಕೃತಿಯವನು. ಒಂದುಬಾರಿ ತಾನು ಪುನಃ ಅವನ ವಶದಲ್ಲಿ ಸಿಕ್ಕಿದರೆ, ಘಾತುಕನೂ ಲೋಭಾಂಧನೂ ಆದ ಅವನು ತನ್ನನ್ನು ನಿರ್ಬಂಧಿಸಿ ಸೆರೆಯಲ್ಲಿಟ್ಟೋ ಅಥವ ಕೊಂದೋ ಎಂತೂ ತನ್ನ ಹಗೆಯನ್ನು ತೀರಿಸಿಕೊಳ್ಳದೆ ಬಿಡನೆಂದೆಣಿಸಿ, ಆ ಆಹ್ವಾನವನ್ನು ನಿರಾಕರಿಸಿದನು. ಒಡನೆ ಅವರು ಆತನನ್ನು ನಿರ್ಬಂಧದಿಂದ ಕರೆದೊಯ್ಯುವಂತಹ ತಮ್ಮ ಉದ್ದೇಶವನ್ನು ತೋರ್ಪಡಿಸಿಕೊಂಡರು. ಅದನ್ನು ಕಂಡು ಧೀರೋದಾತ್ತನಾಯಕನಾದ ಅವನ ದೇಹದ ರಕ್ತವೆಲ್ಲಾ ಕಾಯ್ದು ಕುದಿದುಹೋಯಿತು. ಪ್ರಳಯ ಭೈರವನಂತೆ ಕೋಪೋದ್ದೀಪಿತನಾಗಿ ಶತ್ರುಸೈನ್ಯದಮೇಲೆ ಏರಿಹೋಗಲು ತನ್ನ ಸೇನೆಗೆ ಆಜ್ಞೆಯಿತ್ತನು. ಸರಿ, ಮುಂದೆ ಕೇಳಬೇಕೇನು ? ವಿಕ್ರಮಾಂಕನ ಸೈನ್ಯವು ಕಲ್ಯಾಣದಿಂದ ಬಂದ ಸೋಮೇಶ್ವರನ ದಂಡನ್ನು ಮಾರಿಯ ಬಳಗಕ್ಕೆ ಒಡ್ಡಿದ ಕುರಿಮಂದೆಯೋ ಎಂಬಂತೆ ತರಿದುರುಳಿಸಿಬಿಟ್ಟಿತು. ರಕ್ತವು ಹೊಳೆಯಾಗಿ ಹರಿಯಿತು. ಹೆಣಗಳು ಮೆದೆಮೆದೆಯಾಗಿ ಬಿದ್ದುವು. ಮಜ್ಜೆಮಾಂಸಗಳ ಕೆಸರಿನಿಂದ ರಣಭೂಮಿಯು ಭಯಂಕರವೆನ್ನಿಸಿತು. ಕಲ್ಯಾಣದಿಂದ ರಾಜಪುತ್ರನಮೇಲೆ ದಂಡೆತ್ತಿ ನಡೆದ ಸೈನ್ಯದಲ್ಲಿ ಮುಕ್ಕಾಲು ಭಾಗಕ್ಕೆ ಕಡಮೆಯಿಲ್ಲದೆ ರಣದೇವತೆಗೆ ಬಲಿಯಾಗಿ, ಮಿಕ್ಕವರು ಗಾಯವಡೆದು ಉಸಿರುವೆಣಗಳಾಗಿ ಊರನ್ನು ಸೇರಿಕೊಂಡರು. ಭುವನೈಕಮಲ್ಲ ಸೋಮೇಶ್ವರನು ತನ್ನಾಪರಾಜಯದಿಂದ ಹತಾಶನಾದರೂ, ಮಹಾದುರಭಿಮಾನಿಯಾದುದರಿಂದ ಅದನ್ನು ಮೇಲೆ ತೋರ್ಪಡಿಸಿಕೊಳ್ಳದೆ, ಶ್ರೀಮದ್ಗಾಂಭೀರ್ಯವನ್ನು ವಹಿಸಿ-'ಹೋದರೆ ಹೋಗಲಿ; ಅವರಿಂದಾಗಬೇಕಾದುದೇನು ?' ಎಂದು ನುಡಿದು, ತನ್ನಮಟ್ಟಿಗೆ

ತಾನೇ ಸಮಾಧಾನ ಮಾಡಿಕೊಂಡನು. ಆದರೆ ಅಂದಿನಿಂದ ವಿಕ್ರಮಾಂಕನಮೇಲೆ ಬದ್ಧ ದ್ವೇಷವು ಮಾತ್ರ ಏರ್ಪಟ್ಟಿತು.



## ಅಧ್ಯಾಯ ೩ "ಸಿಂಹಾಸನಾರೋಹಣ"

ರಣಧೀರನಾಗಿದ್ದರೂ, ಶತ್ರುಭೀಕರನಾಗಿದ್ದರೂ, ಅದ್ವಿತೀಯ ಶೂರನಾಗಿದ್ದರೂ ವಿಕ್ರಮದೇವನು ಕ್ರೂರಿಯಾಗಿರಲಿಲ್ಲ, ಹಟಮಾರಿಯಾಗಿರಲಿಲ್ಲ, ಸ್ವಾರ್ಥಸಾಧಕನಾಗಿರಲಿಲ್ಲ. ಆತನ ಮನಸ್ಸು ಬಹು ಮೃದುವಾದುದು. 'ವಜ್ರಾದಪಿ ಕಠೋರಾಣಿ, ಮೃದೂನಿ ಕುಸುಮಾದಪಿ' ಎಂಬಂತೆ ಮಹಾತ್ಮರ ಮನಸ್ಸು ಕಾರಣಾಂತರಗಳಿಂದ ವಜ್ರಕ್ಕಿಂತ ಕಠೋರವಾಗಿರುವಂತೆ ಕಂಡುಬಂದರೂ, ಸ್ವಾಭಾವಿಕವಾಗಿ ಕುಸುಮಗಳಿಗಿಂತಲೂ ಮೃದುವಾಗಿರುವುದು ಸುಳ್ಳಲ್ಲ! -'ಅಕ್ಕಟಾ, ತಂದೆಯು ಮೃತನಾದನು. ನಿಷ್ಕಾರಣವಾಗಿ ಅಣ್ಣನು ದ್ವೇಷಿಯಾದನು! ಜನ್ಮಭೂಮಿಯಿಂದ ಉಚ್ಚಾಟನೆಯಾಯಿತು. ಬಂಧು ಬಾಂಧವರು ದೂರವಾದರು. ಮಹದ್ವಂಶದಲ್ಲಿ ಸೋದರ ಸೋದರಿಯರ ಮಧ್ಯೆ ಹುಟ್ಟಿದ ನಾನು ಇಂದು ಏಕಾಕಿಯಾದನಲ್ಲಾ! ಇದಾವ ಜನ್ಮದ ದುಷ್ಕರ್ಮ ಫಲವಿರಬಹುದು?' ಎಂದು ವಿಕ್ರಮನು ತನ್ನ ಮಾತೃಭೂಮಿಯ ಸರಹದ್ದನ್ನು ದಾಟಿ ಮುಂದು ಮುಂದಕ್ಕೆ ಹೋಗುವಾಗ ಮನಸ್ಸಿನಲ್ಲಿ ಚಿಂತಿಸುತ್ತಾ ಹೋಗುತ್ತಿದ್ದನು. ನಿಲ್ಲಲಿಕ್ಕೊಂದು ಸ್ಥಳವಿಲ್ಲ. ಮನೆಯಿಲ್ಲ, ಮಠವಿಲ್ಲ. ಆತನ ಆಗಿನ ಸ್ಥಿತಿಯು ಬಹುಪರಿತಾಪಕರವಾಗಿದ್ದಿತು. ಆದರೆ, ವಿಕ್ರಮಾಂಕನು ವೀರಾಗ್ರಣಿಯಲ್ಲವೆ? ಸಿಂಹವಿಕ್ರಮನಲ್ಲವೆ? ಎಷ್ಟುಹೊತ್ತು ಯೋಚಿಸಿ ಕೊರಗುತ್ತಾ ಕುಳಿತಿದ್ದನು! ಒಡನೆ ತನ್ನ ಪೂರ್ವ ಶತ್ರುವಾದ ಚೋಳರಾಜನಮೇಲೆ ದಂಡೆತ್ತಿ ನಡೆದು ಮುರಿದುಬಿದ್ದ ತನ್ನ ಅದೃಷ್ಟ ಸೌಧವನ್ನು ಪುನಃ ಜೀರ್ಣೋದ್ಧಾರಗೊಳಿಸಲು ಸಾಧ್ಯವೇ ಎಂದು ನೋಡೋಣವೆಂಬ ಯೋಚನೆಯುಂಟಾಯಿತು. ಸೈನ್ಯಕ್ಕೆ ಆ ಕಡೆಗೆ ತಿರುಗುವುದಕ್ಕೆ ಆಜ್ಞೆಯಾಯಿತು. ಮಾರ್ಗದಲ್ಲಿ ಬನವಾಸಿಯು ಸಿಕ್ಕಿತು. ಅಲ್ಲಿಗೆ ಅರಸಾದ ಜಯಕೇಶಿಯೆಂಬ

ಕದಂಬರಾಜನು, ವಿಕ್ರಮಾಂಕನ ಕೀರ್ತಿಯನ್ನು ಈ ಮೊದಲೇ ಕೇಳಿದ್ದ
ನಾದುದರಿಂದ ಅವನನ್ನು ಎದುರಿಸಲಿಚ್ಛೆಗೊಳ್ಳದೆ ಉಚಿತ ಗೌರವದಿಂದ
ಕಂಡು ಕಪ್ಪಕಾಣಿಕೆಗಳನ್ನೊಪ್ಪಿಸಿದನು. ವಿಕ್ರಮಾಂಕನು ಕದಂಬರಾಜನ
ಸೌಜನ್ಯವನ್ನು ಕುರಿತು ಪರಮಸಂತುಷ್ಟನಾಗಿ ಆತನಿಗೆ ಅಭಯಪ್ರದಾನ
ಮಾಡಿ ಮುಂದೆ ಹೊರಟನು. ಗೋವಾಪಟ್ಟಣವನ್ನು ರಾಜಧಾನಿಯಾಗಿ
ಮಾಡಿಕೊಂಡು ಮಲಯಪ್ರಾಂತವನ್ನು ಪಾಲಿಸುತ್ತಿದ್ದೊಬ್ಬ ರಾಜನು ಭು
ವನ ವಿಕ್ರಮನಾದ ವಿಕ್ರಮಾಂಕನು ಅಗಣಿತ ಸೇನೆಯೊಂದಿಗೆ ಬರುತ್ತಿ
ರುವನೆಂಬ ವಾರ್ತೆಯನ್ನು ಕೇಳಿ, ಪ್ರತಿಭಟಿಸದೆ ವಿಶೇಷ ಧನಕನಕಗಳ
ನ್ನೂ ಅಮೌಲ್ಯವಸ್ತು ವಿಶೇಷಗಳನ್ನೂ ಸಮರ್ಪಿಸಿ ಗೌರವಿಸಿದನು.
ವಿಕ್ರಮಾಂಕನು ಆ ಕಾಣಿಕೆಯನ್ನೂ ಸ್ವೀಕರಿಸಿ ಮುಂದೆ ಪ್ರಯಾಣ ಬೆಳೆಸಿ
ದನು. ಮಾರ್ಗದಲ್ಲಿದ್ದ ಆಳುಪ ಮತ್ತು ಕೇರಳ ದೇಶಗಳ ಅರಸರೂ
ಹಿಂದಿನ ಈರ್ವರು ರಾಜರಂತೆಯೇ ವಿಧೇಯರಾಗಲು, ವಿಕ್ರಮನು ಪರಮ
ಸಂತುಷ್ಟನಾಗಿ, ಅವರೆಲ್ಲರನ್ನೂ ಉಚಿತ ಗೌರವದಿಂದ ಕಂಡು, ಪ್ರಿಯವಚ
ನಗಳನ್ನು ನುಡಿದು ಸಂತೋಷಪಡಿಸಿದನು. ದಿಕ್ಕು ದೆಸೆಯರಿಯದೆ, ನಿರ್ಧ
ನನಾಗಿ ಹೊರಟಿದ್ದ ತನಗೆ, ಹೀಗೆ ನಾಲ್ಕು ರಾಜ್ಯಗಳವರು ಕೊಟ್ಟ ಅಪಾರ
ಧನವು ಜೀವದಾನ ಮಾಡಿದಂತೆ ಇರಲು, ವಿಕ್ರಮಾಂಕನು ಧೈರ್ಯದಿಂದ
ಮುಂದೆ ಪ್ರಯಾಣಮಾಡಿ ಚೋಳರಾಜ್ಯವನ್ನು ಹೊಕ್ಕನು.

ಅಕಸ್ಮಾತ್ತಾಗಿ ಮಹದ್ಭೂತದಂತೆ ಬಂದು ಎದುರಿಗೆ ನಿಂತ ವಿಕ್ರ
ಮಾಂಕನ ಸೈನ್ಯಶರಧಿಯನ್ನು ಕಂಡೊಡನೆಯೇ ಚೋಳರಾಜನು ನಿರ್ವಿ
ಣ್ಣನಾಗಿಹೋದನು. ಅಂತಹ ಅಪಾರ ಸೈನ್ಯವನ್ನು ಎದುರಿಸಿ ಹೇಗೆ
ಪರಿಣಾಮವಾಗುವುದೆಂಬುದು ತೋರಲಿಲ್ಲ. ರಾಜ್ಯಕಾಮಿಯಾಗಿ ಬಂದಾ
ಚಾಲುಕ್ಯವೀರನು, ಕೇವಲ ಧನರೂಪ ಕಾಣಿಕೆಯಿಂದ ತೃಪ್ತಿಹೊಂದಿ
ಹಿಂದಿರುಗಲಾರನೆಂದು ಚೋಳರಾಜನಿಗೆ ತೋರಿತು. ಒಡನೆ, ಏನುಮಾ
ಡುವುದೆಂದು ಆಪ್ತೇಷ್ಟರಲ್ಲಿ ಯೋಚಿಸಿದನು. ಹಿಂದಿನಿಂದಲೂ, ಚಾಲುಕ್ಯ
ವಂಶಕ್ಕೂ ಚೋಳವಂಶಕ್ಕೂ ಯುದ್ಧಸಂಬಂಧ ಮಾತ್ರವಲ್ಲ - ಶರೀರ ಸಂ
ಬಂಧವೂ ನಡೆದಿದ್ದುದುಂಟೆಂದು ಈವರೆಗೇ ತಿಳಿದಿದೆಯಲ್ಲವೆ ? ರಾಜನ
ಹಿತಚಿಂತಕರು, ಆ ಚಾಲುಕ್ಯವೀರನೊಂದಿಗೆ ಶರೀರ ಸಂಬಂಧಮಾಡಿ, ಅವ

ಕಳುಹಿಸಿದನು. ವಿಕ್ರಮಾಂಕನು ಮಾಳವೇಶ್ವರನ ಶತ್ರುಗಳೊಂದಿಗೆ ಭಯಂಕರ ಕದನವನ್ನೆಸಗಿ, ಅವರ ಚತುರಂಗ ಸೈನ್ಯವನ್ನೂ ರಣರಂಗದಲ್ಲಿ ಧೂಳನ್ನಾಗಿ ಹಾರಿಸಿ ವಿಜಯಹೊಂದಿದನು. ಮಾಳವರಾಜ್ಯವು ಇಂತು ಸ್ವಾಧೀನವಾಗಲು, ಅದರ ಗಾದಿಯಮೇಲೆ ತನಗೆ ಶರಣು ಬಿದ್ದಿದ್ದ ರಾಜನನ್ನೇ ಕೂಡಿಸಿ, ಪಟ್ಟಾಭಿಷೇಕ ಮಾಡಿ, ತರುವಾಯ ತನ್ನ ವಿಜಯಯಾತ್ರೆಯನ್ನು ಹಾಗೆಯೇ ಮುಂದರಿಸಿದನು. ಗೌಡದೇಶ (ಬಂಗಾಳ) ಕಾಮರೂಪದೇಶ (ಅಸ್ಸಾಂ)ಗಳ ಮೇಲೂ ಧಾಳಿಯನ್ನು ನಡೆಸಿ, ಅಲ್ಲಿ ನಡೆದ ಯುದ್ಧಗಳಲ್ಲೂ ಕರ್ಣಾಟಕ ಸೈನ್ಯಕ್ಕೆ ಜಯಶ್ರೀಯನ್ನು ದೊರಕಿಸಿದನು. ತರುವಾಯ ಕೆಳಕ್ಕಿಳಿದು, ಕೇರಳದೇಶದಮೇಲೆ ಬಿದ್ದು ಜಯಸಂಪಾದನೆ ಮಾಡಿದನು. ಆದರೂ ಆ ಧೀರನ ರಣೋತ್ಸಾಹವು ಕುಂದಲಿಲ್ಲ. ಸೇನೆಯ ಪ್ರಯಾಣವು ಮುಂದರಿಸಿತು. ಸಿಂಹಳ ದ್ವೀಪದಮೇಲೆ ಏರಿಹೋದನು. ಜಗಜ್ಜೇತನಾದ ವಿಕ್ರಮಾಂಕನ ಪ್ರಬಲಸೇನೆಯು ತನ್ನ ರಾಜ್ಯದಮೇಲೆ ಸಾಗಿಬರುತ್ತಿರುವುದೆಂಬ ವಾರ್ತೆಯನ್ನು ಕೇಳಿದೊಡನೆಯೇ ಸಿಂಹಳಾಧಿಪನು-ಪಾಪ, ತಲ್ಲಣಿಸಿಹೋದನು. ವಿಕ್ರಮಾಂಕನ ವಿಕ್ರಮವನ್ನೂ ಕರ್ಣಾಟಕ ಸೈನ್ಯದ ಉಜ್ವಲ ಶೌರ್ಯ-ಪ್ರಚಾರವನ್ನು ಕೇಳಿಯೂ ತನ್ನ ಸೇನೆಯನ್ನು ರಣದೇವತೆಗೆ ಬಲಿಕೊಡಲು ಅವನು ಸಮ್ಮತಿಸದೆ, ಯುದ್ಧವಿಲ್ಲದೆಯೇ ತನ್ನ ಅಪಜಯವನ್ನು ಒಪ್ಪಿಕೊಂಡು ವಿಕ್ರಮದೇವನಿಗೆ ವಿಜಯಪತ್ರವನ್ನು ಕೊಟ್ಟುಬಿಟ್ಟನು. ವಿಕ್ರಮಾಂಕನು ಭೀರುವಾದ ಆತನನ್ನು ಸಂತಯಿಸಿ, ಅಲ್ಲಿಂದ ಉತ್ತರಕ್ಕೆ ಪ್ರಯಾಣಮಾಡಿ ಗಂಗೈಕೊಂಡ ಚೋಳಪುರಂ ಎಂಬ ಚೋಳರಾಜಧಾನಿಯನ್ನು ಮುತ್ತಿದನು. ಅಲ್ಲಿಯ ರಾಜನು -'ಜಗಮಲ್ಲನಾದ ವಿಕ್ರಮಾಂಕನೊಂದಿಗೆ ತನಗೆ ಯುದ್ಧವೇ' ಎಂದುಕೊಂಡು, ರಾಜಧಾನಿಯನ್ನು ಬಿಟ್ಟು ಗಿರಿ ಗುಹೆಗಳನ್ನು ಹುಡುಕಿಕೊಂಡು ಪಲಾಯನಮಾಡಿದನು. ತರುವಾಯ ವಿಕ್ರಮದೇವನು ಕಾಂಚೀಪುರವನ್ನು ಹೊಕ್ಕು ಅದನ್ನು ದೋಚಿಕೊಂಡು, ಆಂಧ್ರದೇಶದ ವೆಂಗಿ-ಚಕ್ರಕೋಟೆಗಳ ಕಡೆಗೆ ತನ್ನ ಪ್ರಯಾಣವನ್ನು ಸಾಗಿಸಿದನು.

ರಣಧೀರ ವಿಕ್ರಮದೇವನು ಹೀಗೆ ವಿಜಯಯಾತ್ರೆಗಾಗಿ ದೇಶ ದೇಶಾಂತರಗಳನ್ನು ಸುತ್ತುತ್ತಿದ್ದ ಕಾಲದಲ್ಲೇ ಇತ್ತ ಆತನ ತಂದೆಯಾದ

ಆಹವಮಲ್ಲ ಸೋಮೇಶ್ವರನು, ಚೋಳನರಾಧಿಪನಾದ ವೀರರಾಜೇಂದ್ರ ನಿಗೆ ಆಹ್ವಾನಕೊಟ್ಟು ಯುದ್ಧಕ್ಕಾಗಿ ಕರೆಯಿಸಿಕೊಂಡು, ಆತನಿಗೆ ಯು ದ್ಧಭಿಕ್ಷೆಯನ್ನೀಯಲು ಕೃಷ್ಣಾ ತುಂಗಭದ್ರೆಗಳ ಸಂಗಮಸ್ಥಳವಾದ* ಕೂ ಡಲಸಂಗಮಕ್ಷೇತ್ರವನ್ನೇ ಯೋಗ್ಯವಾದುದನ್ನಾಗೆಣಿಸಿ, ಅಲ್ಲಿಗೆ ತನ್ನ ಸೈನ್ಯದೊಂದಿಗೆ ಬಂದು ಒಂದು ತಿಂಗಳುಕಾಲ ಶತ್ರುವಿನ ಆಗಮನಕ್ಕಾಗಿ ಕಾದಿದ್ದನು. ಅಷ್ಟರಲ್ಲಿ, ಮಹಾ ಅಪಾಯಕಾರಿಯಾದ ವ್ಯಾಧಿಯು ಪ್ರಾ ಪ್ತವಾದುದೂ ಜ್ವರ ಬಾಧೆಯನ್ನು ಸಹಿಸಲಾರದೆ, ಆತನು ಕ್ಷುದ್ರಮಾನವ ನಂತೆ ಹಾಸಿಗೆಯಲ್ಲಿ ನರಳಿ ಸಂಕಟಪಟ್ಟು ಸಾಯಲು ಇಚ್ಛಿಸದೆ, ತುಂಗ ಭ ದ್ರೆಯ ಮಡಲಲ್ಲಿ ಮುಲಗಿ ಜಲಸಮಾಧಿಯಿಂದ ಪ್ರಾಣವಾಯುಗಳನ್ನು ತ್ಯಜಿಸಿದ ವಿಚಾರವೂ ಈ ಹಿಂದೆಯೇ ವರ್ಣಿತವಾಗಿದೆಯಲ್ಲವೆ?

ಆಹವಮಲ್ಲ ಸೋಮೇಶ್ವರನು ಮೃತನಾದ ತರುವಾಯ, ಮೇಲೆ ಹೇಳಿದಂತೆ, ಆತನ ಹಿರಿಯಮಗ ಸೋಮೇಶ್ವರ (೨)ನು ಭುವನೈಕಮಲ್ಲ ನೆಂಬ ಬಿರುದಿನಿಂದ ಸಿಂಹಾಸನಾರೋಹಣ ಮಾಡಿದನು. ಆಗ ಪ್ರವಾಸ ದಲ್ಲಿದ್ದ ವಿಕ್ರಮಾಂಕನು ತಂದೆಯ ಮರಣವಾರ್ತೆಯನ್ನು ಕೇಳಿ ಒಡನೆ ರಾ ಜಧಾನಿಗೆ ಬಂದನು. ಆ ವೇಳೆಗೆ ತನ್ನ ಅಣ್ಣನು ಪಟ್ಟಾಭಿಷಿಕ್ತನಾಗಿದ್ದುದ ರಿಂದ, ವಿಶಾಲಮತಿ ವಿಕ್ರಮಾಂಕನು ತನ್ನ ರಾಜ್ಯಭಾಗಕ್ಕಾಗಿ ವ್ಯವಹಾರ ಮಾಡಲಿಚ್ಛಿಸದೆ, ಆತನನ್ನೇ ರಾಜನಾಗಿ ಅಂಗೀಕರಿಸಿ, ತನ್ನ ವಿಜಯ ಯಾತ್ರೆಯಿಂದ ಲಬ್ಧವಾಗಿದ್ದ ಧನಕನಕಾದಿ ಭಂಡಾರವನ್ನೆಲ್ಲ ಆತನ ಪಾ ದಕ್ಕೇ ಒಪ್ಪಿಸಿದನು. ತಮ್ಮನ ಸೌಜನ್ಯವನ್ನು ಕಂಡು, ಸೋಮೇಶ್ವರನಿಗೆ ಬಹು ಸಂತೋಷವಾಯಿತು. ಆ ಕಾಣಿಕೆಯನ್ನೆಲ್ಲ ಪ್ರೀತಿಯಿಂದ ಸ್ವೀಕ ರಿಸಿ, ಶೂರನೂ ಉದಾರಿಯೂ ಆದ ವಿಕ್ರಮಾಂಕನನ್ನು ಉಚಿತ ವಚನಗ ಳಿಂದ ಆದರಿಸಿದನು.

ಭುವನೈಕಮಲ್ಲ ಸೋಮೇಶ್ವರನು ರಾಜ್ಯಭಾರವನ್ನು ವಹಿಸಿ, ತನ್ನ ಆಳ್ವಿಕೆಯನ್ನು ಆರಂಭಿಸಿದನು. ಆದರೇನು, ಆತನ ಸ್ವಭಾವವು ಉದಾ

---

*ಆಹವ ಮಲ್ಲನು ಜಲಸಮಾಧಿಹೊಂದಿದ ಸ್ಥಳವು ಹರಿಹರಕ್ಕೆ ಸಮೀಪದಲ್ಲಿರುವ ಕುರು ವತ್ತಿ ಎಂಬ ಊರಿನ ಬಳಿ ಎಂದೂ ಹೇಳುವರು.

ಕರವಾದುದಲ್ಲ. ಅವನು ಪ್ರಜಾಪ್ರೇಮಿಯಲ್ಲ. ಏಳು ವರ್ಷಕಾಲ ರಾಜ್ಯಾಧಿಪತ್ಯ ಮಾಡಿದನಾದರೂ ಆತನ ಆಳ್ವಿಕೆಯು ಪ್ರಜೆಗಳಿಗೆ ಸುಖಕರ ವಾಗಿರಲಿಲ್ಲ. ಸೋಮೇಶ್ವರನು ವಿಷಯ ಲೋಲುಪನು. ಸ್ವೇಚ್ಛಾ ಪ್ರವರ್ತ ಕನು. ರಾಜ್ಯಾಡಳಿತಗಳಲ್ಲಿ ಮಂತ್ರಿ ಮೊದಲಾದ ಮುಖ್ಯಾಧಿಕಾರಿಗಳ ಸಲ ಹೆಗೂ ಕಿವಿಗೊಡದೆ, ಅವನು ತನ್ನ ಮನಬಂದಂತೆ ನಡೆಯುತ್ತಿದ್ದನು. ಜೀವಿತಕ್ಕೊಂದು ಧ್ಯೇಯವಿಲ್ಲದೆ, ಮನಬಂದಂತೆ ನಡೆವವನ ಚಿತ್ತವೃತ್ತಿ ಯೆಂಥದೆಂದು ತಿಳಿದು, ಅದನ್ನನುಸರಿಸಿ ನಡೆಯುವುದು ಯಾರಿಂದ ಸಾಧ್ಯ? ಪ್ರಜೆ ಪರಿವಾರಗಳವರೂ, ಮಂತ್ರಿ ಸಾಮಂತರೂ ಸೋಮೇಶ್ವರನ ಕೆಲದಿ ನಗಳ ಆಳ್ವಿಕೆಯಲ್ಲೇ ಅಸಂತುಷ್ಟರಾದರು. ತನ್ನ ಆಳ್ವಿಕೆಯು ಪ್ರಜೆಗ ಳಿಗೆ ಸುಖದಾಯಕವಾಗಿಲ್ಲವೆಂಬುದನ್ನು ತಿಳಿದರೂ ರಾಜನು ಅದನ್ನು ತಿದ್ದಿಕೊಳ್ಳಲು ಪ್ರಯತ್ನಿಸಲಿಲ್ಲ. ಸಾಲದುದಕ್ಕೆ ಅವನು ತನ್ನ ದುರ್ಗು ಣಗಳ ಫಲವಾಗಿ ಶೂರರಾದ ತನ್ನ ತಮ್ಮಂದಿರ ಬೆಂಬಲವನ್ನೂ ಕಳೆದು ಕೊಂಡನು. ವಿಕ್ರಮಾಂಕನ ರಣೋತ್ಸಾಹ, ರಣಪಾಂಡಿತ್ಯಗಳು ತಂದೆ ಯಾದ ಆಹವಮಲ್ಲನ ಕಾಲದಿಂದಲೂ ಪ್ರಖ್ಯಾತವಾಗಿದ್ದುವಲ್ಲವೆ ? ವೀರ ನೂ ಉದಾರಿಯೂ ಪ್ರಜಾವತ್ಸಲನೂ ಆಗಿದ್ದ ವಿಕ್ರಮದೇವನನ್ನು ಪ್ರಜೆ ಗಳು ಮೆಚ್ಚಿಕೊಂಡಿದ್ದರು. ಹಾಗೆ ಪ್ರಜೆಗಳ ಪ್ರೀತಿ ವಿಶ್ವಾಸಗಳಿಗೆ ಪಾ ತ್ರನಾಗಿದ್ದ ತನ್ನ ಸ್ವಂತ ತಮ್ಮನಾದ ವಿಕ್ರಮಾಂಕನನ್ನು ಸೋಮೇಶ್ವರ (ನ)ನಾದರೋ ಅಸೂಯಾದೃಷ್ಟಿಯಿಂದ ನೋಡುತ್ತಿದ್ದನು. ಅವನು ವೀರನಾಗಿರುವುದೂ, ಉದಾರಿಯಾಗಿರುವುದೂ, ಪ್ರಜಾವತ್ಸಲನಾಗಿರುವು ದೂ ಎಂದಿಗಿದ್ದರೂ ತನಗೇ ಅಪಾಯಕಾರಿಯೆಂಬುದು ಅವನ ಅಂಜಿಕೆಗೆ ಕಾರಣವಾಗಿದ್ದಿತು. ತನ್ನ ಕ್ಷುದ್ರ ಸ್ವಭಾವಕ್ಕೆ ನೇರವಿರುದ್ಧವಾದ ಸದ್ಗು ಣಗಳಿಂದ ಅಲಂಕೃತನಾದ ಅವನು ಜೀವಿಸಿರುವವರೆಗೆ ತನಗೂ ತನ್ನ ಆ ಳ್ವಿಕೆಗೂ ಕ್ಷೇಮವಿಲ್ಲವೆಂಬುದೇ ಆ ಸ್ವಾರ್ಥಿಯ ಎಣಿಕೆಯಾಗಿತ್ತು. ಆದರೆ ಧೀರನಾದ ವಿಕ್ರಮಾಂಕನಾದರೋ ತಮ್ಮಣ್ಣನನ್ನು ಆ ದೃಷ್ಟಿಯಿಂದ ನೋಡುತ್ತಿರಲಿಲ್ಲ. ಉದಾರ ಹೃದಯದ ನಮ್ಮ ಕಥಾನಾಯಕನು, ಪಿತ್ರಾ ರ್ಜಿತವಾದ ಆ ಆಸ್ತಿ ಸಂಪಾದನೆಗೆಂದು, ಏಕಮಾತೃಗರ್ಭದಿಂದ ಹು ಟ್ಟಿಬಂದ ಅಣ್ಣತಮ್ಮಂದಿರಾದ ತಾವು ಬಡಿದಾಡುವುದಾಗಲೀ ಅಥವ

ವಾಗ್ವ್ಯವಹಾರ ನಡೆಯಿಸುವುದಾಗಲೀ ಗೌರವ ಹಾನಿಕರವೆಂದು ಭಾವಿಸಿದ್ದನು. ವಿಸ್ತಾರವಾದ ಆ ಚಾಲುಕ್ಯ ರಾಜ್ಯವನ್ನು ಪಿತ್ರಾರ್ಜಿತವೆಂದು ಹೇಳಿತಲ್ಲವೆ ? ಅದು ತಂದೆಯಾದ ಆಹವಮಲ್ಲ ಸೋಮೇಶ್ವರನ ಕಾಲದಲ್ಲಿ ಸಂಪಾದಿಸಲ್ಪಟ್ಟಿತೆಂಬುದರಿಂದ ಹಾಗೆ ಹೇಳಬೇಕಲ್ಲದೆ ನ್ಯಾಯವಾಗಿ ನೋಡಿದರೆ, ವಿಕ್ರಮಾಂಕನ ಸಂಬಂಧದಲ್ಲಿ ಅದನ್ನು ಸ್ವಾರ್ಜಿತವೆಂದು ಕರೆಯುವುದೇ ಹೆಚ್ಚು ಸಮಂಜಸ. ಏಕೆಂದರೆ ಆಹವಮಲ್ಲ ಸೋಮೇಶ್ವರನ ಕಾಲದಲ್ಲಿ ನಡೆದ ಸಕಲ ವಿಜಯ ಯಾತ್ರೆಗಳಲ್ಲಿ, ವಿಕ್ರಮಾಂಕನ ಪ್ರವೇಶವಿಲ್ಲದೆ,-ಮುಖ್ಯಪಾತ್ರವಿಲ್ಲದೆ ನಡೆದುದೊಂದಾದರೂ ಇರಲಿಲ್ಲ. ಆದುದರಿಂದ ವಿಕ್ರಮಾಂಕನು ತಂದೆಯ ತರುವಾಯ ಆ ರಾಜ್ಯವನ್ನು ತಾನೇ ತೆಗೆದುಕೊಂಡು ಆಳತೊಡಗಿದ್ದರೆ, ನ್ಯಾಯಕ್ಕೆ ಯಾವ ಬಗೆಯ ಪ್ರತಿಬಂಧಕವೂ ಉಂಟಾಗುವಂತಿರಲಿಲ್ಲ. ಆದರೆ ವಿಕ್ರಮನು ಬಹು ಉದಾರಿಯೆಂಬುದೂ ಭ್ರಾತೃವತ್ಸಲನೆಂಬುದೂ ತಿಳಿಯುವುದಲ್ಲವೆ ? ಆತನು ಗೇಣು ನೆಲಕ್ಕಾಗಿ ತನ್ನ ಅಣ್ಣನೊಂದಿಗೆ ಹೋರಾಡಿ ಹೇಗೆ ಬೇರೆಯಾಗಲಿಚ್ಛಿಸುವನು ? ಆತನು ಆ ರಾಜ್ಯವೆಲ್ಲವನ್ನೂ ಅವನೇ ಅನುಭವಿಸಲೆಂದು ಬಿಟ್ಟುಕೊಟ್ಟು, ನಿಸ್ಪೃಹನಾಗಿ ವಾಸಿಸಲಿದ್ದನು. ಆದರೆ ರಾಜ್ಯವೈಭವಗಳನ್ನು ಬಿಟ್ಟುಕೊಟ್ಟರೂ ವಿಕ್ರಮನು ಸುರಕ್ಷಿತವಾಗಿ ಜೀವಿಸಿರಲು ಅವಕಾಶವಿರಲಿಲ್ಲ. ತಮ್ಮಣ್ಣ ಸೋಮೇಶ್ವರನು ತನ್ನ ಪ್ರಾಣಕ್ಕೇ ಮುನಿದಿರುವನೆಂಬ ವಾರ್ತೆಯೊಂದು ಹೊರಟಿತು. ಅವನ ಅಂತರಂಗ ಬಹಿರಂಗಗಳಲ್ಲಿನ ನಡೆನುಡಿಗಳು ಅದನ್ನು ಸುಳ್ಳೆನಿಸುವಂತಿರಲಿಲ್ಲ. ಆಗಲಂತೂ ವಿಕ್ರಮಾಂಕನಿಗೆ ಬಹು ಅಸಹ್ಯವೆನ್ನಿಸಿತು. ಅಂತಹ ಕೃತಘ್ನ ಅಣ್ಣನನ್ನು ಅನುಸರಿಸಿಕೊಂಡಿರುವುದೂ, ಹಾವಿನ ಹುತ್ತದಬಳಿ ವಾಸಿಸುತ್ತಿರುವುದೂ ಎರಡೂ ಒಂದೇ ಎಂದು ತಿಳಿದು, ದೊಡ್ಡದೊಂದು ಸೈನ್ಯವನ್ನು ಜೊತೆಗೆ ತೆಗೆದುಕೊಂಡು, ತಮ್ಮನಾದ ಜಯಸಿಂಹನೂ ಜೊತೆಗೆ ಬರಲು, ಅವನನ್ನೂ ಕರೆದುಕೊಂಡು, ತನ್ನ ಅದೃಷ್ಟ ಚಕ್ರವು ಯಾವ ಮಾರ್ಗದಲ್ಲಿ ತಿರುಗಲಿರುವುದೋ ನೋಡೋಣವೆಂದುಕೊಂಡು ವಿಕ್ರಮಾಂಕನು ರಾಜಧಾನಿಯನ್ನು ಬಿಟ್ಟುಹೊರಟನು.

ನ ಪ್ರೀತಿಯನ್ನು ಸಂಪಾದಿಸಿಕೊಳ್ಳುವುದರ ದ್ವಾರಾ, ಈಗ ರಾಜ್ಯಕ್ಕೆ ಪ್ರಾಪ್ತವಾಗಿರುವ ಅಪಮೃತ್ಯುವನ್ನು ಪರಿಹರಿಸಬಹುದೆಂದು ಸಲಹೆಕೊಟ್ಟರು. ರಾಜನಿಗೆ ವಿವಾಹಯೋಗ್ಯ ವಯಸ್ಸುಳ್ಳ ಸರ್ವಾಂಗ ಸುಂದರಿಯಾದ ಒಬ್ಬ ಕನ್ಯೆಯಿದ್ದಳು. ಚೋಳರಾಜನು ತನ್ನ ಪುತ್ರಿಯನ್ನು, ಭುವನೈಕ ವಿಕ್ರಮನಾದ ವಿಕ್ರಮಾಂಕನಿಗೆ ಪಾಣಿಗ್ರಹಣ ಮಾಡಿಕೊಟ್ಟು, ತನ್ಮೂಲಕ ರಾಜ್ಯಕ್ಕೆ ಪ್ರಾಪ್ತವಾದ ಅಪಸ್ನಿವಾರಣೆ, ಮಗಳಿಗೆ ಉತ್ತಮ ವರಾನ್ವೇಷಣೆ, ವೃದ್ಧರಾಜನಾದ ತನಗೊಂದು ಬಲವದ್ದೊಂಬಲ ಈ ಮೂರು ಕಾರ್ಯಗಳನ್ನೂ ಒಟ್ಟಿಗೇ ಸಾಧಿಸಬಹುದೆಂದು ಯೋಚಿಸಿದನು. ಒಡನೆ, ರಾಜಾಜ್ಞೆಯಿಂದ ರಾಯಭಾರಿಯು ಹೊರಟು, ವಿಕ್ರಮದೇವನನ್ನು ಸಂಧಿಸಿ, ಚೋಳರಾಜನ ಅರಿಕೆಯನ್ನು ವಿಜ್ಞಾಪಿಸಿದನು. ವಿಕ್ರಮಾಂಕನು ಕನಸ್ಸಿನಲ್ಲೂ ಎಣಿಸಿರದಿದ್ದ ಆ ವಿಚಾರವು ಆತನಿಗೆ ಅತಿಶಯ ಆಶ್ಚರ್ಯವನ್ನುಂಟುಮಾಡಿತು. ಆಜನ್ಮವೀರನೂ ಯುದ್ಧಜೀವಿಯೂ ಆದ ವಿಕ್ರಮನು, ಆ ಸ್ತ್ರೀಸಂಬಂಧ ವಾರ್ತೆಯನ್ನು ಕೇಳಿ ಪ್ರಾರಂಭಕ್ಕೆ ಒಪ್ಪಲಿಲ್ಲ. ಆದರೆ ಆಪ್ತೇಷ್ಟರು, ಗೃಹತ್ಯಾಗ ಮಾಡಿ-ರಾಜ್ಯತ್ಯಾಗಮಾಡಿ ಹೊರಕ್ಕೆ ಹೊರಟ ಆ ಸಂದರ್ಭದಲ್ಲಿ, ಭಾಗ್ಯಲಕ್ಷ್ಮಿಯಂತೆ ಒಪ್ಪಿಸಲ್ಪಡಲಿರುವ ಆ ಕನ್ಯೆಯನ್ನು ಪಾಣಿಗ್ರಹಣಮಾಡಿ, ಗೃಹಸ್ಥಧರ್ಮ ಸ್ವೀಕಾರ ಮಾಡತಕ್ಕದ್ದು ಯೋಗ್ಯವೆಂದು ಸಲಹೆಕೊಟ್ಟರು. ವಿಕ್ರಮಾಂಕನಿಗೂ ಅದು ಯುಕ್ತವೆಂದು ಬೋಧವಾಯಿತು. ಆಗಬಹುದೆಂದನು. ವಿವಾಹ ಮಂಗಳಕಾರ್ಯವು ತುಂಗಭದ್ರಾ ತೀರದಲ್ಲಿ ನಡೆಯಬೇಕೆಂದು ನಿಶ್ಚಯವಾಯಿತು. ಹಾಗೆ ಕನ್ಯಾನಿಶ್ಚಯ ಮಾಡಿಕೊಂಡು ವಿಕ್ರಮಾಂಕನು ಮುಂದೆ ಪ್ರಯಾಣಮಾಡಿದನು. ಮುಹೂರ್ತದ ವೇಳೆಗೆ ಸರಿಯಾಗಿ, ಚೋಳರಾಜನು ಸಕಲ ವಿವಾಹ ಸಾಮಗ್ರಿಗಳನ್ನೂ ಸಿದ್ಧಪಡಿಸಿಕೊಂಡು, ಕನ್ಯೆಯನ್ನೂ ಕರೆದುಕೊಂಡು, ಗೊತ್ತು ಮಾಡಿದ್ದ ಸ್ಥಳಕ್ಕೆ ಬಂದುಸೇರಿದನು. ವಿವಾಹವು ಅತಿಶಯ ವಿಜೃಂಭಣೆಯಿಂದ ನಡೆದು ಹೋಯಿತು. ಹೀಗೆ ರಣಾಂಗಣವಾಗಬೇಕಾಗಿದ್ದುದು ವಿವಾಹಮಂಟಪವಾಗಿ ಮಾರ್ಪಟ್ಟುದು ವೃದ್ಧ ಚೋಳರಾಜನಿಗೆ ಪರಮಸಂತೋಷವನ್ನುಂಟುಮಾಡಿತು.

ಈ ರಾಜಕೀಯ ವಿವಾಹದಿಂದ ಚೋಳರಾಜನಿಗೆ ಬೆಂಬಲ ದೊರೆತುದು ಮಾತ್ರವಲ್ಲ; ಪ್ರಬಲ ಶತ್ರುವಾದ ಚಾಲುಕ್ಯವೀರನು ಆತನಿಗೆ ಆಪ್ತನೂ ಬಂಧುವೂ ಆಗಿ ಮಾರ್ಪಟ್ಟನ; ಮಾತ್ರವಲ್ಲ; ಗೃಹತ್ಯಾಗಮಾಡಿ ಏಕಾಂಗಿಯಾಗಿ ಅಲೆಯುತ್ತಿದ್ದ ವಿಕ್ರಮಾಂಕನು ಗೃಹಸ್ಥನಾದುದು ಮಾತ್ರವಲ್ಲ;-ಅದರಿಂದ ರಾಜ್ಯದಮೇಲೂ ಬಹುಮಟ್ಟಿನ ಪರಿಣಾಮವುಂಟಾಯಿತು. ಆ ಕಾಲದಲ್ಲಿ ಚಾಲುಕ್ಯರ ಕರ್ಣಾಟಕರಾಜ್ಯ, ಆಂಧ್ರರ ವೆಂಗಿರಾಜ್ಯ, ಮತ್ತು ಚೋಳರ ತಮಿಳುರಾಜ್ಯ ಈ ಮೂರರಲ್ಲೂ ಶಾಂತತೆಯಿರಲಿಲ್ಲ. ಒಂದೊಂದು ದೇಶದ ರಾಜರೂ ಅಸಂತುಷ್ಟತೆಯಿಂದ ಕಂಡವರ ಗಂಟಲನ್ನೊತ್ತಿ ಹೇಗೆ ರಾಜ್ಯಸಂಪಾದನೆಮಾಡಿ ತಮ್ಮ ನಾಡಿನ ಸರಹದ್ದನ್ನು ವಿಸ್ತಾರಗೊಳಿಸಿಕೊಳ್ಳಬಹುದು ಎಂಬ ಯೋಚನೆಯಲ್ಲೇ ಮಗ್ನರಾಗಿದ್ದರು. ಚೋಳರಾಜನ ಮಗಳ ಮಗನಾದ ಕುಲೋತ್ತುಂಗದೇವ ಅಥವ ರಾಜೇಂದ್ರಚೋಳನು ತನಗೆ ಪಿತ್ರಾರ್ಜಿತವಾಗಿ ಪ್ರಾಪ್ತವಾದ ವೆಂಗಿರಾಜ್ಯವಲ್ಲಿ ಆಳುತ್ತಿದ್ದನು. ಅವನು ಚಿಕ್ಕಂದಿನಿಂದಲೂ ತನ್ನ ತಾಯಿಯ ತೌರುಮನೆಯಲ್ಲಿಯೇ ಬೆಳೆದು ಅಲ್ಲಿಯ ರಾಜ್ಯವಿಸ್ತಾರ ವೈಭವಾದಿಗಳನ್ನು ಕಂಡಿದ್ದವನಾದುದರಿಂದ, ಚಿಕ್ಕದಾದ ಒಂದು ವೆಂಗಿರಾಜ್ಯವನ್ನು ಮಾತ್ರ ಆಳಿಕೊಂಡಿರುವುದರಲ್ಲೇ ಸಂತುಷ್ಟನಾಗದೆ ಆ ಮಹಾ ಸಾಮ್ರಾಜ್ಯವನ್ನು ಜಯಿಸಿ ಆಳುವುದು ಹೇಗೆಂದು ಸದಾ ಕಳವಳ ಪಡುತ್ತಿದ್ದನು. ಇತ್ತ ಚೋಳರಾಜನಾದ ವೀರರಾಜೇಂದ್ರನಾದರೋ, ಉತ್ತುಂಗಸಾಹಸಿಯಾದ ಕುಲೋತ್ತುಂಗನು ಎಂದಿಗಿದ್ದರೂ ಅಪಾಯಕಾರಿಯಾದುದರಿಂದ ನೆರೆಯ ವೆಂಗಿರಾಜ್ಯದಲ್ಲಿ ಅವನನ್ನಿಟ್ಟುಕೊಂಡು ನಿಶ್ಚಿಂತೆಯಿಂದಿರುವುದು ಸರಿಯಲ್ಲವೆಂದು ಬಗೆದು, ಅವನನ್ನು ರಾಜ್ಯಚ್ಯುತನನ್ನಾಗಿಸಿ, ವೆಂಗಿಯನ್ನು ತನ್ನ ಆಡಳಿತಕ್ಕೆ ಒಳಪಡಿಸಿಕೊಂಡು, ಅಲ್ಲಿಗೊಬ್ಬ ತನ್ನ ಸಾಮಂತನನ್ನು ಅಧಿಕಾರಿಯಾಗಿ ನಿಯಮಿಸಬೇಕೆಂದು ಹವಣಿಸಿಕೊಂಡಿದ್ದನು. ಇನ್ನು ಇತ್ತ ಕರ್ಣಾಟಕದಲ್ಲಂತೂ ಸೋಮೇಶ್ವರ ಭುವನೈಕಮಲ್ಲನು ತನ್ನ ತಮ್ಮಂದಿರನ್ನು ರಾಜ್ಯದಿಂದ ಹೊರಡಿಸಿ ತಾನೇ ರಾಜ್ಯವನ್ನಾಕ್ರಮಿಸಿದ್ದುದೂ, ವಿಕ್ರಮಾಂಕನು ಅಸಂತುಷ್ಟನಾಗಿ ರಾಜ್ಯಾಕ್ರಮಣಕ್ಕೆ ಸಮಯ ನಿರೀಕ್ಷಣೆಮಾಡುತ್ತ ದೇಶದಲ್ಲಿ ಸಂಚಾರಮಾಡುತ್ತಿದ್ದುದೂ ಈ

ವರೆಗೆ ತಿಳಿದ ಅಂಶಗಳಾಗಿಯೇ ಇವೆ. ಹೀಗೆ ಪಾಲರುರಾಜ್ಯಗಳಲ್ಲೂ ಒಂದು ಬಗೆಯ ಕ್ರಾಂತಿಯು ಅಗ್ನಿಯು ಹೊತ್ತಿಕೊಂಡು ಒಳಗೇ ಹೊಗೆಯಾಡುತ್ತಿದ್ದಿತು. ಇಂತಹ ಸಂದರ್ಭದಲ್ಲಿ ಚೋಳ ರಾಜಪುತ್ರಿಯು ವಿಕ್ರಮಾಂಕದೇವನ ಮನೆಯನ್ನು ಸೇರಿದುದು ದೇಶದ ರಾಜಕೀಯ ವಿಚಾರಗಳಲ್ಲಿ ಬಹುಮಟ್ಟಿನ ವ್ಯತ್ಯಾಸವನ್ನುಂಟು ಮಾಡಲು ಸಹಾಯಕವಾಯಿತು. ಅದು ಹೇಗೆಂದು ಮುಂದೆ ನೋಡೋಣ ?

ವಿವಾಹ ಮಂಗಳಕಾರ್ಯವನ್ನು ನಡೆಯಿಸಿಕೊಂಡು, ವಿಕ್ರಮಾಂಕನು ಪತ್ನೀ ಸಮೇತನಾಗಿ ತುಂಗಭದ್ರಾ ತೀರದಲ್ಲೇ ಒಂದೆಡೆಯಲ್ಲಿ ವಿಶ್ರಮಿಸಿಕೊಂಡಿದ್ದನು ಮುಂದೆಲ್ಲಿಗೆ ಹೋಗುವುದು, ಎಲ್ಲಿ ನೆಲೆಗೊಳ್ಳುವುದು ಎಂಬ ಯಾವ ವಿಚಾರವೂ ಇನ್ನೂ ನಿಶ್ಚಯವಾಗಿರಲಿಲ್ಲ. ಹಾಗೆ ಮಾತೃದೇಶವನ್ನು ಬಿಟ್ಟು ಹೊರಗಿದ್ದರೂ, ಮನಸ್ಸಿಗೊಪ್ಪಿದ್ದ, ಅನುಕೂಲಳಾದ ಆ ಪತ್ನಿಯ ಸಹವಾಸದಿಂದ ವಿಕ್ರಮಾಂಕನು ಸಂತುಷ್ಟಾಂತರಂಗನಾಗಿ ಕೆಲದಿನಗಳು ಸಂತೋಷ ಶರಧಿಯಲ್ಲಿ ಓಲಾಡುತ್ತಾ ಅಲ್ಲಿ ವಾಸಿಸಿದ್ದನು. ವೀರರಾಜೇಂದ್ರನು ತನ್ನ ಅಳಿಯನಾದ ವಿಕ್ರಮಾಂಕನ ಸಂಬಂಧದ ಪ್ರಯೋಜನವನ್ನು ಹೊಂದಲು ಪ್ರಯತ್ನಿಸಿ, ಹಿಂದೆಯೇ ಯೋಚಿಸಿದ್ದಂತೆ ವೆಂಗಿದೇಶದ ಮೇಲೆ ದಂಡೆತ್ತಲು ಸಹಾಯಕನಾಗಿ ಬರಬೇಕೆಂದು ವಿಜ್ಞಾಪಿಸಿಕೊಂಡನು. ಯುದ್ಧವೆಂದರೆ ಒಂಟಿಗಾಲಲ್ಲಿ ನಿಂತಿರುವ ವಿಕ್ರಮದೇವನು ಅದಕ್ಕೆ ಹಿಂದೆಗೆಯುವನೇ ? ಇಬ್ಬರೂ ಒಂದಾಗಿ ದಂಡೆತ್ತಿ ನಡೆದು ಕುಲೋತ್ತುಂಗನನ್ನು ಪದಭ್ರಷ್ಟನನ್ನಾಗಿಸಿ, ಶರಣಾಗತನಾದ ಅವನ ಚಿಕ್ಕಪ್ಪನಾದ ವಿಜಯಾದಿತ್ಯನೆಂಬುವನನ್ನೇ ತಮಗೆ ಸಾಮಂತನಾಗಿರುವಂತೆ ಅಲ್ಲಿಯ ಸಿಂಹಾಸನದಲ್ಲಿ ಕುಳ್ಳಿರಿಸಿ ಹಿಂದಿರುಗಿದರು. ಕುಲೋತ್ತುಂಗನು ಪದಭ್ರಷ್ಟನಾಗಿ ಉಪಾಯತೋರದೆ ಕಲ್ಯಾಣಕ್ಕೆ ಹೋಗಿ ತನಗೆ ಸಹಾಯಕನಾಗೆಂದು ಭುವನೈಕಮಲ್ಲ ಸೋಮೇಶ್ವರನನ್ನು ಕೇಳಿಕೊಂಡನು. ತನಗೆ ವಿರೋಧಿಯಾದ ತನ್ನ ತಮ್ಮನು ಚೋಳನರೇಂದ್ರನ ಪಕ್ಷಪಾತಿಯಾಗಿರುವನೆಂಬುವನ್ನು ಕೇಳಿ, ಸೋಮೇಶ್ವರನು ಅವನನ್ನು ವಿರೋಧಿಸಲೆಳಿಸಿ, ಕುಲೋತ್ತುಂಗನ ಸಲಹೆಗೆ ಒಪ್ಪಿದನು. ಹೀಗೆ ವೇಲ್ಕಂಡ ವಿವಾಹ ಸಂಬಂಧ ನಡೆದುದು ಕಾರಣವಾಗಿ, ಆಂಧ್ರದ್ರವಿಡ

ಕರ್ಣಾಟಕಗಳಲ್ಲಿದ್ದ ಮೂರು ವಿರೋಧ ಪಂಗಡಗಳು, ಪ್ರಬಲವಾದ ಎರಡು ಶತ್ರು ಪಂಗಡಗಳಾಗಿ ನಿಂತುವು.

ವೆಂಗಿಯನ್ನು ಸಾಧಿಸಿ ಹಿಂದಿರುಗಿದ ತರುವಾಯ ಮುಂದೆ ಸ್ವಲ್ಪದಿನಗಳಲ್ಲೇ ವೀರರಾಜೇಂದ್ರ ನರಾಧಿಪನು ದುರ್ದೈವದಿಂದ ಕಾಲವಶನಾದನು. ಚೋಳದೇಶದಲ್ಲಿ ಎಂದಿನಂತೆ ಪುನಃ ಕ್ರಾಂತಿಗೆ ಆರಂಭವಾಯಿತು- ರಾಜ್ಯಕ್ಕಾಗಿ ಬಡಿದಾಟವೆದ್ದಿತು. ವಿಕ್ರಮಾದಿತ್ಯನು ಆ ವೇಳೆಯಲ್ಲಿ ಉದಾಸೀನನಾಗಿ ಸುಮ್ಮನಿರಲು ಹೇಗೆ ಸಾಧ್ಯ? ತನ್ನ ಭಾವ ಮೈದುನನ ಪಕ್ಷವನ್ನು ವಹಿಸಿ ದಂಡೆತ್ತಿ ನಡೆದು, ಪ್ರತಿಪಕ್ಷವನ್ನಡಗಿಸಿ, ಅವನನ್ನು ಚೋಳಸಿಂಹಾಸನದಮೇಲೆ ಕೂರಿಸಿ ಹಿಂದಿರುಗಿದನು. ಆದರೇನು? ಇನ್ನೂ ಅಲ್ಪವಯಸ್ಕನೂ ಅನನುಭವಿಯೂ ಆದ ಆ ಚಿಕ್ಕರಾಜನು ಅದನ್ನು ಉಳಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಸುತ್ತುಮುತ್ತಲೂ ಶತ್ರುಗಳು ವ್ಯಾಪಿಸಿದ್ದರು. ಜನಗಳಲ್ಲಿ ಅಸಂತುಷ್ಟಿಯ ಬೇಗೆಯೆಂಬುದು ಹೊತ್ತಿಕೊಂಡು ಬೇಯುತ್ತಿದ್ದಿತು. ವಿಕ್ರಮಾಂಕನು ಅವನನ್ನು ಸಿಂಹಾಸನದಮೇಲೆ ಕುಳ್ಳಿರಿಸಿ ತನ್ನ ರಾಜ್ಯಕ್ಕೆ ಹಿಂದಿರುಗಿದ ಕೆಲವು ದಿನಗಳೊಳಗಾಗಿಯೇ, ರಾಜ್ಯಭ್ರಷ್ಟತೆಯಿಂದ ರೋಷಾಕ್ರಾಂತನಾಗಿದ್ದ ಕುಲೋತ್ತುಂಗದೇವನು ವೀರರಾಜೇಂದ್ರನ ಚೋಳಸಿಂಹಾಸನಕ್ಕೆ, ಚೋಳವಂಶಜನಾದ ತನಗಲ್ಲದೆ ಮತ್ತಾರಿಗೆ ಬಾಧ್ಯತೆಯಿದೆ ಯೆಂದುಕೊಂಡು, ಕ್ರಾಂತಿಕಾರರ ಪಕ್ಷಕ್ಕೆ ಮುಖಂಡನಾಗಿ, ದಂಡೆತ್ತಿ ನಡೆದು, ವಿಕ್ರಮಾಂಕನ ಭಾವ ಮೈದುನನನ್ನು ಸಿಂಹಾಸನದಿಂದತಳ್ಳಿ, ಅವನ ಸ್ಥಾನದಲ್ಲಿ ತಾನೇ ಕುಳಿತು, ಚೋಳರಾಜ್ಯಾಧಿಪನೆಂದು ಪ್ರಕಟಿಸಿದನು.

ವಿಕ್ರಮಾಂಕನಿಗೆ ಕುಲೋತ್ತುಂಗನ ಈ ಚರ್ಯೆಯು ಲೇಶಮಾತ್ರವೂ ಸಹನೆಯಾಗಲಿಲ್ಲ. ಚೋಳರಾಜನಿಗೆ ತನ್ನ ಬೆಂಬಲವಿರುವುದೆಂಬ ಸಂಗತಿಯು ಸಂಪೂರ್ಣ ತಿಳಿದಿದ್ದರೂ, ಕುಲೋತ್ತುಂಗನು ನಿರ್ಲಕ್ಷ್ಯದಿಂದ ಹೀಗೆ ಮಾಡಿದುದರಿಂದ, ಅವನ ಅಹಂಕಾರವನ್ನಡಗಿಸುವವರೆಗೆ ವಿಶ್ರಮಿಸಬಾರದೆಂದು ಸಂಕಲ್ಪಿಸಿ, ಪುನಃ ತನ್ನ ಭಾವ ಮೈದುನನ ಸಹಾಯಕ್ಕೆಂದು ದಂಡೆತ್ತಿ ಹೊರಟನು. ವಿಕ್ರಮನಸೇನೆಯು ತನ್ನ ದೇಶದ ಮೇಲೆ ದಂಡೆತ್ತಿ ಬರುತ್ತಿದೆ ಎಂಬ ಸಂಗತಿಯು ಕುಲೋತ್ತುಂಗನಿಗೆ ತಿಳಿ

ಯಿತು. ವಿಕ್ರಮಾಂಕನ ಸೇನೆಯನ್ನು ಎದುರಿಸಿ ಗೆಲ್ಲುವ ಉಪಾಯವೇನೆಂದು ಯೋಚಿಸ ಸಾಗಿದನು. ಆಗ ಅವನಿಗೊಂದು ಮಾರ್ಗವು ಗೋಚರಿಸಿತು. ವಿಕ್ರಮನಿಗೆ ಆತನ ಅಣ್ಣನಾದ ಸೋಮೇಶ್ವರನು ವಿರೋಧಿಯಾಗಿರುವುದರಿಂದ ಈ ವೇಳೆಯಲ್ಲಿ ಅವನ ಸಹಾಯವನ್ನು ಅಪೇಕ್ಷಿಸಬಹುದೆಂದು ತೋರಿತು. ಒಡನೆ, 'ಕಾಂಚೀನಗರ ರಾಜಧಾನಿಯಮೇಲೆ ದಂಡೆತ್ತಿಬರುವ ವಿಕ್ರಮಾಂಕನ ಸೈನ್ಯವನ್ನು ಬೆನ್ನಟ್ಟಿ ಹಿಂದಿನಿಂದ ಬಂದು ಮೇಲೆ ಬೀಳಬೇಕು' ಎಂದು ಆತನಿಗೆ ಒಂದು ರಾಜಕೀಯ ಸಂದೇಶವನ್ನು ಕಳುಹಿಸಿದನು. ಮೂರ್ಖಾಗ್ರೇಸರನಾದ ಆ ಸೋಮೇಶ್ವರನು, ಆ ಮಾತನ್ನು ಮಾನ್ಯಮಾಡಿ, ಅಗಾಧ ಸೇನಾಪರಿವೃತನಾಗಿ. ತಾನೇ ದಂಡೆತ್ತಿಹೊರಟು, ತಮ್ಮನ ಸೈನ್ಯವನ್ನು ತರುಮಿಕೊಂಡು ಬಂದನು.

ಕಂಚಿಯನ್ನು ಮುತ್ತಿಗೆಹಾಕಲು ಬಂದ ವಿಕ್ರಮಾಂಕನನ್ನು ಒಂದು ಕಡೆ ತನ್ನ ಸೈನ್ಯವೂ, ಮತ್ತೊಂದು ಕಡೆ ಸೋಮೇಶ್ವರನ ಸೈನ್ಯವೂ ಎದುರಿಸಿ ಹಿಂಸಿಸತೊಡಗಿದರೆ, ಮಧ್ಯದಲ್ಲಿ ಸಿಕ್ಕ ಅವನ ಸೇನೆಯು ಇಲಿಗತ್ತರಿಯಲ್ಲಿ ಸಿಕ್ಕ ಇಲಿಯಂತೆ ಹಿಸುಕಲ್ಪಟ್ಟು ನಾಶವಾಗುವುದೆಂಬುದು ಕುಲೋತ್ತುಂಗ ಚೋಳನ ಎಣಿಕೆಯಾಗಿದ್ದಿತು. ವಸ್ತುಸ್ಥಿತಿಯಾದರೂ ಇದ್ದುದು ಹಾಗೆಯೇ! ವಿಕ್ರಮದೇವನು ಎಂದಿನಂತೆ ಏಕಮಾತ್ರ ಶತ್ರುವನ್ನು ಎದುರಿಸಬೇಕಾಗುವುದೆಂದು ತಿಳಿದು ಅದಕ್ಕೆ ತಕ್ಕಂತೆ ಸಜ್ಜಿತನಾಗಿ ಬಂದಿದ್ದನಲ್ಲದೆ, ಉಭಯ ಪಕ್ಷಗಳಲ್ಲೂ ಮತ್ತು ಎರಡು ಸೇನೆಗಳೊಂದಿಗೂ ಏಕಕಾಲದಲ್ಲಿ ಯುದ್ಧಮಾಡಬೇಕಾದ ಪರಿಸ್ಥಿತಿಯೊದಗಬಹುದೆಂದು ಕನಸುಮನಸುಗಳಲ್ಲಿ ಎಣಿಸಿರಲಿಲ್ಲ. ಆದರೆ ಹಾಗೆ ಪ್ರಾಪ್ತವಾಗಿರುವಾಗ ಮುಂದೆ ಮಾಡಬೇಕಾದ್ದೇನು? ಆಗ ಹಿಂದಿರುಗಲು ಸಾಧ್ಯವೆ? ಅಲ್ಲದೆ ರಣಭೈರವನಾದ ವಿಕ್ರಮಾಂಕನು ಶತ್ರುವಿಗೆ ಬೆನ್ನುತೋರಿಸಿ ಓಡಿಹೋಗಲು ಎಣಿಸುವನೆ? ಹಾಗೆ ತನ್ನನ್ನು ಬೆನ್ನಟ್ಟಿ ಬಂದವನು, ಕರ್ಣಾಟಕ ರಾಜನೂ, ತನ್ನ ಸ್ವಂತ ಅಣ್ಣನೂ ಆದ ಸೋಮೇಶ್ವರನೆಂಬುದು ತಿಳಿದಮೇಲೆ, ಅವನ ಬಳಿಗೆ ಒಂದು ಮಾತನ್ನು ಹೇಳಿಕಳುಹಿಸಿದನು. ಜ್ಯೇಷ್ಠಭ್ರಾತೃವು ಪಿತೃಸಮಾನನಾದುದರಿಂದ ತಂದೆಯ ತರುವಾಯ ಆ ಸ್ಥಾನದಲ್ಲಿರುವ ಅವನೊಂದಿಗೆ ಪ್ರತಿಕಕ್ಷಿಯಾಗಿ ಆಯುಧವನ್ನು ಹಿಡಿದು ನಿಂತು ಯು

ದ್ಧಮಾಡಲು ತನ್ನ ಮನಸ್ಸಿನಲ್ಲಿದ್ದ ಶಂಕೆಯನ್ನು ಅವನಿಗೆ ತಿಳಿಸಿದನು. ಮಾತ್ರವಲ್ಲ.-'ಕನ್ನಡಿಗರಾದ ನಾವು ಒಂದಾಗಿದ್ದು, ಪರಕೀಯ ರೊಡನೆ ಪ್ರಾಪ್ತವಾಗುವ ಯುದ್ಧದಲ್ಲಿ ಐಕಮತ್ಯದಿಂದ ಹೋರಾಡುವುದು ಯುಕ್ತ ವಲ್ಲದೆ, ಯಾರೊಂದಿಗೋ ಯಾವ ಕಾರಣಕ್ಕಾಗಿಯೋ ಪ್ರಾಪ್ತವಾದ ಯು ದ್ಧದಲ್ಲಿ, ಕನ್ನಡಿಗನೂ ಸಂಬಂಧಿಯೂ ಸ್ವಂತ ತಮ್ಮನೂ ಆದ ನನ್ನಮೇ ಲೆ ದಂಡೆತ್ತಿಬಂದುದು ನ್ಯಾಯವೇ ?' ಎಂದು ಹೇಳಿಕಳುಹಿಸಿದನು-'ಕ ರ್ಣಾಟಕ ಪ್ರಾಂತಕ್ಕೆಲ್ಲಾ ಏಕಮಾತ್ರ ರಾಜನಾದ ನಿನಗೆ, ಪ್ರಜೆಗಳಾದ ನಾವೆಲ್ಲರೂ ವಿಧೇಯರಾಗಿರಬೇಕು ; ಆದರೆ ಭಿನ್ನಾಭಿಪ್ರಾಯವುಂಟಾದಾಗ್ಯೆ ಉಭಯರೂ ಉದಾಶೀನ ಭಾವದಿಂದ ತಟಸ್ಥರಾಗಿಯಾದರೂ ಇರಬೇಕು. ಹೀಗಿರುವಲ್ಲಿ ನಮ್ಮ ರಾಜ್ಯಕ್ಕೆ ಸಮಾನ ಶತ್ರುವಾದ ಆ ಜೋಳನಿಗೆ ಬೆಂಬಲ ವಾಗಿ ಕನ್ನಡ ಪ್ರಜೆಯಾದ ನನ್ನ ಮೇಲೆ ಯುದ್ಧಕ್ಕೆ ಬಂದಿದ್ದೀಯಲ್ಲ-ಇದು ಯಾವ ರಾಜನೀತಿ' ಎಂದು ಕೇಳಿದನು. ಆದರೆ ವಿಕ್ರಮಾಂಕನ ನೀತಿಗೀ ತಿಗಳು ಅವನಿಗೆ ಬೇಕಾಗಲಿಲ್ಲ-ನ್ಯಾಯಗೀಯ ಕಾರಣಗೀರಣಗಳು ಅವನ ತಲೆಗೆ ಏರಲಿಲ್ಲ. ವಿಧಿಪ್ರೇರಿತನಾದ ಆ ಮೂರ್ಖಶಿಖಾಮಣಿಯು ಯುದ್ಧ ವೇ ನಿಶ್ಚಯವೆಂದು ಪ್ರತ್ಯುತ್ತರ ಕೊಟ್ಟುಬಿಟ್ಟನು. ಆ ಮಾತನ್ನು ಕೇಳ ದೊಡನೆಯೇ ವಿಕ್ರಮಾಂಕನ ದೇಹವಾದ್ಯಂತವೂ ಕಾಯ್ದುಹೋಯಿತು. ಹೃ ದಯ ರಕ್ತವು ತಕತಕನೆಂದು ಕುದಿದುಹೋಯಿತು. ಕಣ್ಣುಗಳು ಕೆಂಡಗ ಳಾದವು. ಹಲ್ಲುಗಳು ಕಟಕಟನೆಂದು ಮಸೆದುವು. ನೆಲವು ಕುಸಿಯುವಂತೆ ಒಂದು ಭಾರಿ ಪಾದಘಟ್ಟನೆಮಾಡಿ - 'ಏನು ಭುವನೈಕವಲ್ಲನರೇಂದ್ರನು ನಮ್ಮಮೇಲೆ ಯುದ್ಧವನ್ನೇ ನಿಶ್ಚಯಿಸಿರುವನೋ? ಆಗಲಿ ಏಕಾಗಬಾರದು!' ಎಂದುಕೊಂಡನು. ತರುವಾಯ ತನ್ನಲ್ಲಿದ್ದ ಸೈನ್ಯವನ್ನೇ ವಿಭಾಗಿಸಿ, ಉ ಭಯ ಭಾಗಗಳಲ್ಲೂ ಇದ್ದ ಎರಡು ಸೈನ್ಯಗಳಿಗೂ ಏಕಕಾಲದಲ್ಲಿ ಯುದ್ಧ ಕೊಡಲು ಅನುವಾಗಿ ನಿಲ್ಲಿಸಿದನು.

ಯುದ್ಧರಂಗದಲ್ಲಿ ಪರಸ್ಪರರು ಅಭಿಮುಖರಾಗಿ ಎದೆಗೊಟ್ಟು ನಿಲ್ಲುವ ವರೆಗೆ ಮಾತ್ರವೇ, ಅಣ್ಣ ತಮ್ಮ, ರಾಜ ಪ್ರಜೆ, ಹಿರಿಯ ಕಿರಿಯ ಎಂಬ ವಿಚಾರ ! ಹಾಗೆ ನಿಂತ ತರುವಾಯ ಮುಂದೆ ಆತ್ಮರಕ್ಷಣೆಗಾಗಿ ಯುದ್ಧ ಮಾಡುವುದೊಂದಲ್ಲದೆ ಬೇರೆ ಉಪಾಯವೇನಿದೆ ? ಯುದ್ಧ ಪ್ರಾರಂಭವಾ

ಯಿತು. ಉಭಯ ಸೈನ್ಯಗಳೂ, ರೋಷಾವೇಶದಿಂದ ನಿಶಿತಾಯುಧಗಳನ್ನು ಝಳಪಿಸುತ್ತಾ ಪರಸ್ಪರ ಎದುರಾದುವು. ಪದಾತಿ ಸೈನ್ಯದ ಆಯುಧಗಳ ಖಣಿಲು ಖಣಿಲೆಂಬ ಶಬ್ದವೂ, ಕುದುರೆಗಳ ಖುರಪುಟ ಧ್ವನಿಯೂ, ರಥಚಕ್ರಗಳ ಚೀತ್ಕಾರವೂ, ಕಿವಿಗಳನ್ನು ಕಿವುಡಾಗಿಸುವಂತಿದ್ದುವು. ರಣಾಂಗಣದಲ್ಲಿದ್ದ ಧೂಳಿಯು ಯೋಧರ ದೇಹಗಳಿಂದ ಸುರಿವ ರಕ್ತಧಾರೆಗಳಿಂದಲೇ ಅಡಗಿಸಲ್ಪಡುತ್ತಿತ್ತು. ಸೈನ್ಯದಲ್ಲಿ ಎತ್ತ ನೋಡಿದರೂ, ಕೈಕಾಲುಗಳನ್ನು ಕಳೆದುಕೊಂಡವರೂ, ದೇಹದಲ್ಲಿ ನಿಶಿತವಾದ ಬಾಣಗಳು ನಟ್ಟು ಸಂಕಟಪಡುವವರೂ, ಕಿವಿಮೂಗುಗಳು ಹರಿದು ವ್ಯಥೆಪಡುವವರೂ, ಮಾಡುತ್ತಿದ್ದ ಹಾಹಾಕಾರವು ಪರಿತಾಪಕರವಾಗಿ ಭಯಂಕರವೆನ್ನಿಸುವಂತಿದ್ದಿತು. ಇದುವರೆಗೆ ಅನೇಕ ಯುದ್ಧಗಳಲ್ಲಿ ಹೋರಾಡಿದ್ದನಾದರೂ, ಉಭಯಪಾರ್ಶ್ವಗಳಲ್ಲೂ ಎದುರಿಸಿ ಬಂದಿದ್ದ ಎರಡು ಸೈನ್ಯಗಳಿಗೂ ಏಕಕಾಲದಲ್ಲಿ ಮುಖಕೊಟ್ಟು ಹೋರಾಡಬೇಕಾಗಿದ್ದ ವಿಕ್ರಮನ ಅಂದಿನ ಸ್ಥಿತಿಯು ವಿಚಿತ್ರತರದ್ದಾಗಿತ್ತು. ವಿಕ್ರಮನು ತನ್ನನ್ನು ತಾನೇ ಮರೆತನು. ಮಿಂಚಿನಂತೆ ಚಪಲಗತಿಯನ್ನುಳ್ಳ ತನ್ನ ಅಶ್ವರಾಜವನ್ನೇರಿ ಕುಳಿತು ಚಕ್ರದಂತೆ ತಿರುಗುತ್ತಾ, ಈಗಿದ್ದ ಸ್ಥಳದಲ್ಲಿ ಇನ್ನೊಂದು ಕ್ಷಣಕ್ಕೆ ಕಾಣಿಸಿಕೊಳ್ಳದೆ, ಉಭಯ ಮುಖಗಳಲ್ಲಿ ಯುದ್ಧಮಾಡುತ್ತಿದ್ದ ತನ್ನ ಎರಡು ಭಾಗದ ಸೈನ್ಯಗಳನ್ನೂ ಹುರಿದುಂಬಿಸುತ್ತ, ಸಮಯ ಬಿತ್ತೆಂದರೆ ಖಡ್ಗಹತಿಯಿಂದ ಶತ್ರುಸೈನ್ಯಾರಣ್ಯವನ್ನು ಸವರುತ್ತ ರಣಭಯಂಕರನಾಗಿ, ಚೋಳಕರ್ಣಾಟಕ ಸೈನ್ಯಗಳೆರಡಕ್ಕೂ ಸಮಾನವಾಗಿ ಯುದ್ಧಕೊಟ್ಟನು. ಪುರುಷಸಿಂಹನಾದ ವಿಕ್ರಮಾಂಕನ ಶೌರ್ಯ ತೇಜಸ್ವಿತೆಗಳಿಂದ ಉಕ್ಕೇರಿದ ಶೌರ್ಯಪ್ರತಾಪ ಸಮನ್ವಿತವಾದ ಕಡುಗಲಿಗಳಿಂದ ಕೂಡಿದ ಆ ಕರ್ಣಾಟಕ ಸೈನ್ಯವೆಲ್ಲಿ? ಸಂಬಳದ ತಿರುಪೆಯ ಕಾಸಿಗೆ ಬಾಯ್ಬಿಟ್ಟುಕೊಂಡು ಜೀವಗಳ್ಳರಾಗಿ ಆಯುಧಗಳನ್ನು ಹೊತ್ತು ನಿಂತಿದ್ದ ಆ ಶತ್ರುಸೈನ್ಯವೆಲ್ಲಿ? ಒಂದೆರಡು ಗಂಟೆಗಳ ಯುದ್ಧದಲ್ಲೇ ವಿಕ್ರಮಾಂಕನ ಸೇನೆಯು ತಮಗೆ ಜೀರ್ಣಿಸದ ತುತ್ತು ಎಂಬ ಅನುಭವವು ಎರಡು ಭಾಗದ ಶತ್ರುಸೇನೆಗಳಿಗೂ ಉಂಟಾಯಿತು. ಇನ್ನು ನಿಂತರೆ ಪ್ರಾಣಗಳು ದಕ್ಕವು ಎಂಬ ಭೀತಿಯು ಕುಲೋತ್ತುಂಗನ ಮನಸ್ಸಿನಲ್ಲಿ ಉದಯಿಸಿತು. ಒಡನೆ ಯಾರಿಗೂ ಹೇಳದೆ ಆ ಚೋಳರಾಜನು ಹಿಂದೆ

ಹಿಂದೆನೋಡಿಕೊಳ್ಳುತ್ತಾ, ರಣರಂಗವನ್ನು ಬಿಟ್ಟು ಜೀವವುಳಿದರೆ ಸಾಕೆಂದು ಓಡಿಹೋದನು. ಒಂದು ಪಕ್ಷದ ಶತ್ರುವು ಹಾಗೆ ಉರುಳಿದುದು ವಿಕ್ರಮಾಂಕನಿಗೆ ಒಂದು ಭುಜವು ಬೆಳೆದಂತಾಯಿತು. ತರುವಾಯ ಇನ್ನೊಂದು ಪಕ್ಷದ ಸೈನ್ಯವನ್ನೂ ಮೂಲೆಗೊತ್ತುವುದು ಆ ವೀರಾಗ್ರಣಿಗೆ ಸಾವಕಾಶವಾಗಲಿಲ್ಲ. ಮುಂದೆ ಗಳಿಗೆಗಳಿಗೆಗೆ ಭುವನೈಕಮಲ್ಲನ ಬಲವು ಕುಗ್ಗತೊಡಗಿತು. ಆ ಸಮಯದಲ್ಲೇ ವಿಕ್ರಮಾಂಕನು ತನ್ನ ಶೌರ್ಯವನ್ನು ಇಮ್ಮಡಿಗೊಳಿಸಿಕೊಂಡು ಪ್ರಹರಿಸತೊಡಗಿದನು. ಪ್ರಳಯಕಾಲದ ವರ್ಷಧಾರೆಯಂತೆ, ವಿಚ್ಛಿತ್ತಿಯಿಲ್ಲದೆ ಸುರಿಯುತ್ತಿದ್ದ ಆ ಶರಘಾತಕ್ಕೆ ನಿಲ್ಲಲಾರದೆ ಸಮಸ್ತ ಸೈನಿಕರೂ ಪಲಾಯಿತರಾಗಿ, ಚಾಲುಕ್ಯರಾಜನು ಏಕಾಂಗಿಯಾಗಿ ನಿಂತನು. ಒಡನೆ ವೀರವಿಕ್ರಮಾಂಕನ ದೂತರು ರಾಜಾಜ್ಞೆಯಿಂದ ಸೋಮೇಶ್ವರನನ್ನು ಸೆರೆಹಿಡಿದರು. ಯಾವ ಭುವನೈಕಮಲ್ಲನು, ಸುಗುಣ ಶಿರೋಮಣಿಯಾದ ತನ್ನ ತಮ್ಮನಿಂದ ಒಮ್ಮೆ ಓಲಗಿಸಲ್ಪಟ್ಟಿದ್ದನೋ, ಇಂದು ಅದೇ ತಮ್ಮನಿಂದಲೇ ಕೈಸೆರೆ ಹಿಡಿಯಲ್ಪಟ್ಟನು.

ಹೀಗೆ ಉಭಯ ಸೈನ್ಯಗಳೂ ಪರಾಜಿತವಾಗಲು, ಯುದ್ಧವು ಪರಿಸಮಾಪ್ತವಾಯಿತು. ತರುವಾಯ ಆ ಯುದ್ಧಭೂಮಿಯಲ್ಲಿ ನಿಲ್ಲಬೇಕಾದ ಕಾರಣವು ಉಳಿಯಲಿಲ್ಲವಾಗಿ ಸೈನ್ಯಪರಿವಾರಯುಕ್ತನಾಗಿ ವಿಕ್ರಮನು ಚಾಲುಕ್ಯ ರಾಜಧಾನಿ ಕಲ್ಯಾಣ ನಗರವನ್ನು ಕುರಿತು ಪ್ರಯಾಣಮಾಡಿದನು. ಅಲ್ಲಿ ಸೋಮೇಶ್ವರನನ್ನು ರಾಜಕೀಯ ಕಾರಾಗೃಹದಲ್ಲಿ ನಿರ್ಬಂಧಿಸಿಟ್ಟುದೂ ಆಯಿತು. ತರುವಾಯ ರಾಜ್ಯಭಾರವು ಮುಂದೆ ಹೇಗೆ ನಡೆಯತಕ್ಕುದೆಂದು ಸ್ವಲ್ಪಯೋಚನೆಯುಂಟಾಯಿತು. ಆದರೆ ವೀರ ವಿಕ್ರಮನು, ಅಂತಹ ಸಂದೇಹಗಳನ್ನೆಲ್ಲಾ ತನ್ನ ಮನಸ್ಸಿನಿಂದ ಕಿತ್ತೊಗೆದು, ಮುಂದೆ ಗಂಟಿನೆಯ ಒಂದು ಶುಭದಿನದ ಶುಭಮುಹೂರ್ತದಲ್ಲಿ ತೈಲಪಾದಿ ನರೋತ್ತಮರಿಂದ ಅಲಂಕರಿಸಲ್ಪಟ್ಟಿದ್ದ ಪುರಾತನವಾದ ಸಿಂಹಾಸನವನ್ನು ಆರೋಹಣಮಾಡಿ, ಮಧ್ಯಾಹ್ನಕಾಲದ ಮಾರ್ತಾಂಡನಂತೆ ಪ್ರಕಾಶಿಸಿದನು.

## ಅಧ್ಯಾಯ ೪ "ಸ್ವರ್ಗಾರೋಹಣ"

ಪ್ರಾಣಭಯದಿಂದ ಕಲ್ಯಾಣ ರಾಜಧಾನಿಯನ್ನು ಬಿಟ್ಟು ಹೊರಟು ಹೋಗಿದ್ದ ವಿಕ್ರಮಾಂಕನು ವಿಜಯಲಕ್ಷ್ಮಿಗೆ ಹಾಣಿಗ್ರಹಣವಾಗಿ, ವಿಜೃಂಭಣೆಯಿಂದ ಪುನಃ ನಗರ ಪ್ರವೇಶ ಮಾಡಿದನು. ಒಡನೆ ಪಟ್ಟಾಭಿಷೇಕ ಮಹೋತ್ಸವಕ್ಕಾಗಿ ರಾಜಧಾನಿಯು ಗುಡಿ ತೋರಣ ಪತಾಕೆಗಳಿಂದ ಅಲಂಕೃತವಾಗಿ, ವಿಕ್ರಮಾಂಕನು ಮೇಲ್ಕಂಡಂತೆ ಸಿಂಹಾಸನಾರೋಹಣ ಮಾಡಿದನು. ಚಾಳುಕ್ಯ ಸಾಮ್ರಾಜ್ಯಕ್ಕೆ ಅಧೀನರಾಗಿದ್ದ ಮಾಂಡಲೀಕರೆಲ್ಲರೂ ಬಂದು ಕಪ್ಪಕಾಣಿಕೆಗಳನ್ನೊಪ್ಪಿಸಿ ಓಲಗಿಸಿದರು. ಯಾದವರೂ, ಕದಂಬರೂ, ರಟ್ಟರೂ, ಶಿಲ್ಹಾರರೂ, ಹೊಯ್ಸಳರೂ ವಿಕ್ರಮದೇವನ ಸಾರ್ವಭೌಮ ಪದವನ್ನು ಒಪ್ಪಿಕೊಂಡರು. ತರುವಾಯ ವಿಕ್ರಮಾಂಕನು ಶಿಲ್ಹಾರ ರಾಜಕುವರಿಯಾದ ಚಂದ್ರಲೇಖಾ ಎಂಬ ಪರಮ ಸುಂದರಿಯನ್ನು ಸ್ವಯಂವರದಲ್ಲಿ ವರಿಸಿ ವಿವಾಹವಾದನು. ದೇಶವಿದೇಶಗಳ ವಿದ್ವಾಂಸರೆಲ್ಲರೂ ಆತನ ಆಸ್ಥಾನಮಂಟಪದಲ್ಲಿ ನೆರೆದು ಆ ನರೇಶ್ವರನನ್ನು ಶ್ರೇಯೋವಂತನಾಗೆಂದು ಹರಿಸಿದರು. ರಾಜ್ಯದಲ್ಲಿನ ಆಬಾಲವೃದ್ಧರಿಗೂ ಆನಂದಕರವಾಗುವಂತೆ ಹಲವು ಉತ್ಸವಾದಿಗಳು ನಡೆದುವು. ಸಾರ್ವಭೌಮ ವಿಕ್ರಮಾಂಕನು ಬುಧವರ್ಗಕ್ಕೆ ಮಹಾದಾನಾದಿಗಳನ್ನು ಮಾಡಿ, ದೀನಾನಾಥರಿಗೆ ಯಥೇಚ್ಛ ಅನ್ನವಸ್ತ್ರಗಳನ್ನು ಕೊಡಿಸಿ ತೃಪ್ತಿಗೊಳಿಸಿದನು. ತನ್ನ ಪಟ್ಟಬಂಧಮಹೋತ್ಸವದ ಜ್ಞಾಪಕಾರ್ಥವಾಗಿ ವಿಕ್ರಮಾಂಕನು ಒಂದು ಶಕೆಯನ್ನು ಪ್ರಾರಂಭ ಮಾಡಿದನು. ಈ ಶಕೆಯು ಆತನು ರಾಜ್ಯವಾಳಿದ ಐವತ್ತೆರಡು ವರುಷ ಕಾಲವೂ ಮುಂದೆ ಕೆಲವು ದಿನಗಳೂ ನಡೆದು, ತರುವಾಯ ಬಂದ ಚಾಲುಕ್ಯ ಅರಸರು ದುರ್ಬಲರಾದುದರಿಂದ ನಿಂತುಹೋಯಿತು.

ಲೋಕದಲ್ಲಿ ಯಾವನೊಬ್ಬನು ಅಗಾಧವಾದ ಸ್ವಪ್ರಯತ್ನದಿಂದ ಸಿರಿವಂತನಾಗಲಿ, ವಿದ್ಯಾವಂತನಾಗಲಿ, ಮಹತ್ಕಾರ್ಯ ಸಾಧಕನಾಗಲಿ, ಕೀರ್ತಿವಂತನಾಗಲಿ, ಅದನ್ನು ನೋಡಿ ಸಂತೋಷಪಡುವ ಸಜ್ಜನರು ವಿರಳ-ಒಬ್ಬನ ಸಿರಿತನ, ಧವಳಕೀರ್ತಿಗಳಿಗಾಗಿ ಕರುಬುವ ನರಾಧಮರೇ ಲೋಕದಲ್ಲಿ ಹೆಚ್ಚು-ಆದರೆ ಅವರಲ್ಲೂ ಪರಮ ನೀಚರಾದ ಇನ್ನೊಂದು ತರಗತಿ

ಯುವರುಂಟು. ಅವರು ನಿಷ್ಕಾರಣವಾಗಿ ಸಜ್ಜನರ ಕೀರ್ತಿಗೆ ಕಳಂಕ ತರಲೂ, ಅವರಿಗೆ ಇಲ್ಲದಿದ್ದ ವಿಘ್ನಗಳನ್ನು ತಂದೊಡ್ಡಿ ಕೋಟಲೆಗೊಳಿಸಲೂ ಹೊಂಚಿಕೊಂಡಿರುವರು. ವಿಕ್ರಮದೇವನು ತನ್ನ ಕಿರಿಯ ತಮ್ಮನಾದ ಜಯಸಿಂಹನನ್ನು ತನ್ನೊಂದಿಗೇ ಕರೆದೊಯ್ದು ಕಷ್ಟಕಾಲದಲ್ಲಿ ರಕ್ಷಿಸಿಕೊಂಡಿದ್ದನಲ್ಲವೆ? ತನಗೆ ಸಾರ್ವಭೌಮ ಪಟ್ಟಾಭಿಷೇಕವಾದ ತರುವಾಯವೂ ಅವನನ್ನು ಕೈಬಿಡದೆ ಕದಂಬರಾಜ್ಯಕ್ಕೆ ತನ್ನ ಕಡೆಯ ಸರ್ವಾಧಿಕಾರಿಯನ್ನಾಗಿ ನಿಯಮಿಸಿದ್ದನು. ಅವನು, ತಮ್ಮಣ್ಣ ವಿಕ್ರಮಾಂಕನಿಗೆ ಸಾರ್ವಭೌಮ ಸಿಂಹಾಸನ ಪ್ರಾಪ್ತವಾದುದನ್ನೂ, ಭುವನೈಕ ಸುಂದರಿಯಾದ ಚಂದ್ರಲೇಖೆಯೊಂದಿಗೆ ಪಾಣಿಗ್ರಹಣವಾದುದನ್ನೂ, ಅವನ ಅಗಣಿತ ಐಶ್ವರ್ಯ, ನಿಷ್ಕಳಂಕ ಯಶೋವೈಭವ ಮುಂತಾದುವುಗಳಿಗೆ ಸ್ವಾಮಿಯಾಗಿರುವಿಕೆ ಮುಂತಾದುವನ್ನೂ ನೋಡಿ ಸಹಿಸಲಾರದೆ, ಆತನಮೇಲೆ ತಿರುಗಿ ಬೀಳಲು ಹವಣಿಸಿದನು. ತನ್ನ ಆಧಿಪತ್ಯಕ್ಕೊಳಪಟ್ಟಿದ್ದ ಪ್ರಾಂತದ ಪ್ರಜೆಗಳಿಂದ ಅನ್ಯಾಯವಾಗಿ ವಿಶೇಷ ಹಣವನ್ನು ಬರಮಾಡಿಕೊಂಡನು ದ್ರಾವಿಡದೇಶದ ರಾಜರೊಂದಿಗೂ, ಇತರ ಸಾಮಂತರೊಂದಿಗೂ ವ್ಯವಹಾರ ನಡೆಸಿ, ವಿಕ್ರಮಾಂಕನ ಸ್ವಂತ ಸೈನ್ಯದಲ್ಲೇ ರಾಜದ್ರೋಹದ ಬೀಜಗಳನ್ನು ಚೆಲ್ಲಿ ಹೀಗೆ ಅವನನ್ನು ಸರ್ವನಾಶಮಾಡುವ ಪ್ರಯತ್ನದಲ್ಲಿ ಮಗ್ನನಾದನು. ಅವನ ಪ್ರಯತ್ನವು ಅಷ್ಟಕ್ಕೇ ನಿಲ್ಲಲಿಲ್ಲ. ಆ ನೀಚನು ತನ್ನ ಅಣ್ಣನಿಗೆ ವಿರೋಧವಾಗಿ ದಂಡುಕಟ್ಟಿ, ಅದರೊಂದಿಗೆ ಪ್ರಯಾಣಮಾಡಿ, ಕೃಷ್ಣಾತೀರದಲ್ಲಿ ಬೀಡುಬಿಟ್ಟನು. ತನ್ನ ತಮ್ಮನು ತನ್ನಮೇಲೆ ದಂಡೆತ್ತಿ ಬಂದಿರುವನೆಂಬ ವಾರ್ತೆಯೂ, ಅವನು ಮಾಡಿದ ರಾಜದ್ರೋಹಕರವಾದ ಪಿತೂರಿಗಳ ಸಮಾಚಾರವೂ ವಿಕ್ರಮಾಂಕನಿಗೆ ತಿಳಿದುವು. ಹಾಗೆ ಮಾಡತಕ್ಕುದು ಯುಕ್ತವಲ್ಲವೆಂದು ಅವನಿಗೆ ಹೇಳಕಳುಹಿಸಿದನು. ಏಕೋದರರಾದ ತಮ್ಮಲ್ಲಿ ಹಾಗೆ ವಿರೋಧಭಾವವು ಹುಟ್ಟಿ ಬೆಳೆಯುವುದು ಕ್ಷೇಮವಲ್ಲವೆಂದು ಬುದ್ಧಿ ಹೇಳಿಸಿದನು. ಅವನನ್ನು ಆ ದುರ್ಮಾರ್ಗದಿಂದ ತಪ್ಪಿಸುವುದಕ್ಕೆ ತನ್ನಿಂದ ಸಾಧ್ಯವಿದ್ದ ಉಪಾಯಗಳಿಂದಲೆಲ್ಲ ಪ್ರಯತ್ನಿಸಿದನು. ಆದರೆ ಅದರಿಂದ ಅರೆಕಾಸಿನ ಪ್ರಯೋಜನವೂ ಉಂಟಾಗಲಿಲ್ಲ. ವಿಕ್ರಮಾಂಕನು ಕೋಪಾಕ್ರಾಂತನಾದನು. ಆದರೂ ಇತರ ಶತ್ರುಗಳಮೇಲೆ

ಕೋಪಮಾಡಿದಂತೆ, ತನ್ನ ಸ್ವಂತ ತಮ್ಮನಮೇಲೆ ಹೋಗಿ ಕೈಮಾಡುವುದೆಂದು ನಾಲ್ಕುದಿನ ತಡೆದನು. ಪುನಃ ದುರ್ಬುದ್ಧಿಯನ್ನು ಬಿಟ್ಟು ಒಳ್ಳೆಯವನಾಗೆಂದು ಬುದ್ಧಿ ಹೇಳಿಕಳುಹಿಸಿದನು. ಪ್ರತಿಯಾಗಿ ಆ ಕೇಡಿಗನು, ತಾನು ಇಳಿದಿದ್ದ ಸುತ್ತುಮುತ್ತಿನ ಪ್ರಾಂತಗಳ ಪ್ರಜೆಗಳನ್ನೆಲ್ಲ ಹಿಂಸೆಗೊಳಿಸತೊಡಗಿದನು. ಪೈರುಪಚ್ಚೆಗಳನ್ನು ಅವನ ಸೇನೆಯವರು ಧ್ವಂಸಮಾಡಿದರು. ಹಳ್ಳಿಪಳ್ಳಿಗೆ ಬೆಂಕಿ ಹಚ್ಚಿಸಿದನು. ಸಾಲದುದಕ್ಕೆ ಸಾರ್ವಭೌಮ ವಿಕ್ರಮನಿಗೇ ಅಪಮಾನಕರವಾದ ಅನೇಕ ಸಂದೇಶಗಳನ್ನೂ ಕಳುಹಿಸಿದನು. ಚಕ್ರವರ್ತಿಯು ಇನ್ನು ಸಹಿಸುವುದು ಸಾಧ್ಯವಿಲ್ಲವೆಂದುಕೊಂಡು ತನ್ನ ಸೈನ್ಯಕ್ಕೆ ಅವನ ಮೇಲೇರಿಹೋಗುವಂತೆ ಆಜ್ಞೆಮಾಡಿದನು. ಅಣ್ಣತಮ್ಮಂದಿರ ಸೈನ್ಯಗಳಿಗೆ ಭಯಂಕರ ಯುದ್ಧವು ಕೈಗಟ್ಟಿತು. ಉಭಯ ಸೈನ್ಯಗಳಲ್ಲೂ ಅನೇಕರು ಹತರಾದರು. ಕೊನೆಗಲ್ಲಿ ಜಯಸಿಂಹನ ಸೈನ್ಯವು ಸೋತು ಓಡಿಹೋಯಿತು. ಜಯಸಿಂಹನಾದರೋ, ಕಣ್ಣಿಗೆ ಬಿದ್ದರೆಲ್ಲಿ ಪ್ರಾಣಾಪಾಯ ಉಂಟಾಗುವುದೋ ಎಂದು ಭಯಗೊಂಡು-ತಲೆ ಮರಸಿಕೊಳ್ಳಲುದ್ದೇಶಿಸಿ ಕಾಡನ್ನು ಹೊಕ್ಕನು. ಆದರೆ ವಿಕ್ರಮಾಂಕನ ಪರಿವಾರದವರು, ಅವನನ್ನು ಎಲ್ಲೂ ನಿಲ್ಲಲೀಸದೆ ಬೆನ್ನಟ್ಟಿ ಸೆರೆಹಿಡಿದು ತಂದು ರಾಜನೆದುರಿನಲ್ಲಿ ನಿಲ್ಲಿಸಿದರು. ವಿಕ್ರಮನು ಆಗ ತನ್ನಾ ಶತ್ರುವನ್ನು ಏನು ಮಾಡಿದ್ದರೂ ಹೇಳಿ ಕೇಳುವವರಾರೂ ಇರಲಿಲ್ಲ. ತನ್ನ ಏಕಮಾತ್ರ ತಮ್ಮನು ಎದುರಿನಲ್ಲಿ ಪರದೇಶಿಯಂತೆ ಅಧೋವದನನಾಗಿ ಬಂಧಿತಹಸ್ತನಾಗಿ ನಿಂತಿದ್ದ ದೃಶ್ಯವು, ದಯಾಮಯವಾದ ವಿಕ್ರಮಾಂಕನ ಹೃದಯವನ್ನು ಕರಗಿಸಿ ನೀರುಮಾಡಿತು. ಆತನು ತನ್ನ ನಾಶಕ್ಕಾಗಿ, ಮಾಡಿದ ಪ್ರಯತ್ನಗಳೆಲ್ಲ ಒಂದೊಂದಾಗಿ ಜ್ಞಾಪಕ ಬಂದುವು. ಆದರೂ ಉದಾರಮತಿಯಾದ ಆ ಸಾರ್ವಭೌಮನು ಹತಾಶನಾಗಿ ನಿಂತಿದ್ದ ಆ ದುರ್ದೈವಿಯ ಮೇಲೆ ಹಟತೀರಿಸಿಕೊಳ್ಳಲಿಚ್ಛಿಸದೆ ಕ್ಷಮಿಸಿ ಬಿಟ್ಟುಬಿಟ್ಟನು.

ಇದಾದ ತರುವಾಯ ವಿಕ್ರಮಾಂಕನನ್ನು ಎದುರಿಸುವ ಹೊಸಶತ್ರುವು ಪುನಃ ಬಹುದಿನಗಳವರೆಗೆ ತಲೆಯೆತ್ತಲಿಲ್ಲ. ರಾಜ್ಯಭಾರವು ಅತಿಶಯ ವೈಭವದಿಂದ ದೇಶವಿದೇಶದ ರಾಜರಿಗೆ ಅದ್ಭುತವೆನ್ನಿಸುವಂತೆ ನಡೆದುಬಂತು. ಆ ಚಕ್ರೇಶ್ವರನ ರಾಜ್ಯವು ಸುರರಾಜನ ರಾಜ್ಯದಂತೆ ಸರ್ವ ಸಂಪ

ತ್ಸರಿಪೂರ್ಣವಾಗಿ ಕಂಗೊಳಿಸುತ್ತಿದ್ದಿತು. ಎಲ್ಲಿ ನೋಡಿದರೂ ತಿಳಿಗೊಳದೋದಕಗಳು, ಬೆಳೆದು ನಿಂತಿದ್ದ ಪೈರು ಪಚ್ಚೆಗಳು, ಫಲಪುಷ್ಪ ಭರಿತವಾದ ವೃಕ್ಷಲತೆಗಳು, ಕೊಡಹಾಲು ಕರೆವ ಹಸುಗಳ ಮಂದೆಗಳು, ಪ್ರಾಣಭಯವಿಲ್ಲದೆ, ನೆಮ್ಮದಿಯಿಂದ ಸಂಚರಿಸುವ ಇತರ ಪ್ರಾಣಿಗಳು, ಇವು ದೇಶವು ಪರಮಶಾಂತತೆಯಿಂದ ರಕ್ಷಿಸಲ್ಪಡುತಿದ್ದಿತೆಂಬುದನ್ನು ಸಹಸ್ರ ಮುಖಗಳಿಂದ ಹೊಗಳುವಂತಿದ್ದವು. ವಿಕ್ರಮಾಂಕನು ಬುಧಜನಪ್ರಿಯನಾಗಿ, ಶರಣುಬಿದ್ದವರಿಗೆ ರಕ್ಷಕನಾಗಿ, ದೀನಾನಾಥರಿಗೆ ಆಶ್ರಯದಾತನಾಗಿ, ಸರ್ವಪ್ರಾಣಿವರ್ಗದ ಹಿತಚಿಂತಕನಾಗಿ-ಹತ್ತು, ಇಪ್ಪತ್ತು, ಮೂವತ್ತು, ನಾಲ್ವತ್ತು-ಐವತ್ತು ವರ್ಷಗಳಕಾಲ ಧರ್ಮದಿಂದ ರಾಜ್ಯಭಾರಮಾಡಿ, ಆ ಚಂದ್ರಾರ್ಕ ಕೀರ್ತಿಯನ್ನು ಗಳಿಸಿದನು.

ದೀಪವು ಪ್ರಕಾಶಮಾನವಾಗಿ ಉರಿಯುತ್ತಿರುವಾಗ್ಗೆ, ಶಲಭಗಳು ಅದರ ಪ್ರಕಾಶವನ್ನು ನೋಡಿ, ಮೋಹಿತವಾಗಿ ಅದರಲ್ಲಿ ಬಂದು ಬಿದ್ದು ಸಾಯುವುದು ಸ್ವಾಭಾವಿಕವಷ್ಟೆ ! ಚಾಲುಕ್ಯರಾಜ್ಯವು ಹೀಗೆ ವೈಭವಶಿಖರದಲ್ಲಿ ಮೆರೆಯುತ್ತಿದ್ದಾಗ್ಗೆ ಅದನ್ನು ಎದುರಿಸಿ, ಅವರ ಅಧೀನತೆಯನ್ನು ತಪ್ಪಿಸಿಕೊಂಡು ಸ್ವತಂತ್ರವಾಗಲಿಚ್ಛಿಸಿ, ನಡೆಸಿದ ಪ್ರಯತ್ನವೊಂದು ಉಲ್ಲೇಖಕ್ಕೆ ಅರ್ಹವಾದುದು. ಹೊಯ್ಸಳ ವಂಶದ ವಿಷ್ಣುವರ್ಧನನೆಂಬ ರಾಜನು, ವಿಕ್ರಮನಂತೆಯೇ ಮಹತ್ವಾಕಾಂಕ್ಷಿಯಾದುದರಿಂದ ಪಾಂಡ್ಯ, ಗೋವ, ಕೊಂಕಣಗಳ ರಾಜರೊಂದಿಗೆ ಸಂಧಾನ ನಡೆಸಿ, ಅವರೆಲ್ಲರ ಬೆಂಬಲವನ್ನೂ ಪಡೆದು, ಚಾಲುಕ್ಯ ರಾಜ್ಯದಮೇಲೆ ದಂಡೆತ್ತಿದನು. ಶತ್ರುಸೈನ್ಯವು ನಿರ್ಬಾಧಕರಾಗಿ ಕೃಷ್ಣಾನದಿಯ ದಂಡೆಯವರೆಗೂ ಸಾಗಿಹೋಯಿತು. ಶತ್ರುವಿನ ಬಲವು, ಚಕ್ರೇಶ್ವರ ವಿಕ್ರಮನಿಗೂ ಸ್ವಲ್ಪ ವಿಚಾರಕರವಾಗಿದ್ದಿತಾದರೂ ಆ ಧೀರವರನು ಎದೆಗೆಡದೆ, ತನ್ನ ಬಲಭುಜದಂತಿದ್ದ ಅಚ್ಚನೆಂಬ ತನ್ನ ಸರ್ವಸೇನಾಧಿಪತಿಯನ್ನು ಹೊಯಿಸಳ ಸೈನ್ಯದಮೇಲೆ ಏರಿಹೋಗುವಂತೆ ಆಜ್ಞಾಪಿಸಿ ಕಳುಹಿಸಿದನು. ಅಚ್ಚನ ಸೈನ್ಯವು ಹೊಯಿಸಳರ ಸೈನ್ಯವನ್ನು ಹಲವೆಡೆಗಳಲ್ಲಿ ಸೋಲಿಸಿತು. ವಿಷ್ಣುವರ್ಧನನನ್ನು ಅನುಸರಿಸಿಬಂದ ಮಿಕ್ಕ ರಾಜರನ್ನೂ ಅಚ್ಚನು ಒಬ್ಬರಾದ ಮೇಲೊಬ್ಬರಂತೆ ಸೋಲಿಸಿ ರಾಜ್ಯದಲ್ಲಿನ ಜನರು ನಿರ್ಭಯವಾಗಿರುವಂತೆ ಮಾಡಿದನು. ಸೇನಾಪತಿಯ ಈ ಸಾಹಸವು, ಚಕ್ರವರ್ತಿಗೆ ಪರಮಾನಂದವನ್ನುಂ

ಟುಮಾಡಿತು. ಈ ವಿಜಯಯಾತ್ರೆಯಾದ ಮೇಲೆ ಊರಿಗೆ ಬಂದ ಸರದಾರ ಅಚ್ಚನನ್ನು ವಿಕ್ರಮಾಂಕನು ಮೆಚ್ಚಿಕೊಂಡು, ಆತನನ್ನೇ ಪುನಃ ಇತರದೇಶಗಳಮೇಲೂ ಜೈತ್ರಯಾತ್ರೆಗಾಗಿ ಕಳುಹಿಸಿದನು. ಅಚ್ಚನೂ ಚಾಲುಕ್ಯ ಸೈನ್ಯವನ್ನು ಕಳಿಂಗ, ವಂಗ, ಮಾಳವ, ಗುರ್ಜರ, ಚೇರ, ಚೋಳ ಮುಂತಾದ ರಾಜ್ಯಗಳಮೇಲೆಲ್ಲಾ ನಡೆಯಿಸಿ, ಪ್ರಯಾಣಮಾಡಿದ ಸ್ಥಳದಲ್ಲೆಲ್ಲಾ ಚಾಲುಕ್ಯ ಕರ್ಣಾಟಕ ಸೈನ್ಯದ ಪ್ರತಾಪವನ್ನು ಮೆರೆಯಿಸಿ, ತನ್ನ ಪ್ರಭು ವಿಕ್ರಮಾಂಕನ ಶೌರ್ಯಪ್ರತಾಪಗಳನ್ನೂ ಅಖಂಡ ಕೀರ್ತಿವೈಭವವನ್ನೂ, ಭರತಖಂಡದ ದಶದಿಕ್ಕುಗಳಲ್ಲೂ ಬೆಳಗಿಸಿದನು.

ವಿಕ್ರಮಾಂಕನು, ತ್ರಿಭುವನಮಲ್ಲನೆಂದು ಹೊಗಳಿಸಿಕೊಂಡವನು. ಆಹಾ ! ಈ ಬಿರುದು ಆ ಸಾರ್ವಭೌಮನಿಗೆ ಅನ್ವರ್ಥನಾಮಧೇಯವೋ ಎಂಬಂತೆ ಒಪ್ಪುತ್ತಿದೆಯಲ್ಲವೆ ! ಅಲ್ಲದೆ ಈತನಿಗೆ ಕಲಿವಿಕ್ರಮ ಮತ್ತು ಪರ್ಮಾಡಿರಾಯ ಎಂಬ ಬಿರುದುಗಳೂ ಉಂಟು. ಈತನ ಅರ್ಧ ಶತಮಾನಕಾಲದ ರಾಜ್ಯಭಾರವು ಪ್ರಜೆಗಳಿಗೆ ಎಷ್ಟು ಸುಖಮಯವಾದುದೆನ್ನಿಸಿದ್ದಿತು ಎಂಬುದನ್ನು - ಜನರು ತಮ್ಮ ಮನೆಬಾಗಿಲುಗಳನ್ನು ಮುಚ್ಚಿಕೊಳ್ಳಬೇಕೆಂಬ ಪ್ರಕೃತವೇ ಇಲ್ಲದೆ ರಾತ್ರಿಕಾಲದಲ್ಲಿ ನಿರ್ಭಯದಿಂದ ಮಲಗಿ ನಿದ್ರಿಸುತ್ತಿದ್ದರೆಂದು ಮುಂತಾಗಿ-ಮುನ್ನುಡಿಯಲ್ಲೇ ಹೇಳಲಾಯಿತಲ್ಲವೆ ? ಇಷ್ಟುಮಟ್ಟಿನ ಶಾಂತತೆ ಸಮಾಧಾನಗಳು ನೆಲೆಗೊಂಡಿದ್ದ ರಾಜ್ಯದಲ್ಲಿ, ಸಾಹಿತ್ಯವೂ ಕುಶಲ ಕಲೆಗಳೂ ಅಭಿವೃದ್ಧಿಹೊಂದಿದುವೆಂಬುದರಲ್ಲಿ ಆಕ್ಷೇಪವೇನು ? ಬಿಲ್ಹಣ ಮತ್ತು ವಿಜ್ಞಾನೇಶ್ವರ ಎಂಬಿಬ್ಬರು ಕವೀಶ್ವರರು ಚಕ್ರವರ್ತಿಯ ಪ್ರೇಮ ಪಾತ್ರರಾಗಿ ಆತನ ಬಳಿಯಲ್ಲೇ ವಾಸಿಸಿ, ಆ ಕಾಲದ ಕರ್ಣಾಟಕ ರಾಜ್ಯವೈಭವವನ್ನೂ ರಾಜಧಾನಿಯ ಸೌಂದರ್ಯವನ್ನೂ, ರಾಜರಾಜನಾದ ವಿಕ್ರಮಾಂಕ ಸಾರ್ವಭೌಮನ ಪರಮೋದಾರ ಚರಿತ್ರೆಯನ್ನೂ ಮುಕ್ತಹಸ್ತರಾಗಿ ವರ್ಣಿಸಿರುತ್ತಾರೆ. ಕಾಶ್ಮೀರ ದೇಶದ ಬ್ರಾಹ್ಮಣನಾದ ಬಿಲ್ಹಣನನ್ನು ವಿಕ್ರಮಾಂಕನು, ಆತನ ವಿದ್ವತ್ತಿಗಾಗಿ ಮೆಚ್ಚಿ ತನ್ನ ಆಸ್ಥಾನದಲ್ಲಿ 'ವಿದ್ಯಾಪತಿ' ಎಂಬ ಪೀಠವನ್ನಿತ್ತು ಗೌರವಿಸಿದ್ದನು. ವಿಜ್ಞಾನೇಶ್ವರನಾದರೋ ಮಿತಾಕ್ಷರಿ ಎಂಬ ಹಿಂದೂ ನ್ಯಾಯಶಾಸ್ತ್ರ ಗ್ರಂಥವನ್ನು ರಚನೆಮಾಡಿ ಅಜರಾಮರವಾದ ಕೀರ್ತಿ ಸಂಪಾದನೆ ಮಾಡಿದನು.

ಈ ಮಹಾರಾಯನ ಕಾಲದಲ್ಲಿ ಕಟ್ಟಿಸಲ್ಪಟ್ಟ ಹಲವು ದೇವಾಲಯಗಳು ಚಾಲುಕ್ಯರ ಕಾಲದಲ್ಲಿ ಶಿಲ್ಪಕಲೆಯು ಎಷ್ಟುಮಟ್ಟಿಗೆ ಅಭಿವೃದ್ಧಿಸ್ಥಿತಿಗೆ ಬಂದಿದ್ದಿತೆಂಬುದನ್ನು ಸೂಚಿಸಲು ಉತ್ತಮೋತ್ತಮವಾದ ಉದಾಹರಣೆಯಾಗಿದೆ. ಹೀಗೆ ಸಾರ್ವಭೌಮ ಪದವೀಧರನಾದ ವಿಕ್ರಮಾಂಕನು ಅಪ್ರತಿಹತನಾದ ವೈಭವದಿಂದ ಐವತ್ತೆರಡುವರ್ಷಕಾಲ ರಾಜ್ಯಭಾರಮಾಡಿ, ಜಗತ್ತಿನಲ್ಲಿ ಎಂದಿಗೂ ಕುಂದದ ಯಶಶ್ಚಂದ್ರಿಕೆಯನ್ನು ಬೆಳಗಿಸಿ ಕುರುಪಿತಾಮಹನಾದ ಭೀಷ್ಮಾಚಾರ್ಯನೋ ಎಂಬಂತೆ ತೊಂಬತ್ತೈದು ವರ್ಷ ವಯಸ್ಸಿನ ಆ ವೃದ್ಧನು ೧೧೨೬ನೆಯ ಸಂವತ್ಸರದಲ್ಲಿ ದಿವಂಗತನಾದನು.



## ಉ ಪ ಸಂ ಹಾ ರ

ಚಾಲುಕ್ಯಚಕ್ರೇಶ್ವರ ವಿಕ್ರಮಾಂಕನ ಕಾಲದಲ್ಲಿ ಕರ್ಣಾಟಕರಾಜ್ಯದ ಉತ್ತರದ ಮೇರೆಯು ನರ್ಮದೆಯಾಗಿಯೂ ದಕ್ಷಿಣದ ಮೇರೆಯು ಕಾವೇರಿಯಾಗಿಯೂ ಇದ್ದಿತು. ಪೂರ್ವಪಶ್ಚಿಮಗಳಲ್ಲಿ ಪೂರ್ವಪಶ್ಚಿಮಜಲಧಿಗಳೇ ಮೇರೆಗಳಾಗಿದ್ದುವು. ಈತನ ತರುವಾಯ ಮಗನಾದ ಮೂರನೆಯ ಸೋಮೇಶ್ವರನೂ, ತಂದೆಯ ಕೀರ್ತಿಗೆ ಕಳಂಕ ತರದಂತಹ ಶೌರ್ಯಪ್ರತಾಪಗಳಿಂದ ಹನ್ನೊಂದು ವರ್ಷಕಾಲ ರಾಜ್ಯಭಾರಮಾಡಿ, ಆಂಧ್ರ, ದ್ರಾವಿಡ, ಮಗಧ, ನೇಪಾಳರಾಜ್ಯಗಳನ್ನು ಜಯಿಸಿದನಂತೆ! ಅಲ್ಲದೆ ಈತನು ಸ್ವಯಂ ವಿದ್ವಾಂಸನಾಗಿ, ಮಾನಸೋಲ್ಲಾಸ ಅಥವ ಅಭಿಲಷಿತಾರ್ಥ ಚಿಂತಾಮಣಿ ಎಂಬ ರಾಜಕೀಯ ಗ್ರಂಥವನ್ನು ಬರೆದನೆಂದೂ, ಈತನಿಗೆ 'ಸರ್ವಜ್ಞಭೂಪ'ನೆಂಬ ಬಿರುದಿದ್ದಿತೆಂದೂ ವರ್ಣಿಸಲ್ಪಟ್ಟಿದೆ.

ಹೀಗೆ ಕರ್ಣಾಟಕ ರಾಜವರೇಣ್ಯರು, ತಮ್ಮ ತಮ್ಮ ವೈಭವಕಾಲದಲ್ಲಿ ಪೃಥ್ವಿಯ ಯಾವ ದೇಶಕ್ಕೂ, ಯಾವ ರಾಜ್ಯಭಾರಕ್ಕೂ ಕಡಮೆಯಿಲ್ಲದೆ ತಮ್ಮ ಮಾತೃಭೂಮಿ ಕರ್ಣಾಟಕವನ್ನು ಸಂರಕ್ಷಿಸಿ, ಶಾಂತಿಸ್ಥಾಪನೆಗೊಳಿಸಿದ್ದರೆಂಬುದನ್ನೂ, ಅವರು ಶೌರ್ಯವೀರ್ಯಗಳಲ್ಲಿ ಎಂದೂ ಯಾರಿ

ಗೂ ಹಿಂದೆ ಬಿದ್ದವರಲ್ಲವೆಂಬುದನ್ನೂ, ಪೂರ್ವ ಚರಿತ್ರೆಗಳನ್ನೂ ವಿಮರ್ಶಿಸಿ ತಿಳಿಯಬಹುದಾಗಿದೆ. 'ಹಿಂದೂ ಜನರಿಗೆ ಪೂರ್ವದ ಇತಿಹಾಸವಿಲ್ಲ' ಎಂಬ ಪರಕೀಯರ ದೋಷಾರೋಪಣೆಗೆ ಕಿವಿಗೊಡದೆ, ಕನ್ನಡಿಗರು ಸದ್ಯಃ ದೊರೆಯುತ್ತಿರುವ ಅಮೌಲ್ಯಸಾಧನಗಳಿಂದ ಪೂರ್ವೇತಿಹಾಸವನ್ನು ಸಂಗ್ರಹಿಸಿ, ತಮ್ಮ ಪ್ರಾಚೀನರು ಎಂತಹ ವೈಭವ ಪೂರ್ಣಸ್ಥಿತಿಯಲ್ಲಿ, ರಾಜ್ಯಭಾರವಮಾಡಿದವರು, ಎಂತಹ ಶೌರ್ಯವೀರ್ಯ ಸಂಪನ್ನರು ಎಂಬ ಸಂಗತಿಗಳನ್ನು ತಿಳಿದು ಉತ್ತೇಜಿತರಾಗಿ ದೇಶಾಭಿವೃದ್ಧಿ ಕಾರ್ಯಗಳಲ್ಲಿ ತೊಡಗಿ ಕಾಲಕರ್ಮ ಸಂಯೋಗದಿಂದ ಅವನತ ಸ್ಥಿತಿಗಿಳಿದಿರುವ ದೇಶಮಾತೃವನ್ನೂ, ಮಾತೃಭಾಷೆಯನ್ನೂ ಉದ್ಧರಿಸಬೇಕಾಗಿದೆ. ನಮ್ಮ ಕಥಾನಾಯಕನ ಉಜ್ವಲಜೀವಿತವು ಕನ್ನಡಿಗರಲ್ಲಿ ಅಂತಹ ಸ್ಫೂರ್ತಿಯನ್ನುಂಟುಮಾಡುವಂತೆ ದಯಾಳುವಾದ ಸರ್ವೇಶ್ವರನ ಅನುಗ್ರಹವಾಗಲಿ.

**ತಥಾಸ್ತು.**



*ಈ ಗ್ರಂಥರಚನೆಗೆ ಆವಶ್ಯಕವಾದ ಹಲವು ಬಗೆಯ ಸಾಧನಗಳನ್ನು ಒದಗಿಸಿಕೊಟ್ಟ ಮಿತ್ರವರ್ಯರೆಲ್ಲರಿಗೂ ಗ್ರಂಥಕರ್ತನ ಕೃತಜ್ಞತಾ ಪೂರ್ವಕವಾದ ವಂದನೆಗಳು.



ಮೈಸೂರು ಸಂಸ್ಥಾನದ

**ದಿವಾನ್ ಪೂರ್ಣಯ್ಯನವರು**

*Block, Kindly lent by the courtsey of*
*the Hazur Secretary to H. H. the Maharaja of Mysore.*

॥ ಶ್ರೀರಾಮಸಹಾಯಂ ॥

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

## (ಸಚಿತ್ರ ಮಾಸ ಪುಸ್ತಕಾವಳಿ)

**ಮುನ್ನುಡಿ:—**

ದಕ್ಷಿಣಭಾರತದಲ್ಲಿ ಸುಪ್ರಸಿದ್ಧವಾದ ಹಿಂದೂ ಸಂಸ್ಥಾನವೆಂದರೆ ನಮ್ಮ ಮೈಸೂರು ದೇಶವೇ! ಇದು ಹದಿನಾಲ್ಕನೆಯ ಶತಮಾನದ ಕೊನೆಯಭಾಗದಲ್ಲಿ ಯದುರಾಯರಿಂದ ಜಯಿಸಲ್ಪಟ್ಟು, ಈಗಿನ ರಾಜಮನೆತನವು ಸ್ಥಾಪಿಸಲ್ಪಟ್ಟಾಗಿನಿಂದಲೂ ಹಿಂದೂರಾಜರಿಂದಲೇ ಆಳಲ್ಪಡುತ್ತಾ ಬಂದಿತು. ಆದರೆ ಹದಿನೆಂಟನೆಯ ಶತಮಾನದ ಮಧ್ಯಕಾಲದಲ್ಲಿ, ಈ ದೇಶದಲ್ಲಿ ಮುಸಲ್ಮಾನರ ಪ್ರಾಬಲ್ಯವು ಹೆಚ್ಚಿ, ಸೈನ್ಯದ ಒಂದು ಚಿಕ್ಕ ಉದ್ಯೋಗದಲ್ಲಿ ಜೀವನಮಾಡಿಕೊಂಡಿದ್ದ ಹೈದರಲ್ಲೀಖಾನನೆಂಬಾತನು ದಿನದಿನಕ್ಕೆ ಪ್ರಬಲಿಸಿ, ಜನಬಲ ಧನಬಲಗಳನ್ನು ಗಳಿಸಿ, ಮೆಲ್ಲನೆ ಧೊರೆಗಳನ್ನು ಬದಿಗೆತಳ್ಳಿ, ತಾನೇ ಸರ್ವಾಧಿಕಾರವನ್ನೂ ಆಕ್ರಮಿಸಿಬಿಟ್ಟನು. ಹೈದರನು ಸರ್ವಾಧಿಕಾರಿಯೆನ್ನಿಸಿಕೊಂಡರೂ ಮೈಸೂರು ರಾಜಮನೆತನವನ್ನು ನಾಮಮಾತ್ರವಾಗಿಯಾದರೂ ಗೌರವಿಸುತ್ತಿದ್ದನು. ಆದರೆ ಅವನ ಕಾಲವು ತೀರಿ, ಟಿಪ್ಪೂಸುಲ್ತಾನನು ರಾಜ್ಯಾಧಿಪತ್ಯವನ್ನು ಪಡೆದಮೇಲೆ, ಮೈಸೂರರಸರ ಹೆಸರಿನಲ್ಲಿಯಾದರೂ ನಡೆಯುತ್ತಿದ್ದ ಆ ಲೇಶಮಾತ್ರ ಅಧಿಕಾರವೂ ತಪ್ಪಿಹೋಯಿತು. ಟಿಪ್ಪೂಸುಲ್ತಾನನು ಮೈಸೂರು ರಾಜಧಾನಿಯಲ್ಲಿ, ಪುರಾತನಕಾಲದಿಂದ ಇದ್ದ ಸಿಂಹಾಸನಕ್ಕೆ ಪ್ರತಿಯಾಗಿ ಒಂದು ವ್ಯಾಘ್ರಾಸನವನ್ನು ಮಾಡಿಸಿಕೊಂಡು ಅದರಮೇಲೆ ಕುಳಿತು, ತಾನೇ ಮೈಸೂರು ಸಂಸ್ಥಾನದ ನವಾಬನೆಂದು ಹೊಗಳಿಸಿಕೊಂಡನು. ಹೀಗೆ ಸಂಸ್ಥಾನವು ಸಂಪೂರ್ಣವಾಗಿ ಮಹಮ್ಮದೀಯರ ವಶವಾಗಿಹೋದಾಗ, ಅದನ್ನು ಪೂರ್ವದ ರಾಜಮನೆತನಕ್ಕೆ ದೊರಕಿಸಿಕೊಡುವ ವಿಷಯದಲ್ಲಿ, ಪೂಜ್ಯರಾದ *ಮಹಾಮಾತೃಶ್ರೀ ಲಕ್ಷ್ಮಮ್ಮಣ್ಣಿಯವರು ಪಟ್ಟಸಾಹಸವು ವರ್ಣನಾತೀತವಾದುದು. ಈ ವಿಚಾರವೆಲ್ಲವೂ ಚರಿತ್ರೆಯಲ್ಲಿ ವಿಸ್ತಾರವಾಗಿ ವರ್ಣಿತವಾಗಿದೆಯಾದುದರಿಂದ ಇಲ್ಲಿ ಪುನಃ ಪ್ರಸ್ತಾಪಿಸುವುದು ಅಪ್ರಕೃತವು.

---

*ಮಹಾಮಾತೃಶ್ರೀ ಲಕ್ಷ್ಮಮ್ಮಣ್ಣಿಯವರ ಜೀವಿತವು 'ಸುಬೋಧ ಕುಸುಮಾಂಜಲಿ ಗ್ರಂಥಮಾಲೆ'ಯ ೧೦೧ನೆಯ ಕುಸುಮವಾಗಿ ಪ್ರಕಟವಾಗಿದೆ.

ಕ್ಷೇತ್ರವನ್ನು ಪ್ರವೇಶಿಸಿ ಉದ್ಯೋಗಮಾಡತೊಡಗುವುದು ಆವಶ್ಯಕವೆಂದು ಸೂಚಿಸಲಿಳಿಸುತ್ತೇವೆ.

ಪೂರ್ಣಯ್ಯನವರು ನಮ್ಮ ಈ ದೇಶವನ್ನು ಪ್ರವೇಶಿಸುವುದಕ್ಕೆ ಹಿಂದಿನ ಅವರ ಜೀವಿತವೃತ್ತಾಂತವು ದೊರಕುವುದು ದುರ್ಲಭ. ಇದನ್ನು ಸಾಧ್ಯವಾದಷ್ಟುಮಟ್ಟಿಗೆ ದೊರಕಿಸಿ, ಅವರ ವಂಶ ಪರಿಚಯ, ಬಾಲ್ಯಜೀವಿತ ಮುಂತಾದ ವಿಚಾರಗಳನ್ನು ಇನ್ನೂ ಸ್ವಲ್ಪ ಹೆಚ್ಚಾಗಿ ಕೊಡಬೇಕೆಂದು ಪಟ್ಟ ಶ್ರಮೆಯು ವ್ಯರ್ಥವಾದುದು ಮಾತ್ರವಲ್ಲ-ಕಾಲವಿಳಂಬಕ್ಕೂ ಕಾರಣವಾಯಿತು. ಅವರು ಈ ದೇಶಕ್ಕೆ ಬಂದ ತರುವಾಯವೂ ಕೂಡ ದಿವಾನ ಪದವಿಯನ್ನು ಪಡೆವವರೆಗೆ ಅಜ್ಞಾತರಾಗಿಯೇ ಇದ್ದುದರಿಂದ ಆ ವಿಷಯದಲ್ಲಿ ನಮಗೆ ತಿಳಿದುಬರುವ ಅವರ ವಿಚಾರವಾದರೂ ಬಹು ಸ್ವಲ್ಪವೇ! ಮುಂದೆ ಅವರು ದಿವಾನರಾದ ತರುವಾಯವೇ ಅವರ ಕಾರ್ಯಕಲಾಪಗಳು ಇತಿಹಾಸ ಪ್ರಸಿದ್ಧವಾಗಿ ಸರಕಾರದ ಕಾಗದ ಪತ್ರಗಳ ರೂಪದಲ್ಲಿ ಕಾಪಾಡಲ್ಪಟ್ಟಿರುವುದರಿಂದ, ಅವರ ರಾಜಕೀಯ ಜೀವಿತದ ಎಲ್ಲಾ ವಿಚಾರಗಳೂ ದೊರಕಲು ಅವಕಾಶವುಂಟಾಗಿದೆ.

ಹಾಗೆ ದೊರೆತ ಆ ಸಂಗತಿಗಳನ್ನೇ ಯಥೋಚಿತವಾಗಿ ಸಂಗ್ರಹಿಸಿ, ಆ ಮಹನೀಯರ ಮೊದಲನೆಯ ಜೀವನ ಚರಿತ್ರೆಯಾಗಿ ಈ ಚಿಕ್ಕ ಪುಸ್ತಕವನ್ನು ಕೊಡಲಿಚ್ಛಿಸಿದ್ದೇವೆ. ನಾವು ಮೇಲೆಹೇಳಿಕೊಂಡು ಬಂದ ಕಾರಣಗಳಿಂದ ಇದು ಅವರ ಜೀವಿತದ ಬಹು ಅಪೂರ್ಣ ಚಿತ್ರವೆನ್ನಲು ಸಂಶಯವಿಲ್ಲ. ಪ್ರಾಜ್ಞರು ಈ ವಿಷಯದಲ್ಲಿ ಹೆಚ್ಚು ಸಂಗತಿಗಳನ್ನು ತಿಳಿಸುವರಾದರೆ, ಕೃತಜ್ಞತೆಯಿಂದ ಸ್ವೀಕರಿಸಿ, ಮುಂದಿನ ಮುದ್ರಣಗಳಲ್ಲಿ ಸರಿಪಡಿಸಿಕೊಳ್ಳಲು ಅವಕಾಶವುಂಟು.

ಕರ್ಣಾಟಕ ಭಾಷಾಬಾಂಧವರು, ಗ್ರಂಥಮಾಲೆಯ ಈ ಸೇವಾಕಾರ್ಯವನ್ನೂ, ಇದರ ಆವಶ್ಯಕತೆಯನ್ನೂ ಲಕ್ಷ್ಯಕ್ಕೆ ತಂದು, ಇದನ್ನು ಸ್ವಹಸ್ತ ಪರಹಸ್ತ ಪ್ರೋತ್ಸಾಹಿಸಿ, ಪೋಷಿಸಿ, ಇದು ಕೈಕೊಂಡಿರುವ ಈ ಮಾತೃಭಾಷಾ ಸೇವಾಕಾರ್ಯವನ್ನು ಯಶಸ್ವಿಯನ್ನಾಗಿಸಬೇಕೆಂದು ಪ್ರಾರ್ಥಿಸುತ್ತೇವೆ.

ಬೆಂಗಳೂರು
ತಾ. ೧೧-೫-೧೯೩೧

ಇತಿ ಸುಜನವಿಧೇಯ
**ಯಂ. ರಾಮರಾವ್.**

ಶ್ರೀರಾಮಸಹಾಯಂ

## ಮೈಸೂರು ಸಂಸ್ಥಾನದ

## ದಿವಾನ್

# ಪೂರ್ಣಯ್ಯನವರು

---

**ಅಧ್ಯಾಯ ೧** **"ಅನ್ನದಾನ ಶೆಟ್ಟಿ"**

**ನಮ್ಮ** ಮಾತೃಭೂಮಿಯಾದ ಈ ಭಾರತದೇಶದ ಆಶ್ರಿತಸಂಸ್ಥಾನಗಳಲ್ಲಿ ನಮ್ಮ ಈ ಮೈಸೂರು ಸಂಸ್ಥಾನವು ಅತ್ಯಂತ ಗಣನೀಯವಾದುದೆನ್ನಿಸಿದೆ. ದೇಶದ ಭೂಸ್ಥಿತಿ, ವಾಯುಗುಣ, ನೀರಾಸರೆ, ಪೈರು ಪಚ್ಚೆಗಳ ಬೆಳವಣಿಗೆ, ಪ್ರಕೃತಿಸೌಂದರ್ಯ, ಖನಿಜಸಂಪತ್ತು, ಧಾರ್ಮಿಕ ಮನೋಭಾವದ ಪ್ರಜೆಗಳ ನಡೆನುಡಿಗಳು ಮುಂತಾದುವುಗಳಿಂದ, ಇದು ಇತರ ಯಾವ ದೇಶಕ್ಕೂ ಎಂದೂ ಹಿಂದೆ ಬೀಳತಕ್ಕುದಾಗಿಲ್ಲ. ಜೀವ ನದಿಗಳಾದ ಕಾವೇರೀ ತುಂಗಭದ್ರಾ ಮುಂತಾದುವುಗಳ ದಿವ್ಯ ಪ್ರವಾಹಗಳು ಈ ದೇಶೀಯರಿಗೆ ಭುಕ್ತಿ-ಮುಕ್ತಿಪ್ರದಗಳಾಗಿವೆ. ಕಾಡುಗಳಲ್ಲಿ ತೇಗ ಸಾಲ ಶ್ರೀಗಂಧಾದಿ ವೃಕ್ಷಗಳು ಹೇರಳವಾಗಿ ಬೆಳೆದು ದೇಶದ ಮುಖ್ಯ ಆಧಾರಭೂತ ಆಸ್ತಿಯಾಗಿವೆ. ಬಂಗಾರವೂ ಕಬ್ಬಿಣದ ಅದುರೂ ಈ ದೇಶದ ಗಣಿಗಳಲ್ಲಿ ಯಥೇಚ್ಛವಾಗಿ ದೊರೆಯುತ್ತಿವೆ. ದೇಶವು ಸಮಶೀತೋಷ್ಣ ಹವೆಯಲ್ಲಿದ್ದು, ಸುಭಿಕ್ಷವಾದ ವರ್ಷಗಳಿಂದ ಈ ದೇಶದ ಪ್ರಕೃತಿಸ್ಥಿತಿಯು ಇತರ ಹಲವು ದೇಶಗಳವರಿಗೆ ಅಸೂಯಾಸ್ಪದವೆನ್ನಿಸಿದೆ. ಈ ದೇಶದ ಸೌಂದರ್ಯವನ್ನು ಹೆಚ್ಚಿಸುವಲ್ಲಿ ಜೋಗ ಜಲಪಾತವೂ, ಶಿವಸಮುದ್ರದ ವಿದ್ಯುಚ್ಛಕ್ತ್ಯುತ್ಪಾದಕ ಕಾರ್ಖಾನೆಯೂ ಮಹದಾಕರ್ಷಕಗಳೆನ್ನಿಸಿವೆ. ಇಂತಹ ಸೌಂದರ್ಯ ಪೂರ್ಣಭೂಭಾಗವು, ಮುನ್ನುಡಿಯಲ್ಲಿ ಸೂಚಿಸಿದಂತೆ

ಹದಿನಾಲ್ಕನೆಯ ಶತಮಾನದ ಅಂತ್ಯಭಾಗದಲ್ಲಿ ಯದುರಾಯರೆಂಬ ರಾಜಪ್ರಶ್ರೇಣ್ಯರಿಂದ ಗಳಿಸಲ್ಪಟ್ಟಿತು. ಅಂದಿನಿಂದ ಆ ವಂಶದಲ್ಲಿ, ಮಹಾಪ್ರತಿಭಾಶಾಲಿಗಳೆನ್ನಿಸಿದ ರಾಜ ಒಡೆಯರು, ರಣಧೀರ ಕಂಠೀರವ ನರಸರಾಜ ಒಡೆಯರು, ದೊಡ್ಡದೇವರಾಜ-ಚಿಕ್ಕದೇವರಾಜ ಒಡೆಯರು, ಮುಂತಾದ ನರಾಧಿಪರು ರತ್ನಸಿಂಹಾಸನಾರೂಢರಾಗಿ ಆಧಿಪತ್ಯ ಮಾಡಿದರು. ಕೊನೆಯಲ್ಲಿ ಇಮ್ಮಡಿ ಕೃಷ್ಣರಾಜ ಒಡೆಯರು ರಾಜ್ಯ ಸೂತ್ರಗಳನ್ನು ವಹಿಸಿದ್ದ ಕಾಲದಲ್ಲಿ *ಹೈದರನೆಂಬೊಬ್ಬ ಸೈನಿಕನು, ತನ್ನ ಶೌರ್ಯ ಧೈರ್ಯ ಪರಾಕ್ರಮಗಳಿಂದ ಸಕಲರ ಗಮನವನ್ನೂ ತನ್ನ ಕಡೆಗೆ ಆಕರ್ಷಿಸಿಕೊಂಡು ದಿನದಿನಕ್ಕೆ ಅಭಿವೃದ್ಧಿಯಾಗತೊಡಗಿದನು. ಇವನ ಅಭಿವೃದ್ಧಿಯೊಂದಿಗೇ ಅತ್ತ ಮೈಸೂರರಸರ ಅಧಿಕಾರ ದರ್ಪಗಳೂ, ಗೌರವ ಪ್ರತಿಷ್ಠೆಗಳೂ ಕುಂದತೊಡಗಿದುವು. ಶೌರ್ಯಲಕ್ಷ್ಮಿಯೂ ಧೈರ್ಯಲಕ್ಷ್ಮಿಯೂ ಕೈಬಿಟ್ಟೊಡನೆಯೇ ಧನಲಕ್ಷ್ಮಿಯೂ ಹಿಂದೆ ಸರಿದಳು. ರಾಜಾಶ್ರಯದಲ್ಲಿ ಹಲವರು ಸ್ವಾರ್ಥಸಾಧಕರಾದ ದುಷ್ಟರು ಸೇರಿ, ವಿಷಯಲೋಲುಪತೆಯಿಂದ ಅಧಿಕಾರಸ್ಥಾನಗಳನ್ನು ಭ್ರಷ್ಟಗೊಳಿಸಿದರು. ಅಧಿಕಾರಿಗಳು ಆಚರಿಸಿದ ದುಷ್ಕಾರ್ಯಗಳ ಪ್ರತಿಫಲವೇನೋ ಮಹಾರಾಜರ ಕೊರಳಿಗೇ ಗಂಟುಬೀಳತೊಡಗಿತು. ಭಂಡಾರವು ಬರಿದಾಯಿತು. ರಾಜ್ಯದಲ್ಲಿನ ಹುಟ್ಟುವಳಿಯು ಕಡಮೆಯಾಯಿತು. ಸುಮ್ಮನೆ ಕುಳಿತು ಉಣ್ಣುತ್ತಿದ್ದ ಸೈನ್ಯದ ವೆಚ್ಚವಾದರೋ ಅಪರಿಮಿತವಾಗಿ ಬೆಳೆದುಹೋಗುತ್ತಿದ್ದಿತು. ಅಧಿಕಾರಿಗಳಲ್ಲಿನ ಪರಸ್ಪರ ಮನಸ್ತಾಪ ದ್ವೇಷಾಸೂಯೆಗಳ ಕಾರಣದಿಂದ ರಾಜ್ಯಭಾರದ ಯಾವ ಇಲಾಖೆಯೂ ತೃಪ್ತಿಕರವಾಗಿ ಕೆಲಸಮಾಡದೆ, ಕೇವಲ ಸಂಸ್ಥಾನದ ಖಜಾನೆಗೆ ಶಿರೋಭಾರವೆನ್ನಿಸುವಷ್ಟುಮಟ್ಟಿನ ಖರ್ಚನ್ನೊದಗಿಸಲು ಮಾತ್ರ ಕಾರಣವಾಗಿದ್ದಿತು. ದ್ರವ್ಯಾಭಾವ ಪ್ರಶ್ನೆಯು ಪ್ರತಿಕ್ಷಣದಲ್ಲೂ ಮಹಾಭೂತದಂತೆ ಮಹಾರಾಜರನ್ನು ಎದುರಿಸುತ್ತಿತ್ತು. ರಾಜ್ಯಾಧಿಪತ್ಯವನ್ನು ಬಿಡಲೂ ಸಾಧ್ಯವಿಲ್ಲ-ಇಟ್ಟುಕೊಂಡು ನಡೆಯಿಸುವಂತೆಯೂ ಇಲ್ಲ;

---

*ಹೈದರಲ್ಲೀಖಾನ್ ಬಹದ್ದೂರ'ನ ಜೀವಿತವು ಗ್ರಂಥಮಾಲೆಯ ೮೯ನೆಯ ಕುಸುಮವಾಗಿ ಪ್ರಕಟವಾಗಿದೆ.

ಇಂತಹ ಪರಿಸ್ಥಿತಿಯಲ್ಲಿ ಸಿಕ್ಕ ಮಹಾರಾಜರು ಬಹು ಹಣ್ಣಾದರು. ಸೈ
ನ್ಯದವರು ತಮಗೆ ಸಲ್ಲಬೇಕಾದ ಸಂಬಳಕ್ಕಾಗಿಯೋ ಅಥವ ದುಷ್ಟರಾದ
ಅಧಿಕಾರಿಗಳ ದುರ್ಬೋಧನೆಗೆ ಒಳಪಟ್ಟೋ, ಹೀಗೆ ಅನೇಕವೇಳೆ ಅರಮನೆ
ಯ ಹೆಬ್ಬಾಗಿಲನ್ನು ಅಡ್ಡಗಟ್ಟಿ ಕುಳಿತು ಮಹಾರಾಜರನ್ನು ಪೀಡಿಸಿದ್ದ
ಸಂದರ್ಭಗಳೂ ಉಂಟು. ಇಂತಹ ವಿಷಮಸಂದರ್ಭಗಳು ಪ್ರಾಪ್ತವಾ
ದಾಗಲೆಲ್ಲ, ರಾಜರು, ಕಾಲಕರ್ಮಸಂಯೋಗದಿಂದ ಅಭಿವೃದ್ಧಿಯ ಪಾವಟಿ
ಗೆಗಳನ್ನೇರುತ್ತ ಸಾಗಿದ್ದ ಹೈದರಲ್ಲೀಖಾನನ ಸಹಾಯವನ್ನು ಅಪೇಕ್ಷಿಸು
ತ್ತಿದ್ದುದು ಆವಶ್ಯಕವಾಗಿತ್ತು. ಹೈದರನು, ಧನಾರ್ಜನೆಯ ವಿಷಯದಲ್ಲಿ
ನ್ಯಾಯಾನ್ಯಾಯಗಳನ್ನು ಗಮನಿಸದೆ, ತನ್ನ ಶಕ್ತಿಗೆ ಸಾಧ್ಯವೆಂದು ತೋ
ರಿದ ಮಾರ್ಗಗಳಿಂದಲೆಲ್ಲ ದ್ರವ್ಯವನ್ನು ಗಳಿಸುತ್ತಿದ್ದನಾದುದರಿಂದ ಸ್ವಲ್ಪ
ಕಾಲದಲ್ಲೇ ಅವನಬಳಿ ಅಧಿಕ ದ್ರವ್ಯವು ಶೇಖರವಾಯಿತು. ಮಹಾರಾಜ
ರಿಗೆ ದ್ರವ್ಯದ ಅಡಚಣೆಯುಂಟಾದಾಗಲೆಲ್ಲ, ಅವರು ಅವನ ಸಹಾಯವನ್ನು
ಕೋರದಿದ್ದರೆ ಗತ್ಯಂತರವೇ ಇಲ್ಲವೆಂಬಂತಾಗಿತ್ತು. ಹಾಗೆ ಅವನಿಂದ
ಉಪಕೃತರಾದಮೇಲೆ ಅವರವರಲ್ಲಿ ಸ್ವಾಭಾವಿಕವಾಗಿರಬೇಕಾದ ಸ್ವಾಮಿ
ಭೃತ್ಯ ನ್ಯಾಯಕ್ಕೆ ಲೋಪಬಂದು, ರಾಜರು ಅವನ ದಾಕ್ಷಿಣ್ಯಕ್ಕೊಳಪಟ್ಟು
ನಡೆಯಬೇಕಾದ ಪರಿಸ್ಥಿತಿಯುಂಟಾಯಿತು. ಕ್ರಮಕ್ರಮವಾಗಿ ಆತನಿಗೆ
ಬಹದ್ದೂರ್ ಎಂಬ ಕಿತಾಬನ್ನೂ, ದಳವಾಯಿತನವನ್ನೂ, ಕೊನೆಗೆ ನವಾಬ
ನೆಂಬ ಬಿರುದನ್ನೂ ಕೊಟ್ಟು ಅಮೌಲ್ಯ ವಸ್ತ್ರ ಭೂಷಣಾದಿ ಬಹುಮಾನಗ
ಳೊಂದಿಗೆ ಆಗಾಗ ಗೌರವನಡೆಸುತ್ತಿದ್ದರು. ಆಸ್ಥಾನದಲ್ಲಿ ಹೈದರನೇ ಪ್ರ
ಮುಖನೆಂದು ಸರ್ವರಿಗೂ ಮನದಟ್ಟಾಯಿತು. ರಾಜರ ಬಂಧುಗಳೂ ಸ್ವ
ಜನರೂ ಆದ ಪ್ರಮುಖಾಧಿಕಾರಿಗಳು, ಈವರೆಗೆ ತಾವು ನಡೆಸುತ್ತಾ ಬಂದ
ದುಷ್ಕಾರ್ಯಗಳ ಫಲವಾಗಿ ಸ್ಥಾನಭ್ರಷ್ಟತೆಯನ್ನು ಹೊಂದಿದರು. ಆ ಸಂ
ದರ್ಭದಲ್ಲಿ ಸಂಸ್ಥಾನದ ಆಡಳಿತದ ಗುಟ್ಟೆಲ್ಲವನ್ನೂ ತಿಳಿದಿದ್ದವನೆಂದರೆ
ನವಾಬ್ ಹೈದರಲ್ಲೀಖಾನನೊಬ್ಬನು. ಅವನಿಲ್ಲದಿದ್ದರೆ, ರಾಜ್ಯಭಾರವನ್ನು
ಕ್ಷಣಕಾಲವಾದರೂ ನಿರ್ವಹಿಸಲು ತಮ್ಮಿಂದ ಸಾಧ್ಯವಿಲ್ಲವೆಂದು ರಾಜರಿಗೆ
ಚೆನ್ನಾಗಿ ತಿಳಿದಿದ್ದಿತು. ಆದುದರಿಂದ ಆ ಸಂದರ್ಭದಲ್ಲಿ ಉಪಾಯವಿಲ್ಲದೆ,
ರಾಜ್ಯಾಡಳಿತದ ಸರ್ವಾಧಿಕಾರವನ್ನೂ ಆತನಿಗೆ ವಹಿಸಿಬಿಟ್ಟರು.

ಮಹಾಕರ್ತೃತ್ವಶಾಲಿಯಾದ ಹೈದರನು ಸರ್ವಾಧಿಕಾರ ಪ್ರಾಪ್ತವಾದ ನಂತರ ಸುಮ್ಮನೆ ಕುಳ್ಳಿರುವನೇ ? ಒಡನೇ ಶ್ರೀರಂಗಪಟ್ಟಣವನ್ನು ತನ್ನ ಮುಖ್ಯ ಠಾಣ್ಯವನ್ನಾಗಿ ಮಾಡಿಕೊಂಡು, ಅದರ ಕೋಟೆಕೊತ್ತಲಗಳನ್ನು ಭದ್ರಪಡಿಸಿಕೊಂಡು ಅಲ್ಲಿದ್ದು ಸುತ್ತುಮುತ್ತಿನ ಪ್ರಾಂತಗಳ ವಿಚಾರಣೆಯನ್ನೆಲ್ಲ ನಡೆಯಿಸತೊಡಗಿದನು. ಅನೇಕ ಸ್ಥಳಗಳಮೇಲೆ ದಂಡೆತ್ತಿ ನಡೆದು, ದೇಶವನ್ನು ಪೂರ್ವ ದಕ್ಷಿಣ ಪಶ್ಚಿಮೋತ್ತರ ದಿಕ್ಕುಗಳಲ್ಲೂ ಅತಿಶಯವಾಗಿ ವಿಸ್ತರಿಸಿದನು. ಕೋಟಿಕೋಟಿಯಾಗಿ ದ್ರವ್ಯವನ್ನು ಗಳಿಸಿ ರಾಜಧಾನಿಯ ಖಜಾನೆಯಲ್ಲಿ ತುಂಬಿಸಿದನು. ಇಮ್ಮಡಿ ಕೃಷ್ಣರಾಜಒಡೆಯರು ೧೭೬೬ನೆಯ ಸಂ||ದಲ್ಲಿ ಸ್ವರ್ಗಸ್ಥರಾದ ತರುವಾಯ ನಂಜರಾಜಒಡೆಯರೆಂಬುವರು ಪಟ್ಟಾಭಿಷಿಕ್ತರಾದರು. ಇವರ ಕಾಲದಲ್ಲೂ ನವಾಬ ಹೈದರಲ್ಲೀಖಾನನ ಅಧಿಕಾರವು ಯಾವ ಭಾಗದಲ್ಲೂ ಕುಂಠಿತವಾಗದೆ ನಡೆಯಿತು. ಇವರು ಕೇವಲ ನಾಲ್ಕು ವರ್ಷಗಳು ಮಾತ್ರ ಜೀವಿಸಿ, ೧೭೭೦ರಲ್ಲಿ ದೈವಾಧೀನರಾದರು. ಇವರ ತರುವಾಯ ಬೆಟ್ಟದ ಚಾಮರಾಜಒಡೆಯರೆಂಬುವರು ಸಿಂಹಾಸನವನ್ನೇರಿದರು. ಇವರೂ ಅಷ್ಟುಮಟ್ಟಿನ ಶಕ್ತರಲ್ಲದುದರಿಂದ ಹೈದರನಿಗಿದ್ದ ಸರ್ವಾಧಿಕಾರವು ತಪ್ಪದೆ ಮುಂದರಿಸಿತು. ಹೈದರನು ಸರ್ವಾಧಿಕಾರಿಯಾಗಿದ್ದರೂ, ತನ್ನ ದೇಹವು ಮೈಸೂರರಸರ ಉಪ್ಪಿನಿಂದ ಬೆಳೆದುದೆಂಬುದನ್ನು ಮರೆಯದೆ, ಅವರನ್ನು ಉಪೇಕ್ಷಿಸದೆ, ಅವರನ್ನು ಸಂಪೂರ್ಣ ಮುಳುಗಿಸಬೇಕೆಂದು ಇಚ್ಛಿಸದೆ-ಕ್ರಿಯಾವಂತನಾಗಿ ಅಧಿಕಾರಮಾಡಿ ರಾಜ್ಯವನ್ನು ಅತ್ಯುತ್ತಮಸ್ಥಿತಿಯಲ್ಲಿಟ್ಟುಕೊಂಡಿದ್ದನು. ಆತನ ಸಿರಲಿಸಿಕೆ, ಸೂಕ್ಷ್ಮಮತಿ, ದರ್ಪ, ಶೌರ್ಯ ಧೈರ್ಯಾದಿ ಗುಣಗಳು, ಆತನಿಗಿದ್ದ ಧನಬಲ-ಜನಬಲ ಇವುಗಳ ಪ್ರಾಬಲ್ಯದಿಂದ ಆತನು ಒಂದುವೇಳೆ ಸಿಂಹಾಸನವನ್ನೇ ಆಕ್ರಮಣಮಾಡಲಿಚ್ಛಿಸಿದ್ದರೂ ದೊರೆಗಳು ಲೇಶಮಾತ್ರವೂ ಎದುರಿಸುವಂತಿರಲಿಲ್ಲ. ಆದರೂ ಕ್ರಿಯಾವಂತನಾದ ಹೈದರಾಲಿಯು, ಹಾಗೆ ಮಾಡದೆ ತಾನು ಸರ್ವಾಧಿಕಾರಿಯಾಗಿದ್ದರೂ ರಾಜ್ಯವು ದೊರೆಗಳವರದು-ಅವರು ತನ್ನ ಪ್ರಭುಗಳು ಎಂಬ ಶ್ರದ್ಧಾಭಕ್ತಿಗಳನ್ನಿಟ್ಟುಕೊಂಡು ನಡೆಯುತ್ತಿದ್ದನು. ಸರ್ವಾಧಿಕಾರಿಯಾದ ಹೈದರಾಲಿಯಂತಹ ನೌಕರನೊಬ್ಬನು ಎಷ್ಟೋ ಆಪ್ತನೆನ್ನಿಸಿಕೊಂಡು ಅಧಿಕಾರಮಾಡುತ್ತಿದ್ದರೂ

ರಾಜಮನೆತನದವರಿಗೆ ದೊರೆಗಳೇ ಸ್ವತಂತ್ರಿಸಿ ಅಧಿಕಾರ ನಡೆಯಿಸಿದಂತೆ ಯಿದ್ದಿತ್ತೆ? ಆದರೆ ನಡೆದುದೇನು? ರಾಜರು ನಿರ್ವಾಹವಿಲ್ಲದೆ ಆತನ ಸರ್ವಾಧಿಕಾರಕ್ಕೊಡಂಬಟ್ಟು, ಸಂಸ್ಥಾನದ ಆಳ್ವಿಕೆಯನ್ನು ಆತನಿಗೆ ವಹಿಸಿ ಕೊಟ್ಟದ್ದು, ಇಮ್ಮಡಿ ಕೃಷ್ಣರಾಜ ಒಡೆಯರವರ ಕುಟುಂಬ ಮಹಾರಾಣಿ ಲಕ್ಷ್ಮಮ್ಮಣ್ಣಿಯವರಿಗೆ ಲೇಶಮಾತ್ರವೂ ಸಮ್ಮತವಿರಲಿಲ್ಲ. ಹಿಂದೂರಾಜ್ಯ ವಲ್ಲಿ ಮಹಮ್ಮದೀಯರು ಹೀಗೆ ಪ್ರಬಲಿಸತೊಡಗುವುದು ರಾಜಮನೆತನಕ್ಕೆ ಎಂದಿಗಿದ್ದರೂ ಮೃತ್ಯುವಾಗದಿರದು ಎಂಬುದನ್ನು ದೂರದರ್ಶಿಗಳಾದ ಅವರು ತಿಳಿದು- ಹೈದರನ್ನ ವಜ್ರಮುಷ್ಟಿಯಿಂದ ತಪ್ಪಿಸಿ, - ರಾಜಮನೆತನ ವನ್ನು ಸ್ವತಂತ್ರವನ್ನಾಗಿಸಲು ಏನಾದರೂ ಮಾರ್ಗವುಂಟೇ ಎಂದು ಯೋ ಚಿಸತೊಡಗಿದರು. ಆ ಯೋಚನೆಯನ್ನನುಸರಿಸಿದ ಪ್ರಯತ್ನವೊಂದು ಗೋಪ್ಯವಾಗಿ ಹೈದರನ ವಂಶವೃಕ್ಷಕ್ಕೆ ಕುಠಾರ ಸ್ವರೂಪವಾಗಿ ಒಂದೆಡೆ ಯಲ್ಲಿ ಸಾವಧಾನವಾಗಿ ನಡೆಯುತ್ತಿದ್ದಿತು. ಇದಂತಿರಲಿ—

ನಮ್ಮ ಕಥಾನಾಯಕನ ಮುಖ್ಯ ಕಾರ್ಯಕ್ಷೇತ್ರವೂ ಮತ್ತು ಅದರ ಸ್ಥಿತಿಗತಿಗಳೂ ಆ ಕಾಲದಲ್ಲಿ ಹೇಗಿದ್ದುವೆಂಬುದರ ಪರಿಚಯವಾಗದೆ ಮುಂದರಿಸುವುದು ಸಮಂಜಸವಲ್ಲವಾದ್ದರಿಂದ, ಮೇಲ್ಕಂಡಂತೆ ಆ ಸಂಬಂಧದ ಲೇಶಾಂಶ ಪರಿಚಯ ಮಾಡಿಕೊಡಬೇಕಾಯಿತು ಇನ್ನು ಪ್ರಕೃತ ಕಥಾ:—

ಪೂರ್ಣಯ್ಯನವರ ಪ್ರಥಮ ಪರಿಚಯವು ನಮ್ಮ ಪಾಠಕರಿಗಾಗು ವುದು, ಅವರ ಪಿತೃ ಪಿತಾಮಹರ ವಂಶೋನ್ನತಿಯ ಮೂಲಕವಾಗಿಯಲ್ಲ. ಅವರ ಜನನ ಕಾಲದಿಂದಲಲ್ಲ - ಅಲ್ಲ. ಅವರ ಬಾಲ್ಯದಿಂದಲೂ ಅಲ್ಲ. ಅವರು ೧೭೩೬ನೆಯ ಸಂವತ್ಸರದಲ್ಲಿ ದಕ್ಷಿಣ ಆರ್ಕಾಟು ಜಿಲ್ಲೆಗೆ ಸೇರಿದ ಚಿದಂಬರಂ ತಾಲ್ಲೂಕಿನ ಕುಂಜಿನೀಡು ಎಂಬೊಂದು ಶ್ರೋತ್ರಿಯಾಗ್ರಹಾ ರದಲ್ಲಿ ಜನ್ಮವೆತ್ತಿದರೆಂದು ಉಲ್ಲೇಖಿಸಲ್ಪಟ್ಟಿದೆ. ತಮ್ಮ ಜನ್ಮಸ್ಥಾನದ ಔನ್ನತ್ಯದಿಂದ ನಮ್ಮ ಕಥಾನಾಯಕರು ಪ್ರಸಿದ್ಧಿಗೆ ಬಂದವರಲ್ಲ. ಪಾಪ, ಅ ವರ ಮಾತಾಪಿತೃಗಳು ಬಡವೈದಿಕ ಬ್ರಾಹ್ಮಣರು. ಮಾಧ್ವ ಪಂಗಡಕ್ಕೆ ಸೇರಿ ದ ಸದ್ವೈಷ್ಣವರಾದ ನರಸಿಂಹಾಚಾರ್ಯರು ತಮ್ಮ ಪತ್ನಿ ಗಿರಿಯಮ್ಮನೆಂಬ

ಸಾಧ್ವೀಮಣಿಯಲ್ಲಿ ಪಡೆದ ಏಕಮಾತ್ರ ಸಂತಾನವೆಂದರೆ ನಮ್ಮ ಕಥಾ ನಾಯಕರೇ! ಬಾಲ್ಯದಲ್ಲೇ ಪಿತೃವಿಯೋಗವಾಗಲಾಗಿ, ಗಿರಿಯಮ್ಮನವರು ತಮ್ಮ ಮಗುವನ್ನು ಬಹು ಕಷ್ಟಪಟ್ಟು ಕಾಪಾಡಿದರೆಂದು ತಿಳಿದುಬರುತ್ತದೆ. ಆ ಸಾಧ್ವಿಯು ಎಷ್ಟೋವೇಳೆ, ಕೂಲಿನಾಲಿಗಳನ್ನು ಸಹ ಮಾಡಿ, ತಮ್ಮ ಕಂದನ ಪೋಷಣೆಗೆ ಆವಶ್ಯಕ ಪದಾರ್ಥಗಳನ್ನು ಒದಗಿಸಿದರೆಂದು ಹೇಳಿಕೆಯುಂಟು. ಬಾಲ್ಯವನ್ನು ಹಾಗೆ ಕಳೆದ ತರುವಾಯ ಅವರು ಎಲ್ಲಿ ವಾಸಿಸಿದರು, ಎಲ್ಲಿ ವಿದ್ಯಾಭ್ಯಾಸ ಮಾಡಿದರು, ಎಂಬೀಸಂಗತಿಗಳೂ ಅಜ್ಞಾತವಾಗಿವೆ. ಅವರು ಪುನಃ ನಮಗೆ ದೃಷ್ಟಿಗೋಚರರಾಗುವುದೆಂದರೆ ಆಗಿನ ಕರ್ಣಾಟಕದ ರಾಜಧಾನಿ ನಗರಿಯಲ್ಲಿ!

'ಕೆಟ್ಟು ಪಟ್ಟಣಸೇರು' ಎಂಬ ಗಾಧೆಯೊಂದು ನಮ್ಮಲ್ಲಿ ಉಂಟಷ್ಟೆ! ಕುಟುಂಬ ರಕ್ಷಕರಾದ ಹಿರಿಯರು ಮೃತರಾಗಿ, ಮನೆಬಾಗಿಲು ಭೂಮಿ ಕಾಣಿಗಳನ್ನು ದಾಯಾದ್ಯರಿಗೆ ಸೂರೆಗೊಟ್ಟು ಪರದೇಶಿಗಳಾದ ಹಲವರು ಹಳ್ಳಿಗಾಡುಗಳಲ್ಲಿ ಕುಳಿತು ಜೀವನಕ್ಕೆ ತೊಂದರೆಪಡಲಾರದೆ, ಲಕ್ಷಾಂತರಮಂದಿ ವಾಸವಾಗಿರುವ ಪಟ್ಟಣಗಳಲ್ಲಿ ತಮಗೂ ಯಾವುದಾದರೊಂದು ಬಗೆಯಿಂದ ಜೀವನೋಪಾಯಮಾರ್ಗವು ದೊರೆಯಬಹುದೆಂದು ಪಟ್ಟಣಗಳನ್ನು ಕುರಿತು ಪ್ರಯಾಣಮಾಡುವುದುಂಟು. ವಾಸ್ತವವಾಗಿಯೂ ಹಳ್ಳಿಗಾಡುಗಳಲ್ಲಿರುವುದಕ್ಕಿಂತಲೂ ಪಟ್ಟಣಗಳಲ್ಲಿ ಹಲವು ಬಗೆಯ ಉದ್ಯೋಗಗಳು ಇರಲು ಅವಕಾಶವುಂಟು. ಆಗ್ಗೆ ನಮ್ಮ ಕಥಾನಾಯಕರ ವಾಸಸ್ಥಳವು ಕರ್ಣಾಟಕ ರಾಜ್ಯಕ್ಕೆ ಸೇರಿದ್ದಿತು. ಮನೆಗೆ ಯಜಮಾನರೂ ಪೋಷಕರೂ ಆಗಿದ್ದ ನರಸಿಂಹಾಚಾರ್ಯರು ಮೃತರಾದುದರಿಂದ ಜೀವನೋಪಾಯಕ್ಕೆ ತೊಂದರೆ ಪಡುತ್ತಿದ್ದ ಗಿರಿಯಮ್ಮನವರು, -'ಕೆಟ್ಟು ಪಟ್ಟಣಸೇರು' ಎಂಬಿರುವ ಲೋಕೋಕ್ತಿಯನ್ನು ಜ್ಞಾಪಕಕ್ಕೆ ತಂದುಕೊಂಡು, ತಮ್ಮ ಮಗನೊಂದಿಗೆ, ಆಗಿನ ಕರ್ಣಾಟಕದ ರಾಜಧಾನಿಯಾದ ಶ್ರೀರಂಗಪಟ್ಟಣವನ್ನು ಸೇರಲು ಇಚ್ಛಿಸಿದುದು ಸ್ವಾಭಾವಿಕವಾಗಿಯೇ ಇದೆ. ಆಗ ಶ್ರೀರಂಗಪಟ್ಟಣವು, ನವಾಬ ಹೈದರಲ್ಲೀಖಾನನ ಪ್ರಾಬಲ್ಯದಿಂದ ದಿನದಿನಕ್ಕೆ ವ್ಯಾಪಾರ ಉದ್ಯೋಗ ಮುಂತಾದುವುಗಳಲ್ಲಿ ಅದ್ವಿತೀಯವೆನ್ನಿಸುತ್ತಿದ್ದಿತು. ಚಿಕ್ಕ ವಯಸ್ಸಿನ ಪೂರ್ಣಯ್ಯನವರು ತಾಯಿಯೊಂದಿಗೆ ಪ್ರಯಾಣಮಾಡಿ ಬಂದು

ರಾಜಧಾನಿ ನಗರವನ್ನು ಸೇರಿದರು. ಆವರೆಗೆ ಅವರಿಗೆ ಕ್ರಮ ವಿದ್ಯಾಭ್ಯಾಸವು, ಎಲ್ಲಿ ನಡೆಯಿತೋ ಎಷ್ಟು ಮಟ್ಟಿಗೆ ನಡೆಯಿತೋ ತಿಳಿಯದು. ಆದರೆ ಮನೆಯಲ್ಲೋ ಅಥವ ಪಾಠಶಾಲೆಯಲ್ಲೋ ಓದು ಬರಹ ಲೆಕ್ಕ ಪತ್ರಗಳು ಇಷ್ಟು ಮಟ್ಟಿಗೆ ಮಾತ್ರ ವಿದ್ಯಾಭ್ಯಾಸವು ನಡೆದಿರಬಹುದೆಂದು ತೋರುತ್ತದೆ. ಹೀಗೆ ಸ್ವಸ್ಥಾನದಿಂದ ಬಂದು ರಾಜಧಾನಿ ನಗರದಲ್ಲಿ ನೆಲೆಗೊಂಡೊಡನೆಯೇ ಜೀವನಾರ್ಥವಾಗಿ ಎಲ್ಲಾದರೂ ಉದ್ಯೋಗ ದೊರೆತೀತೋ ಎಂದು ಹುಡುಕಲಾರಂಭಿಸಿದರು. ಆಗ ಶ್ರೀರಂಗಪಟ್ಟಣದಲ್ಲಿ ವ್ಯಾಪಾರವನ್ನು ಮಾಡಿಕೊಂಡಿದ್ದ ವೈಶ್ಯವರ್ಣದವರಲ್ಲಿ ಅನ್ನದಾನಶೆಟ್ಟಿ, ನರಸಶೆಟ್ಟಿ, ಶಂಕರಶೆಟ್ಟಿ ಎಂಬ ವೈಶ್ಯಸಂಗಡದ ಶ್ರೀಮಂತರೇ ಮುಖ್ಯರು. ಈ ವರ್ತಕರು ಹೈದರನ ಸೈನ್ಯಕ್ಕೂ ರಾಜಗೃಹಕ್ಕೂ ಬೇಕಾದ ಸಕಲ ಸಾಮಗ್ರಿಗಳನ್ನೂ ಒದಗಿಸುತ್ತಿದ್ದುದರಿಂದ ಇವರಲ್ಲಿ ವ್ಯಾಪಾರವು ವಿಶೇಷವಾಗಿ ನಡೆದು, ಅವರು ಬರುಬರುತ್ತಾ ಪುಷ್ಟರಾಗುತ್ತಿದ್ದರು. ಇವರಲ್ಲಿ ಅನ್ನದಾನಶೆಟ್ಟಿ ಎಂಬುವರ ಬಳಿಯಲ್ಲೇ ಪ್ರಾರಂಭಕ್ಕೆ ನಮ್ಮ ಕಥಾನಾಯಕರು ಲೆಕ್ಕಪತ್ರಗಳನ್ನಿಡುವ ಒಂದು ಚಿಕ್ಕ ಉದ್ಯೋಗವನ್ನು ಪಡೆದರು. ಆ ಕೆಲಸದಲ್ಲಿ ಅವರು ತೋರಿಸಿದ ಶ್ರದ್ಧೆ, ಚಟುವಟಿಕೆ, ಎಲ್ಲಕ್ಕೂ ಹೆಚ್ಚಾಗಿ ನಂಬಿಕೆ ಮುಂತಾದುವುಗಳಿಂದ ಅವರು ಬಹು ಶೀಘ್ರಕಾಲದಲ್ಲೇ ಸಾಹುಕಾರನ ಮೆಚ್ಚುಗೆಗೆ ಪಾತ್ರರಾದರು. ಅನ್ನದಾನಶೆಟ್ಟಿಯು ಪೂರ್ಣಯ್ಯನವರ ಜಾಗರೂಕತೆ, ಲೆಕ್ಕಪತ್ರಗಳಲ್ಲಿ ಅವರು ತೋರ್ಪಡಿಸುತ್ತಿದ್ದ ಜಾಣ್ಮೆ, ಸ್ವಾಮಿಭಕ್ತಿ, ತ್ರಿಕರಣಶುದ್ಧಿ ಮೊದಲಾದುವುಗಳಿಗಾಗಿ ಲುಬ್ಧನಾಗಿ ಅವರನ್ನು ಗೌರವ ಭಾವದಿಂದ ಕಾಣುತ್ತಾ ತನ್ನ ವ್ಯಾಪಾರ ಸಂಬಂಧವಾದ ಸಮಸ್ತ ಕಾರ್ಯಗಳನ್ನೂ ಅವರ ಮೂಲಕವೇ ನಡೆಯಿಸುತ್ತಿದ್ದನು.



## ಅಧ್ಯಾಯ ೨ "ಗಿಡ್ಡಂಗಿ"

ಅನ್ನದಾನಶೆಟ್ಟಿಯ ವ್ಯಾಪಾರವು ದಿನದಿನಕ್ಕೆ ಪ್ರಬಲವಾಗುತ್ತ ಬರಲು, ಆತನು ಹೈದರನ ಕಟಾಕ್ಷಕ್ಕೆ ಪಾತ್ರನಾದನು. ಹೈದರನು, ತನಗೆ

ಹಣಕ್ಕೆ ತಾಪತ್ರಯವಾದಾಗಲೆಲ್ಲ, ಶೆಟ್ಟಿಯ ಬಳಿಗೆ ಹೇಳಿಕಳುಹಿಸಿ, ವಿಶೇಷ ದ್ರವ್ಯವನ್ನು ತರಿಸಿಕೊಂಡು, ತನ್ನ ತಗಾದೆಯನ್ನು ತೀರಿಸಿಕೊಂಡ ತರುವಾಯ, ತನ್ನ ಹಣ ಬಂದೊಡನೆಯೇ ಅದನ್ನು ಬಡ್ಡಿ ಸಮೇತ ವಾವತಿ ಮಾಡುತ್ತಿದ್ದನು. ಹೀಗೆ ಅವರವರ ಲೇವಾದೇವಿ ವ್ಯವಹಾರವು ಬಹುದಿನಗಳವರೆಗೆ ನಡೆಯುತ್ತಿಂಟಿತು. ಈ ಸಂಬಂಧ ಲೆಕ್ಕಗಳ ತೀರ್ವಿಕೆಯಲ್ಲಿ ಪೂರ್ಣಯ್ಯನವರೇ ಲೆಕ್ಕಗಳನ್ನು ತೆಗೆದುಕೊಂಡು ಒಂದೆರಡುವೇಳೆ ಹೈದರನ ಸಮುಖಕ್ಕೆ ಬಂದಿದ್ದುದುಂಟು. ಆ ಸಂದರ್ಭಗಳಲ್ಲಿ ಅವರ ವಿನಯ ವಿಧೇಯತೆಗಳೂ ಲೆಕ್ಕಾಚಾರದಲ್ಲಿ ಅವರಿಗಿದ್ದ ಸ್ಪಷ್ಟವಾದ ಜ್ಞಾನವೂ, ಅಪೇಕ್ಷಿತವಾದ ಸಂಖ್ಯೆಯು ಬೇಕೆಂದೊಡನೆಯೇ ದೊರೆವಂತೆ ಲೆಕ್ಕವನ್ನು ಸಿದ್ಧಪಡಿಸಿಟ್ಟಿರುತ್ತಿದ್ದ ಅವರ ಜಾಣ್ಮೆಯೂ, ಚಟುವಟಿಕೆಯೂ ಮಹಾಚಾಣಾಕ್ಷನಾದ ಆತನ ಗಮನವನ್ನೆಳೆದುವು. ಈ ಗುಣಗಳ ಬೆಳವಣಿಗೆಗೆ ತಕ್ಕಂತಹ ಪ್ರೋತ್ಸಾಹ ದೊರೆತರೆ, ಈ ಯುವಕನು ಮುಂದೆ ಮಹಾ ಪ್ರತಿಭಾಶಾಲಿಯಾಗದಿರನು ಎಂಬುದು, ಹೈದರನ ಕುಶಾಗ್ರ ಬುದ್ಧಿಗೆ ಒಡನೆ ಸ್ಫುರಿಸಿತು. ಅವರನ್ನು ಹೇಗಾದರೂ ಮಾಡಿ ಲೇಖಕನಮಾಡಬೇಕೆಂದೂ ಮನಸ್ಸಿಗೆ ಬಂತು. ಆದರೆ ಅವರ ವಿಷಯದಲ್ಲಿ ತನ್ನ ಮನಸ್ಸಿನ ಸ್ಪಷ್ಟವಾದ ಅಭಿಪ್ರಾಯವನ್ನು ಆಗಲೇ ವ್ಯಕ್ತಪಡಿಸದೆ, ಅವರನ್ನು ಸಂಗ್ರಹಿಸಲು ಇಚ್ಛಿಸಿ ಸಮಯ ನಿರೀಕ್ಷಣೆಯಲ್ಲಿದ್ದನು.

ಹೈದರನ ದೃಷ್ಟಿಯು ಪೂರ್ಣಯ್ಯನವರ ಮೇಲೆಬಿದ್ದ ಮತ್ತೊಂದು ಸಂದರ್ಭವನ್ನು ಕುರಿತು ಒಂದು ದಂತಕಥೆಯೂ ಹೇಳಲ್ಪಡುತ್ತಿದೆ. ಒಂದಾನೊಂದುವೇಳೆ ಮಳೆಗಾಲದಲ್ಲಿ ಕಾವೇರೀ ನದಿಯಲ್ಲಿ ಅಪರಿಮಿತ ಪ್ರವಾಹವು ಬಂದು ನೀರು ದಡಗಳನ್ನು ಮೀರಿ ಹರಿಯುವುದೋ ಎಂಬ ಶಂಕೆಯನ್ನುಂಟುಮಾಡಿದ್ದಿತಂತೆ! ಅಪೂರ್ವವಾಗಿ ಬಂದಿದ್ದ ಆ ಅಗಾಧಪ್ರವಾಹವನ್ನು ನೋಡಲೂ, ಅಪಾಯ ಸಂದರ್ಭವಿದ್ದರೆ ರಾಜಧಾನಿಯ ನಿವಾಸಿಗಳ ಸಂರಕ್ಷಣೆಗಾಗಿ ತಕ್ಕ ಯೋಚನೆ ಮಾಡಲೂ, ಸುಲ್ತಾನನು ಮಿತಪರಿವಾರದೊಂದಿಗೆ ನದೀ ದಂಡೆಗೆ ನಡೆದು, ಅಲ್ಲಿ ಆಶ್ಚರ್ಯಕರವಾಗಿ ಮಹಾ ರಭಸದಿಂದ ಹರಿಯುತ್ತಿದ್ದ ಆ ಪ್ರವಾಹವನ್ನು ಕಂಡು ಕೌತುಕಗೊಂಡು ಭಾವಾವಿಷ್ಟನಾದವನಂತೆ, ಪ್ರವಾಹವನ್ನೇ ದೃಷ್ಟಿಸುತ್ತಾ ನಿಂ

ತುಕೊಂಡನು. ತರುವಾಯ ಸ್ವಲ್ಪ ಹೊತ್ತಿನೊಳಗಾಗಿಯೇ ಪ್ರವಾಹ ವೇಗಕ್ಕೆ ಸಿಕ್ಕು ಬೇರೊಂದಿಗೆ ಕಿತ್ತು ತೇಲಿಕೊಂಡು ಬರುತ್ತಿದ್ದ ಒಂದು ಅಗಾಧ ವೃಕ್ಷವು ದೃಷ್ಟಿಗೋಚರವಾಯಿತು. ಛಾವಾವಿಷ್ಟನಂತೆ ನಿಂತಿದ್ದ ಹೈದರನು, ಅವನ್ನೇ ಸ್ವಲ್ಪ ಹೊತ್ತು ನಿಟ್ಟಿಸಿ,-'ಆಹಾ, ಇದೇನಾಶ್ಚರ್ಯ ! ಒಂದು ಕಡಲೆಕಾಳಷ್ಟು ಕಲ್ಲನ್ನು ನೀರಿನಲ್ಲಿ ಹಾಕಿದರೆ, ಅದು ಒಡನೆ ಮುಳುಗಿಹೋಗುತ್ತೆ ! ಅಂಥಾದ್ದರಲ್ಲಿ ಇಷ್ಟು ದೊಡ್ಡ - ಭಾರವಾದ ವೃಕ್ಷವು ನೀರಿನಲ್ಲಿ ತೇಲಿಕೊಂಡು ಬರುವುದೆಂದರೇನು ?' ಎಂದು ನುಡಿದನು. ಸುಲ್ತಾನನ ದೃಷ್ಟಿಯು ಅವರಮೇಲೆ ಬಿದ್ದ ತೆಂದೊಡನೆಯೇ ಸಮೀಪದಲ್ಲಿ ನಿಂತಿದ್ದವರೂ ಅದನ್ನು ಕೌತುಕದೃಷ್ಟಿಯಿಂದಲೇ ನೋಡತೊಡಗಿದರು. ಆ ಸಂಬಂಧದಲ್ಲಿ, ಹೈದರನ ಬಾಯಿಂದಬಂದ ಮಾತಿಗೆ ಪ್ರತ್ಯುತ್ತರವಾಗಿ -ಕಲ್ಲು ನೀರಿನಲ್ಲಿ ಮುಳುಗಲೂ, ಮರವು ತೇಲಲೂ ತಮಗೆ ಸೂಕ್ತವೆಂದು ತೋರಿದ್ದ ಕಾರಣಗಳನ್ನು ಒಬ್ಬೊಬ್ಬರೂ ಹೇಳತೊಡಗಿದರು. ಆದರೆ ಹೈದರನೇನೋ, ಆ ವಿವರಣೆಗಳನ್ನು ಕೇಳಿಯೂ ಕೇಳದಂತೆ, ಆ ಅಗಾಧ ಪ್ರವಾಹವನ್ನೂ ನೊರೆನೊರೆಯಾಗಿ ಹರಿದುಹೋಗುತ್ತಿದ್ದ ಆ ನೀರಿನ ಸೆಳೆವನ್ನೂ ಅದರಲ್ಲಿ ತೇಲಿಹೋಗುತ್ತಿದ್ದ ಆ ಅಗಾಧ ವೃಕ್ಷದ ಗತಿಯನ್ನೂ ಕುರಿತು, ಏನೋ ಯೋಚಿಸಿಕೊಳ್ಳುತ್ತಾ ಮೌನವಾಗಿದ್ದನು. ಅಷ್ಟರಲ್ಲಿ ಅಲ್ಲೇ ನಿಂತಿದ್ದ ಪೂರ್ಣಯ್ಯನವರು,-'ಹಾಗಲ್ಲ, ಮಹಾಪ್ರಭೋ ! ಮಹಾತಾಯಿ ಕಾವೇರಮ್ಮ (ಕಾವೇರೀನದಿ)ನಿಗೆ ಆ ಮರದಮೇಲೆ ಅಭಿಮಾನ ಬಹಳ. ತಾನು ಒದಗಿಸಿದ ನೀರಿನಿಂದ ಬೆಳೆದ ಆ ಮರದಮೇಲೆ ಅವಳಿಗೆ ನಿಜವಾಗಿಯೂ ಮಾತೃಪ್ರೇಮವಿದೆ. ಹಾಗೆ ತನ್ನ ಪೋಷಣೆಯಿಂದಲೇ ಬೆಳೆದ ಆ ವೃಕ್ಷವನ್ನು ತಾನೇ ಮುಳುಗಿಸಲು ಎಂದಾದರೂ ಇಷ್ಟಪಟ್ಟೀತೆ ? ಆದುದರಿಂದಲೇ, ಇಷ್ಟು ದೊಡ್ಡ-ಭಾರವಾದ ವೃಕ್ಷವಾದರೂ ಮುಳುಗದೆ ತೇಲಿಹೋಗುತ್ತಲಿದೆ. ಆದರೆ ಕಲ್ಲಿಗೂ ನೀರಿಗೂ ಸಂಬಂಧವೇನಿದೆ ? ಆದುದರಿಂದಲೇ ಆ ಕಲ್ಲು ಎಷ್ಟು ಸಣ್ಣದಾಗಿದ್ದರೂ ಅದು ನೀರಲ್ಲಿ ಮುಳುಗಿಹೋಗುತ್ತದೆ. ಮರವು ಇಷ್ಟುದೊಡ್ಡದಾಗಿದ್ದರೂ ನದಿಯು ಅದನ್ನು ಮುಳುಗಿಸದೆ ತಾನು ಬೆಳೆಸಿದ ವೃಕ್ಷವೆಂಬ ಅಭಿಮಾನದಿಂದ ಅದನ್ನು ತೇಲಿಸುತ್ತದೆ' ಎಂದು ನುಡಿದರು.

ಅಲಂಕಾರಿಕ ಭಾಷೆಯಿಂದ, ಅಕಸ್ಮಾತ್ತಾಗಿ ಅವರ ಬಾಯಿಂದ ಬಂದ ಈ ಮಾತನ್ನು ಕೇಳಿದೊಡನೆಯೇ ಭಾವಾವಿಷ್ಟನಂತೆ-ಒಂದು ಬಾರಿ ತೇಲಿಹೋಗುತ್ತಿದ್ದ ಸುರವನ್ನೂ, ಮತ್ತೊಂದುಬಾರಿ ಪ್ರವಾಹವನ್ನೂ ನಿಟ್ಟಿಸುತ್ತಾ ನಿಂತಿದ್ದ ಹೈದರನು, ಕೌತುಕಗೊಂಡವನಂತೆ ಪೂರ್ಣಯ್ಯನವರಕಡೆಗೆ ತಿರುಗಿ, ಪೂರ್ಣದೃಷ್ಟಿಯಿಂದಲೋ ಎಂಬಂತೆ, ಒಂದು ಬಾರಿ ಅವರನ್ನು ನೋಡಿದನು. ಆ ಮಾತಿನ ಭಾವವೇನೆಂಬುದು ಮಹಾ ಸೂಕ್ಷ್ಮಮತಿಯಾದ ಆತನಿಗೆ ತಿಳಿದುಹೋಯಿತು. - 'ಮಹನೀಯರು ತಮ್ಮಿಂದ ಪೋಷಿತರಾದವರನ್ನು ಎಂದಿಗೂ ಮುಳುಗಿಸದೆ, ಜೀವನ ಪ್ರವಾಹದಲ್ಲಿ ತೇಲಿಸುವರು: ಅರ್ಥಾತ್ ಕಷ್ಟದಲ್ಲಿ ಕೈಬಿಡದೆ ಹೇಗಾದರೂ ರಕ್ಷಿಸುವರು' ಎಂಬ ಆ ಮಾತಿನ ಭಾವವನ್ನು ಗ್ರಹಿಸಿ, ಹಸನ್ಮುಖದಿಂದಲೂ ಪ್ರಸನ್ನ ನೋಟದಿಂದಲೂ, ಅವರನ್ನು ಅಭಿನಂದಿಸಿ, ಅಲ್ಲಿಂದ ಎಲ್ಲರೊಡನೆ ಹೊರಟು ನಡೆದನಂತೆ !

ಅಂದಿನಿಂದ ಸುಲ್ತಾನನಿಗೆ ಸಾಹುಕಾರ ಅನ್ನದಾನ ಶೆಟ್ಟಿಯ ಗುಮಾಸ್ತರಾಗಿದ್ದ ಪೂರ್ಣಯ್ಯನವರಮೇಲೆ ಒಂದು ಬಗೆಯ ಪ್ರೇಮವು ಉತ್ಪನ್ನವಾಯಿತು. ಅವರು ಸಾಹುಕಾರನ ಲೆಕ್ಕಗಳನ್ನು ತೆಗೆದುಕೊಂಡು ತನ್ನ ಬಳಿಗೆ ಬಂದಾಗಲೆಲ್ಲ, ಅವರ ನಡೆನುಡಿಗಳನ್ನು ಕಂಡು ಪರಮಸಂತೋಷಪಟ್ಟು, ಅವರೊಂದಿಗೆ ಲೋಕಾಭಿರಾಮವಾದ ಮಾತುಕಥೆಗಳನ್ನಾಡುತ್ತ ಸ್ವಲ್ಪಕಾಲ ಕಳೆಯುವನು. ಅವರ ಮಾತುಕಥೆಗಳಿಂದಲೂ, ಸಾಹುಕಾರನ ಲೆಕ್ಕಪತ್ರಗಳ ವಿಷಯದಲ್ಲಿ ಅವರು ತೋರ್ಪಡಿಸುತ್ತಿದ್ದ ಶ್ರದ್ಧೆ ಮತ್ತು ಜಾಗರೂಕತೆಗಳನ್ನು ಗಮನಿಸಿಯೂ, ಹೈದರನಿಗೆ ಅವರು ನಂಬಿಗಸ್ತರು, ಸ್ವಾಮಿಭಕ್ತರು, ತ್ರಿಕರಣ ಶುದ್ಧಿಯುಳ್ಳವರು, ಪ್ರಜ್ಞಾವಂತರು,-ದುರಾಸೆಗೊಳಗಾಗಿ ಅನ್ಯಾಯಮಾರ್ಗಕ್ಕೆ ಬೀಳತಕ್ಕವರಲ್ಲ, ಪಾಪಭೀತರು ಎಂಬ ಮುಂತಾದ ವಿಚಾರಗಳು ಬಹು ಸ್ಪಷ್ಟವಾಗಿ ಹೊಳೆದುವು. ಅಂತಹ ರತ್ನವನ್ನು ಸಂಗ್ರಹಿಸತಕ್ಕದು, ತನ್ನ ಕಾರ್ಯಕ್ಕೆ ಬಹು ಪ್ರಯೋಜನಕಾರಿಯೆಂದು ಯೋಚಿಸಿದನು. ಆದರೆ ತನ್ನ ಆಂತರ್ಯವೇನೆಂಬುದನ್ನೂ, ಅವರ ವಿಷಯದಲ್ಲಿ ತಾನು ಎಷ್ಟುಮಟ್ಟಿಗೆ ಪ್ರಸನ್ನನಾಗಿದ್ದನೆಂಬುವನ್ನೂ ಆಗಲೂ ಯಾವ ವಿಧದಿಂದಲೂ ತೋರ್ಪಡಿಸಿಕೊಳ್ಳಲಿಲ್ಲ. ಸು

ಲ್ತಾನನೊಂದಿಗೆ ಅಷ್ಟು ಪುಟ್ಟಿನ ಸಲಿಗೆಯು ದೊರೆತಿದ್ದಾಗಲೂ, ಗಾಂಭೀರ್ಯ ನಿಧಿಗಳಾದ ಪೂರ್ಣಯ್ಯನವರು ತಮಗೆ ರಾಜಾಶ್ರಯದಲ್ಲಿ ಒಂದು ಉದ್ಯೋಗವನ್ನು ಕೊಡಿಸಿ ಕಾಪಾಡಬೇಕೆಂದು, ಹೈದರನನ್ನು ಕೇಳಿಕೊಳ್ಳಬೇಕೆಂದು ಮನಸ್ಸಿನಲ್ಲಿ ಯೋಚಿಸಲೂ ಇಲ್ಲ.

ಹೈದರನೇನೋ ಸ್ವಯಂ ಅನಕ್ಷರಸ್ಥನೇ ಆಗಿದ್ದರೂ, ಮಹಾ ವ್ಯವಹಾರಚತುರನಾದುದರಿಂದ ಇತರ ವಿದ್ಯಾವಂತರಲ್ಲಿದ್ದ ವಿದ್ಯೆಯನ್ನು ತನ್ನ ಕಾರ್ಯಕ್ಕೆ ಹೇಗೆ ಉಪಯೋಗಿಸಿಕೊಳ್ಳಬಹುದೆಂಬ ವಿಷಯದಲ್ಲಿ ಮಹಾ ಪ್ರೌಢನಾಗಿದ್ದನು. ಸಂಸ್ಥಾನದ ರಾಜಕಾರ್ಯವನ್ನು ಪ್ರತ್ಯೇಕ ಪ್ರತ್ಯೇಕ ಇಲಾಖೆಗಳಾಗಿ ವಿಂಗಡಿಸಿ, ಒಂದೊಂದು ಇಲಾಖೆಗೂ ಒಬ್ಬೊಬ್ಬ ಮುಖ್ಯಾಧಿಕಾರಿಯನ್ನು ನಿಯಮಿಸಿ, ಅವನು ಮಾಡಿದ ಕೆಲಸವನ್ನು ಬಹು ಸೂಕ್ಷ್ಮ ರೀತಿಯಿಂದ ವಿಮರ್ಶಿಸುತ್ತ, ತಾನು ಹೇಳಿ ಬರೆಯಿಸಿದ ಪತ್ರಗಳನ್ನು ಬೇರೊಬ್ಬರಿಂದ ಓದಿಸಿಕೇಳುತ್ತ, ಹೀಗೆ ಮೈಯೆಲ್ಲಾ ಕಣ್ಣಾಗಿದ್ದವನಂತೆ ರಾಜಕಾರ್ಯಗಳನ್ನು ನಿರ್ವಹಿಸುತ್ತಿದ್ದನು. ಆಗ ಕನ್ನಡ ದಪ್ತರವನ್ನು (Kannada Records) ವೆಂಕಟರಮಣಯ್ಯ ಎಂಬೊಬ್ಬ ವೃದ್ಧನು ನೋಡಿಕೊಳ್ಳುತ್ತಿದ್ದನು. ಮುಂದೆ ಕೆಲವು ದಿನಗಳಲ್ಲೇ ಆತನ ಬಳಿ ಒಂದು ಗುಮಾಸ್ತೆಯ ಉದ್ಯೋಗವು ಖಾಲೀ ಬಿದ್ದಿತು. ಅದಕ್ಕೆ ತನ್ನ ಸಂಬಂಧಿಕರಲ್ಲಿ ಯಾವನಾದರೊಬ್ಬನನ್ನು ನಿಯಮಿಸಬೇಕೆಂದು ಆತನು ಸನ್ನಾಹ ನಡೆಸಿರಲು, ಸುಲ್ತಾನನು ಆ ಕೆಲಸಕ್ಕೆ ಪೂರ್ಣಯ್ಯನವರನ್ನು ನಿಯಮಿಸಿ ಅವರಿಗೆ ಕೆಲಸಕ್ಕೆ ಬಂದು ಸೇರುವಂತೆ ತಿಳಿಸಬೇಕೆಂದು ಆಜ್ಞಾಪಿಸಿದನು. ತನ್ನ ಗುಮಾಸ್ತೆಯ ವಿಷಯದಲ್ಲಿ ಅಕಸ್ಮಾತ್ತಾಗಿ ಹಾಗೆ ಸುಲ್ತಾನರ ಅನುಗ್ರಹವುಂಟಾಗುವುದಕ್ಕೆ ಕಾರಣವೇನೋ ತಿಳಿಯದೆ, ಅನ್ನದಾನಶೆಟ್ಟಿಗೂ ಇತರ ವರ್ತಕರಿಗೂ ಪರಮಾಶ್ಚರ್ಯವಾಯಿತು. ಪೂರ್ಣಯ್ಯನವರಂತಹ ನಂಬಿಗಸ್ತರೂ, ಶ್ರದ್ಧಾಸಂಪನ್ನರೂ ಸಿಕ್ಕುವುದು ದುರ್ಲಭವೆಂದೂ, ಅವರ ಮೇಲೆ ರಾಜಾನುಗ್ರಹವಾಗಿರುವಾಗ ಅದಕ್ಕೆ ವ್ಯತಿರಿಕ್ತವಾಗಿ ನಡೆಯುವುದು ಅಸಾಧ್ಯವೆಂದೂ ಯೋಚಿಸಿ, ಪೂರ್ಣಯ್ಯನವರನ್ನು ಅಭಿನಂದಿಸಿ, ತನ್ನ ಕಾರ್ಯಸ್ಥಾನದಿಂದ ಕಳುಹಿಸಿದನು. ತಮ್ಮ ಮೇಲೆ ಅಪ್ರಾರ್ಥಿತವಾಗಿ ಸುಲ್ತಾನನಿಗೆ ದಯೆಯುಂಟಾದುದಕ್ಕೆ ಪೂರ್ಣಯ್ಯನವರು ವಿಸ್ಮಯಗೊಂಡ

ರಾವರೂ, ಅವಕ್ಕೆ ಕಾವೇರಿ ಪ್ರವಾಹದಲ್ಲಿ ಮರವು ತೇಲಿಬಂದದಿನ ತಮ್ಮ ಮೇಲೆ ಸುಲ್ತಾನನಿಗುಂಟಾದ ಪ್ರಸನ್ನತೆಯೇ ಕಾರಣವೆಂದು ಭಾವಿಸಿ, ಸಮಯೋಚಿತವಾಗಿ ತಮಗೆ ಹೊಳೆದ ಆ ಸಂಗತಿಗಾಗಿ ಭಗವಾನನಿಗೆ ಕೃತಜ್ಞತೆಯಿಂದ ವಂದಿಸಿದರು. ಸುಲ್ತಾನನ ಆಜ್ಞೆಯಂತೆ ಪೂರ್ಣಯ್ಯನವರು ಗುಮಾಸ್ತೆಯ ಕೆಲಸಕ್ಕೆ ಸೇರಿ, ಬಹು ಶೀಘ್ರಕಾಲದಲ್ಲೇ ಅದಕ್ಕೆ ಸಂಬಂಧಪಟ್ಟ ಕೆಲಸಕಾರ್ಯಗಳ ಮಾಹಿತಿಯನ್ನು ಸಂಪಾದಿಸಿದರು. ತಮಗೆ ಸ್ವಾಭಾವಿಕವಾದ ಚಟುವಟಿಕೆ ಚಾತುರ್ಯಗಳಿಂದ ತಮ್ಮ ಭಾಗದ ಕೆಲಸವನ್ನು ತೃಪ್ತಿಕರವಾಗುವಂತೆ ನಿರ್ವಹಿಸಿ ಸಕಲರಿಗೂ ಅಚ್ಚುಮೆಚ್ಚಾದರು. ಮುಂದೆ ಕೆಲವು ದಿನಗಳಲ್ಲೇ ವೆಂಕಟರಮಣಯ್ಯನು ಕಾಲಾಧೀನನಾದನು. ಆಗ ತೋಷೀಖಾನೆಯ ಬಕ್ಷಿ ಅಸದಲ್ಲೀಖಾನನೆಂಬಾತನು ಬುದ್ಧಿವಂತರಾದ ಪೂರ್ಣಯ್ಯನವರೇ ಆ ಸ್ಥಾನಕ್ಕೆ ಅರ್ಹರೆಂದು ನವಾಬ್ ಹೈದರಲ್ಲೀಖಾನನ ಬಳಿ ಪ್ರಶಂಸೆ ಮಾಡಿ, ಆ ಉದ್ಯೋಗವು ಅವರಿಗೇ ದೊರೆಯುವಂತೆ ಮಾಡಿದನು. ತಮ್ಮ ಆ ನೂತನ ಅಧಿಕಾರಸ್ಥಾನದಲ್ಲಿದ್ದು ಅವರು ತೋರ್ಪಡಿಸಿದ ಕಾರ್ಯಶ್ರದ್ಧೆಯು ದಿನದಿನಕ್ಕೆ ಸುಲ್ತಾನನಿಗೆ ಹೆಚ್ಚುಹೆಚ್ಚು ತೃಪ್ತಿಕರವಾಗಸಾಗಿತು. ಮಹಾತೀಕ್ಷ್ಣ ಪ್ರಕೃತಿಯ ಹೈದರನಿಗೂ ಅವರ ವಿಷಯದಲ್ಲಿ ಒಂದು ದಿನವೂ ಅಸಮಾಧಾನಪಟ್ಟುಕೊಳ್ಳಲು ಕಾರಣವೊದಗಲಿಲ್ಲ. ಬೇಕೆಂದ ದಾಖಲೆಯನ್ನು ಅಪೇಕ್ಷಿಸಿದೊಡನೆಯೇ ಒದಗಿಸಿಕೊಡುತ್ತಿದ್ದ ಪೂರ್ಣಯ್ಯನವರ ಜಾಣ್ಮೆಯು, ನವಾಬನಿಗೆ ಅವರ ವಿಷಯದಲ್ಲಿ ಹೆಚ್ಚಿನ ಮೆಚ್ಚುಗೆಯನ್ನುಂಟುಮಾಡಲು ಕಾರಣವಾಯಿತು. ಪೂರ್ಣಯ್ಯನವರಂತೆಯೇ, ಅದೇ ತೋಷೀಖಾನೆಯಲ್ಲಿ ಒಂದಿನೀವಸ್ತ್ರದ ಕೆಲಸವನ್ನು ನೋಡಿಕೊಳ್ಳುತ್ತಿದ್ದ ಗಿರಿಧರರಾಯರೆಂಬುವರ ತಮ್ಮನಾದ ಕೃಷ್ಣರಾಯನೂ ನವಾಬನ ಅಭಿಮಾನಕ್ಕೆ ಪಾತ್ರನಾಗಿದ್ದನು. ಚಿತ್ರದುರ್ಗದಬಳಿ ಇದ್ದಾಗ, ನವಾಬನು ಅವರಿಬ್ಬರಿಗೂ ತಿಂಗಳಿಗೆ ನೂರುನೂರುವರಹ ಸಂಬಳವೆಂದು ಗೊತ್ತುಮಾಡಿದ್ದಲ್ಲದೆ, ಇಬ್ಬರಿಗೂ ಚಿನ್ನದ ತೋಡಾವನ್ನು, ಒಂದೊಂದು ಶಾಲನ್ನೂ ಬಹುಮಾನವಾಗಿ ಕೊಡಿಸಿ ಗೌರವಿಸಿದನು. ಅಲ್ಲಿಂದ ಮುಂದೆ, ಎಲ್ಲಾ ಕೆಲಸಗಳಿಗೂ, ನವಾಬನ ಪ್ರೇಮಕ್ಕೆ ಪಾತ್ರರೂ, ನಂಬಿಕೆಗೆ ಅರ್ಹರೂ ಆದ ಇವರೇ ಮುಂದಾಳುಗಳಾಗಿ ಓಡಾಡು

ತ್ತಿದ್ದರು. ತರುವಾಯ ಕೆಲವು ದಿವಸಗಳಲ್ಲೇ, ಪೂರ್ಣಯ್ಯನವರಿಗೆ ಮು
ಲ್ಕೀ ಮತ್ತು ಫೌಜು ಈ ಎರಡು ಇಲಾಖೆಗಳ ಮುಖ್ಯಾಧಿಕಾರವೂ ವಹಿಸ
ಲ್ಪಟ್ಟಿತು. ಬಹು ಜವಾಬುದಾರಿಯ ಆ ಎರಡು ಉದ್ಯೋಗಗಳು ತಮ್ಮ
ಪಾಲಿಗೆ ಬಂದಿದ್ದಾಗಲೂ, ಪೂರ್ಣಯ್ಯನವರು ಕೆಲಸದಲ್ಲಿ ಯಾವ ಬಗೆ
ಯ ಲೋಪಕ್ಕೂ ಅವಕಾಶವುಂಟಾಗದಂತೆ ಕಾರ್ಯ ನಿರ್ವಹಣಮಾಡಿ,
ನವಾಬನು ತಮ್ಮ ವಿಷಯದಲ್ಲಿಟ್ಟಿದ್ದ ನಂಬಿಕೆ ವಿಶ್ವಾಸಗಳಿಗೆ ಕುಂದಕ
ವುಂಟಾಗದಂತೆ ನಡೆದುಕೊಂಡರು. ಸುಪ್ರೀತನಾದ ಹೈದರನು ಅವರಿಗೆ
ವರಾವಕ್ಕಿ ಎಂಬೊಂದು ಗ್ರಾಮವನ್ನು ಜಹಗೀರಾಗಿ ಕೊಟ್ಟು ಬಹುಮಾ
ನಿಸಿದನು.

ಪೂರ್ಣಯ್ಯನವರು ಸ್ವಸಾಮರ್ಥ್ಯದಿಂದಲೂ, ತಮ್ಮ ಸದ್ಗುಣ ಸನ್ನಡ
ತೆಗಳಿಂದಲೂ ಪ್ರಭುಕಟಾಕ್ಷಕ್ಕೆ ಪಾತ್ರರಾಗಿ ದಿನದಿನಕ್ಕೆ ಅಭಿವೃದ್ಧಿಗೆ ಬರು
ತ್ತಿದ್ದುದು, ಅಸೂಯಾಪರರಾದ ಇತರ ಕೆಲವರಿಗೆ ಸಹನೆಯಾಗಲಿಲ್ಲ. ನಿರ
ಪರಾಧಿಗಳಾದ ಅವರನ್ನು ಹೇಗಾದರೂ ಅಪರಾಧಿಗಳೆನ್ನಿಸಿ ತೊಂದರೆಗೀಡು
ಮಾಡಬೇಕೆಂದು ಕೆಲ ದುರಾತ್ಮರು ಹೊಂಚಿಕೊಂಡಿದ್ದರು. ಹಾಗೆ ಅವರ
ವಿಷಯದಲ್ಲಿ ಕೆಡುಕನ್ನು ಹಾರೈಸಿಕೊಂಡಿದ್ದವರಲ್ಲಿ ಅಂಚೆ ಶಾಮಯ್ಯನೆಂಬು
ವನು ಪ್ರಮುಖನು. ಮೊದಲು ಶ್ಯಾನುಭೋಗನಾಗಿದ್ದ ಆತನು, ಅಂಚೆ
ಇಲಾಖೆಯಲ್ಲಿ ಹೆಚ್ಚು ಹುಟ್ಟುವಳಿಯನ್ನು ತೋರಿಸಿಕೊಡುತ್ತೇನೆಂದು ಹೈದ
ರನಿಗೆ ಭರವಸೆಕೊಟ್ಟು, ಆ ಇಲಾಖೆಯ ಯಜಮಾನ್ಯವನ್ನು ಸಂಪಾದಿಸಿ
ಕೊಂಡನು.

ಈ ಶಾಮಯ್ಯನು ಬಹು ಘಾತುಕನೂ ಮತ್ತು ನಿಷ್ಠುರಿಯೂ. ಇವ
ನು ಮಾಡಿದ ಕಪಟೋಪಾಯಗಳಿಂದ ಅನೇಕ ಸಜ್ಜನರು ಮಹಾಕಷ್ಟಕ್ಕೆ
ಈಡಾದರೆಂದು ಹೇಳಲ್ಪಟ್ಟಿದೆ. ಅನೇಕ ಸಂಸಾರಗಳನ್ನು ದುರ್ದೆಸೆಗೆ ಗು
ರಿಮಾಡಿದ ಪರಮ ನೀಚನಿವನು. ಗಡಿಗಳ ಅಮಲ್ದಾರರೊಡನೆಯೂ, ತನ
ಗಾಗದ ಇತರ ಜನಗಳೊಡನೆಯೂ ವಿಶೇಷ ಹಣ ಬಾಕಿಯಿರುವಂತೆ
ಸುಳ್ಳು ಪಟ್ಟಿಗಳನ್ನು ಹುಟ್ಟಿಸಿ, ಅದನ್ನು ವಸೂಲುಮಾಡುವುದಕ್ಕಾಗಿ ಅವ
ರನ್ನು ಚಿತ್ರಹಿಂಸೆಗೊಳಪಡಿಸುವನು. ಸುಲಭವಾಗಿ ಆ ದಂಡದ ಹಣವನ್ನು
ಕೊಡದೆಯಿದ್ದವರನ್ನು ಕೊರಡೆಯಿಂದ ಹೊಡೆಯಿಸುವನು, ತಗಾದಿ ಪೀಡಿಸಿ

ಕಟ್ಟಿಸಿ ಸಿಲ್ಲಿಸುವನು, ಗಿಡ್ಡಂಗಿಯಲ್ಲಿ ಕೂಡಿಸುವನು, ಆನೆಯಕಾಲಿಗೆ ಕಟ್ಟಿಸಿ ಎಳೆಯಿಸುವನು. ಆ ದುರಾತ್ಮನ ಕೈಗೆ ಸಿಕ್ಕಿಬಿದ್ದ ದುರ್ದೈವಿಗಳನ್ನು ಯಮ ಯಾತನೆಗೊಳಿಸಲು ಅವನಿಗೆ ಸಹಾಯಕನಾಗಿ, ರೂಮಿಖಾಜರಿ ಎಂಬೊಬ್ಬ ತುರ್ಕೀದೇಶದವನು ಇದ್ದನಂತೆ!—ಆ ಪಾಪಿಯ ದೃಷ್ಟಿಗೆ ಬಿದ್ದವರು ಪುನಃ ಜೀವಂತರಾಗಿ ಉಳಿವುದೇ ಅಪೂರ್ವವೆನ್ನಿಸಿದ್ದಿತು. ಹೀಗೆ ಅಂಚೆ ಶ್ಯಾಮಯ್ಯನು ಜನಗಳಿಗೆ ಉಂಟುಮಾಡಿದ ಹಿಂಸೆಗಳು ಅಪರಿಮಿತವಾಗಿರುವುವೆಂದು ಹೇಳಲ್ಪಟ್ಟಿದೆ. ಅವುಗಳಲ್ಲಿ ಒಂದೆರಡನ್ನು ಮಾತ್ರ ಇಲ್ಲಿ ಕೊಡುತ್ತೇವೆ.

ಒಂದಾನೊಂದು ವೇಳೆ ನವಾಬ್ ಹೈದರಾಲಿಯು ಸೀರ್ಯದ ಬಳಿಗೆ ಪ್ರಯಾಣವಾಗಿ ಬಂದನು. ಆಗ ಅಲ್ಲಿಯ ಮುಖ್ಯಾಧಿಕಾರಿಯಾಗಿದ್ದ ರಘುಪತಯ್ಯನೆಂಬಾತನು ಏನೋ ಗೃಹಕೃತ್ಯದ ತೊಂದರೆಯಿಂದ ಬಂದು ಹೈದರನನ್ನು ಎದುರುಗೊಳ್ಳಲು ಸಾಧ್ಯವಾಗಲಿಲ್ಲವಂತೆ! ಅಷ್ಟಕ್ಕೇ ಅಂಚೇ ಶಾಮಯ್ಯನು, ಅವನು ಹೈದರನನ್ನು ಅಲಕ್ಷ್ಯಮಾಡಿ-ಅಹಂಕಾರದಿಂದ ಬರಲಿಲ್ಲವೆಂದು ಅವನಮೇಲೆ ತಪ್ಪು ಹೊರಿಸಿದನು. ಅದನ್ನು ಪುಷ್ಟೀಕರಿಸಲು ಇಲ್ಲದ ಸಲ್ಲದ ಇನ್ನೂ ಕೆಲವು ದೂರುಗಳನ್ನು ಹೈದರನಲ್ಲಿ ಹೇಳಿ ಅವನನ್ನು ರೇಗಿಸಿದನು. ಒಡನೆ ಅವನನ್ನು ಹಿಡಿಸಿ, ಶ್ರೀರಂಗಪಟ್ಟಣಾಕ್ಕೆ ಕಳುಹಿಸಿ, ಮಾನಭಂಗಪಡಿಸಿದನು. ಅಷ್ಟಕ್ಕೇ ಮುಗಿಯಲಿಲ್ಲ. ಅವನ ತಪ್ಪಿತಕ್ಕಾಗಿ, ಅವನ ಸಂಬಂಧಿಗಳಾದ ಇತರ ಹಲವರೂ ತಮ್ಮ ತಮ್ಮ ಉದ್ಯೋಗಗಳನ್ನು ಕಳೆದುಕೊಳ್ಳಬೇಕಾಯಿತು. ಸಾಲದುದಕ್ಕೆ ಅವರಿಂದಲೆಲ್ಲ ವಿಶೇಷ ದಂಡವನ್ನೂ ತೆರಿಸಿದನು. ಅಂಚೇ ಶಾಮಯ್ಯನ ದೌರ್ಜನ್ಯಕ್ಕೆ ಹಿಂದೂ ಮುಹಮ್ಮದೀಯರೆಂಬ ಭೇದವಿಲ್ಲದೆ ಎಲ್ಲರೂ ಒಳಗಾಗುತ್ತಿದ್ದರು. ಬೇರೊಂದು ವೇಳೆ ನಾಮುಕಲ್ ಖಾದರ್ ಸಾಬಿ ಎಂಬೊಬ್ಬ ದುರ್ದೈವಿಯು ಏನೋ ಕಾರಣದಿಂದ ಶ್ಯಾಮಯ್ಯನ ಕೋಪಕ್ಕೆ ಪಾತ್ರನಾದನು! ಸರಿ, ಒಡನೆಯೇ ಶ್ಯಾಮಯ್ಯನು, ಅವನಮೇಲೆ ವಿಶೇಷವಾಗಿ ದಂಡಹೊರಿಸಿ, ಅದಕ್ಕಾಗಿ ಅವನ ಮಾವನ ಆಸ್ತಿಯನ್ನು ಸೇರಿಸಿಕೊಂಡು, ನಿಂತ ಹಣದ ವಸೂಲಿಗಾಗಿ ಖಾದರ್ ಸಾಬಿಗೆ ಅಗಾಡಿ ಪಿಚಾಡಿ ಕಟ್ಟಿಸಿ, ಹೊಡೆಸಿ ಕೊಲ್ಲಿಸಿದನು. ತರುವಾಯ ಅಷ್ಟಕ್ಕೇ ಬಿಡದೆ, ಅವನ ಮನೆಯಲ್ಲಿ ರೂಪವತಿಯು

ರಾದ ಇಬ್ಬರು ಸ್ತ್ರೀಯುರಿರುವರೆಂದು ಹೈದರನಿಗೆ ತಿಳಿಸಿ, ಅವರನ್ನು ಅಪಹ
ರಿಸಲು ಜನಗಳನ್ನು ಕಳುಹಿಸಿದನು. ಖಾದರ್ ಸಾಬಿಯ ತಮ್ಮನು ಈ
ಅಪಮಾನವನ್ನು ಸಹಿಸಲಾರದೆ, ಮನೆಯವರನ್ನೆಲ್ಲ ಕತ್ತರಿಸಿಹಾಕಿ, ತಾನೂ
ಖಡ್ಗದಿಂದ ಇರಿದುಕೊಂಡು ಮೃತನಾದನು.

ಇಂತಹ ಪರಮ ನೀಚನಾದ ಶ್ಯಾಮಯ್ಯನ ವಕ್ರದೃಷ್ಟಿಯು ಒಂದು
ಬಾರಿ ಪೂರ್ಣಯ್ಯನವರಮೇಲೆ ಬಿದ್ದಿತು. ಅವರು ಸ್ವಸಾಮರ್ಥ್ಯದಿಂದ
ದಿನದಿನಕ್ಕೆ ಹೆಚ್ಚು ಹೆಚ್ಚು ಜನಪ್ರಿಯರಾಗುತ್ತಿದ್ದುದೂ, ರಾಜಾನುಗ್ರ
ಹಕ್ಕೆ ಪಾತ್ರರಾಗಿದ್ದುದೂ, ಶ್ಯಾಮಯ್ಯನಿಗುಂಟಾದ ಅಸಮಾಧಾನಕ್ಕೆ ಕಾರ
ಣಗಳು. ಒಡನೆ ಅವರನ್ನು ಸ್ವಲ್ಪ ಕಿರುಗುಟ್ಟಿಸಿ ಹಣ್ಣುಮಾಡಬೇಕೆಂದು
ಆ ಪಾಪಿಗೆ ಇಚ್ಛೆಯಾಯಿತು. ಸರಿ, ಮುಂದೆ ಕೇಳಬೇಕಾದುದೇನು ? ಅವ
ರಮೇಲೆ ಏನೋ ಒಂದು ಸುಳ್ಳುಲೆಕ್ಕವನ್ನು ಸೃಷ್ಟಿಸಿ, ಅವರಿಂದ ೧,೧೧,೦೦೦
ವರಹಾಗಳು ಸರಕಾರಕ್ಕೆ ದಂಡವಾಗಿ ಬರಬೇಕೆಂದು ತಗಾದೆ ಹಚ್ಚಿದನು.
ಆ ದಂಡದ ಹಣವು ಸಕಾಲಕ್ಕೆ ಬಾರದ್ದರಿಂದ ಅವರನ್ನು *ಗಿಡ್ಡಂಗಿಯಲ್ಲಿ
ಕೂಡಿಸಿದನು. ಮಹಾಚತುರರಾದರೂ, ಕರ್ತೃತ್ವಶಾಲಿಗಳಾದರೂ, ಆಗ
ಅವರ ಆಟವೇನೂ ನಡೆಯದೆ ಪೂರ್ಣಯ್ಯನವರು ಆ ದುರುಳನೊಡ್ಡಿದ
ಬಲೆಗೆ ಬಿದ್ದು ಕೆಲಕಾಲ ಬಹು ಸಂಕಟಪಟ್ಟರು. ಅಷ್ಟರಲ್ಲಿ ಬಚ್ಚೇರಾಯ
ನೆಂಬ ಅವರ ಸ್ನೇಹಿತನು, ಆಗ ಅಧಿಕಾರದಲ್ಲಿದ್ದ ಬರಕ್ಕಿ (ಒಕಿಗ್) ಶ್ರೀನಿ
ವಾಸರಾಯರೆಂಬುವರಿಗೆ, ಮಾನನಿಧಿಯಾದ ಪೂರ್ಣಯ್ಯನವರ ಗೌರವವ
ನ್ನುಳಿಸಬೇಕೆಂದು ಹೇಳಿಕೊಂಡು, ಅವರ ಮೂಲಕ ಹೈದರನಿಗೆ ತಿಳಿಸಿ, ಅತ
ನ ಲಕ್ಷ್ಯವು ಅವರ ಕಡೆಗೆ ತಿರುಗುವಂತೆ ಮಾಡಿದನು. ಪೂರ್ಣಯ್ಯನವರ
ಮೇಲೆ ಹೈದರನಿಗಿದ್ದ ಅಭಿಮಾನಕ್ಕೆ, ಅವರನ್ನು ಒಡನೆ ಆ ಬಂಧನದಿಂದ

---

*'ಗಿಡ್ಡಂಗಿ'ಯೆಂಬುದು ಸೆರೆಮನೆಯಲ್ಲಿನ ಒಂದು ಬಗೆಯ ಬಂಧನಾ ವಿಶೇಷವಂತೆ'
ಮೇಲ್ಭಾಗವು ಚೂಪಾಗಿರುವಂತೆ ನಿಬಿಡವಾಗಿ ನೆಟ್ಟ ಮೊಳೆಗಳಿಂದ ಅಲ್ಲಿಯ ನೆಲವು ವ್ಯಾಪ್ತ
ವಾಗಿರುವುದು. ಮಧ್ಯೆ ಒಂದು ಚದುರ ಅಡಿಯಷ್ಟು ಸ್ಥಳಮಾತ್ರ ಖಾಲೀ ಇದ್ದು ಅಪರಾ
ಧಿಯು ಆ ಸ್ಥಳದಲ್ಲಿ, ಆಚೀಚೆಗೆ ಬಿದ್ದರೆಲ್ಲಿ, ಅಲುಗಾಡಿದರೆಲ್ಲಿ ಮೊಳೆಗಳು ಮೈಯಲಿ
ನಟ್ಟುಕೊಳ್ಳುವುವೋ ಎಂಬ ಭಯದಿಂದ ತಲ್ಲಣಗೊಂಡು, ನಿದ್ರಾಹಾರಗಳಿಲ್ಲದೆ ಸಂಕಟಪ
ಡುತ್ತ ಹೆಜ್ಜೆಗಳ ಮೇಲೆಯೇ ಕುಳಿತಿರಬೇಕಾಗುವುದು.

ನಿವೃತ್ತಿಗೊಳಿಸಿ, ಬಹುಮಾನಮಾಡಿ, ಆಚಾತುರ್ಯದಿಂದ ನಡೆದುಹೋದ ಕಾರ್ಯಕ್ಕೆ ಪಶ್ಚಾತ್ತಾಪವನ್ನು ವ್ಯಕ್ತಗೊಳಿಸಬೇಕಾಗಿದ್ದುದು ಸಹಜವಾದುದು. ಆದರೆ, ಹೈದರನಿಗೆ ದ್ರವ್ಯಸಂಪಾದನಾ ವಿಷಯದಲ್ಲಿ ಸ್ನೇಹ, ಬಾಂಧವ್ಯ, ಸ್ವ-ಪರಕೀಯ ಮುಂತಾದ ಯಾವ ಸಂಬಂಧವೂ ಅಡ್ಡಬರುತ್ತಿರಲಿಲ್ಲ. 'ಅರ್ಥಾತುರಾಣಾಂ ನಗುರುರ್ನಬಂಧುಃ' ಎಂಬೀ ನೀತಿವಾಕ್ಯವು ಆತನ ವಿಷಯದಲ್ಲಿ ಅಕ್ಷರಶಃ ನಿಜವಾಗಿದ್ದಿತು. ಪೂರ್ಣಯ್ಯನವರು ಅವರಮೇಲೆ ಬಾಕಿಯಾಗುವ ಹಣವನ್ನು ತೀರಿಸಿ ತರುವಾಯ ಗಿಡ್ಡಂಗಿಯಿಂದ ಬಿಡುಗಡೆ ಹೊಂದಬಹುದೆಂದು ಹೈದರನು ಅನುಮತಿಸಿದನು. ಅಷ್ಟೇ ಅಲ್ಲ. ಹಾಗೆ ಬಿಡುಗಡೆ ಹೊಂದಿದಮೇಲೆ, ಅವರ ಪೂರ್ವದ ಉದ್ಯೋಗವನ್ನು ಅವರು ಪುನಃ ಪಡೆಯಬಹುದೆಂದೂ ನವಾಬನ ಅಪ್ಪಣೆಯಾಯಿತು. ಆದರೆ, ಆ ಲಕ್ಷಾಂತರ ದ್ರವ್ಯವನ್ನು ತೀರಿಸಿ, ಸೆರೆಮನೆಯಿಂದ ಹೊರಬೀಳುವುದು ಹೇಗೆ?

ಪೂರ್ಣಯ್ಯನವರಿಗೆ ಇಂತಹ ಸಂಕಟಕಾಲ ಒದಗಿದೆಯೆಂಬ ಸಂಗತಿಯು ಅನ್ನದಾನಚೆಟ್ಟಿಗೆ ತಿಳಿಯಿತು. ಸತ್ಪುರುಷರಾದ ಅವರಿಗೆ ಪ್ರಾಪ್ತವಾದ ಆ ಬಂಧನಕ್ಕಾಗಿ ಆತನು ಬಹು ವ್ಯಥೆಪಟ್ಟು, ಅವರ ಬಂಧನವನ್ನು ನೀಗಿಸಿ ಅವರನ್ನು ಸ್ವತಂತ್ರರನ್ನಾಗಿಸುವ ವಿಷಯದಲ್ಲಿ ತಾನು ಹೇಗೆ ಸಹಕರಿಸಬಹುದಾಗಿ ಯೋಚಿಸಿ, ಅಧಿಕಾರಿಗಳ ಬಳಿಗೆ ನೇರವಾಗಿ ನಡೆದುಹೋಗಿ, ಅವರ ಕಡೆಯಿಂದ ವಸೂಲಾಗಬೇಕೆಂದು ತೋರಿಸಿದ ಲೆಕ್ಕಕ್ಕೆ ತಾನೂ ಸರಸಪಟ್ಟಿಯೂ ಹೊಣೆಯಾಗಿ ನಿಂತು, ಅವರನ್ನು ಬಂಧನದಿಂದ ಬಿಡುಗಡೆಮಾಡಿಸಿದನು. ಆ ಹಣವನ್ನು ಅನ್ನದಾನಚೆಟ್ಟಿಯೇ ಪೂರ್ತಿಯಾಗಿ ಸಲ್ಲಿಸಿದಮೇಲೆ, ಪೂರ್ಣಯ್ಯನವರಿಗೆ ಅವರ ಉದ್ಯೋಗವು ಪುನಃ ದೊರೆಯಿತು. ಹೀಗೆ ನಮ್ಮ ಕಥಾನಾಯಕರು ದುಷ್ಟನಾದ ಅಂಚೆ ಶ್ಯಾಮಯ್ಯನ ಕುತಂತ್ರಕ್ಕೆ ಸಿಕ್ಕಿಬಿದ್ದರೂ, ಮುಂದೆ ಅವರ ಮೂಲಕ ನಡೆಯಬೇಕಾದ ಅಗಾಧ ಕೆಲಸಗಳು ಬೇಕಾಗಿದ್ದುದರಿಂದಲೋ ಎಂಬಂತೆ, 'ಗಿಡ್ಡಂಗಿ'ಯಿಂದ ಬಿಡುಗಡೆ ಹೊಂದಿ, ಪುನಃ ಪೂರ್ವದ ಅಧಿಕಾರ ಸ್ಥಾನವನ್ನೇ ಪಡೆದರು.



## ಅಧ್ಯಾಯ ೩ "ಸುಲ್ತಾನನ ಮೃತ್ಯು"

ದುರ್ದೈವವಶದಿಂದ ಮೇಲ್ಕಂಡಂತೆ ಬಂಧನಕ್ಕೆ ಒಳಪಟ್ಟಿದ್ದರಾದರೂ, ಪೂರ್ಣಯ್ಯನವರಮೇಲೆ ಹೈದರನಿಗಿದ್ದ ನಂಬಿಕೆಯಾಗಲೀ, ಅಭಿಮಾನವಾಗಲೀ ಕಡಮೆಯಾಗಿರಲಿಲ್ಲ. ಕೆಲವು ದಿವಸಗಳೊಳಗಾಗಿ ಹೈದರನು ಅವರನ್ನು ತನ್ನ ಮಂತ್ರಾಲೋಚಕ ಸಭಿಕರಲ್ಲಿ ಒಬ್ಬರನ್ನಾಗಿ ಚುನಾಯಿಸಿಕೊಂಡನು. ಆಗ ಮಂತ್ರಾಲೋಚನಾ ಸಭೆಯೆಂಬುದೊಂದು ಪ್ರತ್ಯೇಕವಾಗಿ ಏರ್ಪಟ್ಟಿರಲಿಲ್ಲವಾದರೂ, ಅಬೂ ಮಹಮ್ಮದ್ ಮಿರ್ಜ, ತೋಷೀಖಾನೆ ಕೃಷ್ಣರಾಯರು, ಪೂರ್ಣಯ್ಯನವರು, ಅಂಚೆ ಶ್ಯಾಮಯ್ಯ, ಮತ್ತು ಮೀರ್ ಮಹಮ್ಮದ್ ಸಾದಕ್ ಇವರು ಹೈದರನ ಆಪ್ತವರ್ಗಕ್ಕೆ ಸೇರಿದವರಾಗಿದ್ದರು. ಹೈದರನು ಯಾವ ಕಾರ್ಯಮಾಡಬೇಕಾಗಿದ್ದರೂ, ಇವರ ಆಲೋಚನೆ ಕೇಳಿ, ತರುವಾಯ ತಾನು ಯುಕ್ತಾಯುಕ್ತ ವಿಚಾರಮಾಡಿ, ನಂತರ ಸೂಕ್ತ ತೋರಿದಂತೆ ಕೆಲಸಮಾಡುತ್ತಿದ್ದನು. ಹೀಗಿರುವಲ್ಲಿ ೧೭೮೨ನೆಯ ಸಂವತ್ಸರದ ನವಂಬರು ತಿಂಗಳಲ್ಲಿ ಹೈದರನಿಗೆ ಬೆನ್ನುಫಣಿ ಎಂಬ ಮಹಾ ಅಪಾಯಕರವಾದ ವ್ರಣಜಾಡ್ಯವುಂಟಾಯಿತು. ಅದರಿಂದ ಬಹು ಬಾಧೆಯುಂಟಾಗಿ, ಹೈದರನು ಇನ್ನು ತನ್ನ ದೇಹವುಳಿಯಲಾರದೆಂದು ಖಂಡಿತವಾಗಿ ತಿಳಿದನು. ಆಗ ರಾಜ್ಯದಲ್ಲಿದ್ದ ಹಿಂದೂ ಮಹಮ್ಮದೀಯ ಮತ್ತು ಫ್ರೆಂಚ್ ವೈದ್ಯರ ಪ್ರಯತ್ನಗಳೆಲ್ಲಾ ನಿಷ್ಫಲವಾದುವು. ಅವನ ದೇಹಶಕ್ತಿಯು ದಿನದಿನಕ್ಕೆ ಕುಂದಲಾಗಿತು. ಹೀಗೆ ಕೆಲದಿನಗಳು ನರಳಿದ ತರುವಾಯ ಕೊನೆಗೆ ಡಿಸೆಂಬರು ೧೨ನೆಯ ತಾರೀಖಿನ ದಿನ, ಪೂರ್ಣಯ್ಯನವರೇ ಮುಂತಾದ ತನ್ನ ಆಪ್ತಸಚಿವರನ್ನು ಬಳಿಗೆ ಕರೆದು, ತನ್ನ ಮಗ ಟಿಪ್ಪೂಸುಲ್ತಾನನಿಗೆ ಹೇಳಬೇಕಾದ ನಾಲ್ಕು ಬುದ್ಧಿವಾದದ ಮಾತುಗಳನ್ನು ಹೇಳಿ, ಸುಲ್ತಾನನು ಕಾಲಾಧೀನನಾದನು. ಆ ಸಂದರ್ಭದಲ್ಲಿ ಪೂರ್ಣಯ್ಯನವರು ಪಟ್ಟ ಸಾಹಸವು ಚಿರಸ್ಮರಣೀಯವಾದುದು. ಹೈದರನು ಮೃತನಾದ ವರ್ತಮಾನವನ್ನು ಹೊರಕ್ಕೆ ತಿಳಿಯಪಡಿಸಿದರೆ, ಸೈನ್ಯದ ಕಟ್ಟು ಒಡೆದು ಹೋಗುವುದೆಂದೂ, ಅಧಿಕಾರದ ದರ್ಪವು ಬಯಲಾಗಿ ಹೋಗುವುದೆಂದೂ ತಿಳಿದ ಅವರು, ತಮ್ಮ ಸಮಾನಸ್ಕಂಧರಾದ ಇತರ ಅಧಿಕಾರಿಗಳಿಗೆ ಈ ತಮ್ಮ

ಆಲೋಚನೆಯನ್ನು ತಿಳಿಸಿ, ನವಾಬನ ಮೃತವಾರ್ತೆಯನ್ನು ಗೋಪ್ಯವಾಗಿ ಟ್ಟರು. ಅಲ್ಲದೆ, ಒಡನೆ ಬಹುದೂರದಲ್ಲಿ ಕಲ್ಲಿಕೋಟೆಯ ಬಳಿಯಿದ್ದ ಟಿಪ್ಪೂ ಸುಲ್ತಾನನಿಗೆ ಶೀಘ್ರಗಾಮಿಗಳಾದ ಸವಾರರ ಮೂಲಕ ರಹಸ್ಯವಾಗಿ ಬರೆದ ಕಾಗದವನ್ನು ಕೊಟ್ಟು ವರ್ತಮಾನವನ್ನು ಕಳುಹಿಸಿದರು.

ತರುವಾಯ ಆ ಐದುಮಂದಿ ಸಚಿವರೂ ಆಪ್ತಾಲೋಚನೆ ನಡಿಸಿ, ಹೈದರನ ಮೃತಕಳೇಬರವನ್ನು ತೊಳೆಯಿಸಿ, ಅದನ್ನು ಒಂದು ಪೆಟ್ಟಿಗೆ ಯಲ್ಲಿಡಿಸಿ ಶವವು ಕೊಳೆತು ಅದರಿಂದ ದುರ್ವಾಸನೆಯು ಹೊರಕ್ಕೆ ಬರ ದಂತೆ, ಪಚ್ಚಕರ್ಪೂರ, ಗಂಧದಪುಡಿ, ಪುನುಗು ಮುಂತಾದ ಸುಗಂಧ ದ್ರವ್ಯಗಳನ್ನು ತುಂಬಿಸಿ, ಆ ಪೆಟ್ಟಿಗೆಯನ್ನು ಮೊಹರು ಮಾಡಿಸಿ, ಅವಕ್ಕೆ ಜವಾಹಿರಿಗಳ ಪೆಟ್ಟಿಗೆ ಎಂದು ಹೆಸರಿಟ್ಟು ಅದನ್ನು ೫೦೦ ಕುದುರೆ ಸವಾ ರರು ಮತ್ತು ೧೦೦೦ ಬಾರಿನವರ ಪಹರೆಯಿಂದ ಕೋಲಾರಕ್ಕೆ ಕಳುಹಿಸಿ ದರು. ಅದನ್ನು ಗುಟ್ಟಾಗಿ ಹಾಗೆ ಸಾಗಿಸಿದಮೇಲೆ, ಇತ್ತ ಸುಲ್ತಾನ ನಿಗೆ ಕಾಹಿಲೆಯು ಹೆಚ್ಚಾಗಿರುವುದಾಗಿಯೂ ಯಾರೂ ದರ್ಶನಕ್ಕೆ ಬರ ಬಾರದೆಂಬುದಾಗಿಯೂ ವಾರ್ತೆಯನ್ನು ಪ್ರಚಾರಗೊಳಿಸಿ, ಮುಖ್ಯಾಧಿಕಾ ರಿಗಳಾದ ತಾವು ಮಾತ್ರ ಅತಿಮುಖ್ಯ ರಾಜಕಾರ್ಯಗಳನ್ನು ಸುಲ್ತಾನ ರಿಗೆ ಅರಿಕೆ ಮಾಡಲಿಕ್ಕೆಂದು ಡೇರೆಯೊಳಗೆ ಪ್ರವೇಶಿಸುತ್ತಲೂ - ಪದ್ಧ ತಿಯ ಮೇರೆಗೆ, ವರದಿ ಹೇಳುವ, ಅಪ್ಪಣೆ ಪಡೆಯುವ ಮುಂತಾದ ಕಾ ರ್ಯಗಳನ್ನೆಲ್ಲಾ ಸ್ವಲ್ಪವೂ ಸಂದೇಹಕ್ಕೆ ಆಸ್ಪದವಿಲ್ಲದಂತೆ ನಡೆಯಿಸು ತ್ತಲೂ ಇದ್ದರು. ಸ್ವಾಮಿಭಕ್ತರಾದ ಈ ಐದುಮಂದಿ ಸಚಿವರು ಇಷ್ಟು ಜಾಗರೂಕರಾಗಿದ್ದರೂ, ಹೈದರನ ಮರಣವಾರ್ತೆಯು ಹೇಗೋ ಬಯಲಾಯಿತು. ಮಹಮ್ಮದ್ ಅಮೀನನೆಂಬೊಬ್ಬ ದಂಡನಾಯಕನು, ಕೃತ್ರಿಮದಿಂದ ಈ ಗುಟ್ಟನ್ನು ತಿಳಿದುಕೊಂಡು, ತನ್ನ ವಶದಲ್ಲಿದ್ದ ನಾಲ್ಕು ಸಾವಿರ ಕುದುರೆ ಸೈನ್ಯದ ಸಹಾಯದಿಂದ ಹೈದರನ ಚಿಕ್ಕ ಮಗನೂ, ಟಿಪ್ಪೂಸುಲ್ತಾನನ ತಮ್ಮನೂ ಆದ ಅಬ್ದುಲ್ ಕರೀಂ ಎಂ ಬಾತನಿಗೆ ಪಟ್ಟವನ್ನು ದೊರಕಿಸಬೇಕೆಂದೂ, ಖಜಾನೆಯನ್ನು ಲೂಟಿಮಾ ಡಿ, ಪೂರ್ಣಯ್ಯ ಮುಂತಾದ ಸಚಿವರನ್ನೆಲ್ಲಾ ಪದಭ್ರಷ್ಟರನ್ನಾಗಿ ಮಾಡ ಬೇಕೆಂದೂ ಪ್ರಯತ್ನ ನಡೆಯಿಸಿದನು. ಆದರೆ ಅವನ ಸಾಹಸವು ಫಲ

ಕಾರಿಯಾಗಲಿಲ್ಲ. ಒಳಸಂಚು ಗುಟ್ಟಿನಲ್ಲಿ ಉಳಿಯಲಿಲ್ಲ. ರಾಜದ್ರೋಹಕರವಾದ ಅವನ ಆ ಪಿತೂರಿಯು ಹೊರಬಿದ್ದೊಡನೆಯೇ, ಮೇಲ್ಕಂಡ ಸಚಿವರು ಅವನನ್ನು ಕೈಸೆರೆ ಹಿಡಿಸಿ, ಬೇಡಿ ಹಾಕಿಸಿ, ಸಾವನದುರ್ಗಕ್ಕೆ ಕಳುಹಿಸಿ ಅಲ್ಲಿ ಬಂದಿಯಲ್ಲಿಡಿಸಿದರು. ಇಂತು ಆ ಪಿತೂರಿಯು ಕೊನೆಗೊಂಡಿತು.

೪೦೦ ಮೈಲಿ ದೂರದಲ್ಲಿದ್ದ ಟಿಪ್ಪೂಸುಲ್ತಾನನು ತಂದೆಯ ಮರಣವಾರ್ತೆಯನ್ನು ಕೇಳದೊಡನೆಯೇ ಕಲ್ಲೀಕೋಟೆಯಿಂದ ಹೊರಟು ಹಗಲು ರಾತ್ರಿಗಳೆನ್ನದೆ ಪ್ರಯಾಣಮಾಡಿಬಂದು ಕೋಲಾರವನ್ನು ಸೇರಿದನು. ಅಲ್ಲಿ ತಂದೆಗೆ ತನ್ನ ಜಾತಿಪದ್ಧತಿಯ ಮೇರೆಗೆ ಉತ್ತರಕ್ರಿಯಾದಿಗಳನ್ನು ಮಾಡಿ, ಅಲ್ಲಿಂದ ಹೊರಟು ಆರಣಿ ಮತ್ತು ವೆಲ್ಲೂರುಗಳ ಮಧ್ಯೆಯಿದ್ದ ತನ್ನ (ತಂದೆಯ) ಸೈನ್ಯವನ್ನು ೧೭೮೩ನೆಯ ಜನವರಿ ೨ನೆಯ ದಿನ ತಲುಪಿದನು. ಪೂರ್ಣಯ್ಯನವರೇ ಮುಂತಾದ ಪಂಚಪ್ರಧಾನರ ಆಡಳಿತ ಪ್ರಭಾವದಿಂದ ಲೇಶಮಾತ್ರವೂ ಸಡಿಲದೆ ಇದ್ದ ರಾಜಕಾರ್ಯಸ್ಥಿತಿಯನ್ನೂ ಸೈನ್ಯದ ಸುಸ್ಥಿತಿಯನ್ನೂ ಕಂಡು ಪರಮಾನಂದಪಟ್ಟು, ತನಗೆ ಪ್ರಾಪ್ತವಾಗಿದ್ದ ಮಹಾಕಷ್ಟದೆಸೆಯಲ್ಲಿ ಅತ್ಯಂತ ಸಹಾಯಕರಾಗಿದ್ದ ಆ ಸಕಲ ಆಪ್ತರಿಗೂ ತನ್ನ ಕೃತಜ್ಞತೆಯನ್ನು ಪ್ರಕಟಿಸಿದನು. ಅರೆಕಾಸು ವೆಚ್ಚವಿಲ್ಲದೆ, ಲೇಶಮಾತ್ರವೂ ದೇಹಶ್ರಮೆಯಿಲ್ಲದೆ, ತನ್ನ ತಂದೆಯ ಪದವಿಯೂ, ಎಂಭತ್ತೆಂಟು ಸಹಸ್ರ ಪದಾತಿ ಸೈನ್ಯವೂ, ಮೂರುಕೋಟಿ ರೂಪಾಯಿಗಳಿಂದ ತುಂಬಿದ ಖಜಾನೆಯೂ ತನಗೆ ಲಭಿಸುವ ಆ ಉಪಾಯವನ್ನು ಯೋಚಿಸಿ ಸಹಾಯ ಮಾಡಿದ್ದಕ್ಕಾಗಿ, ಪೂರ್ಣಯ್ಯನವರ ವಿಷಯದಲ್ಲಿ ಮಾತ್ರ ಸುಲ್ತಾನನಿಗೆ ಅತಿಶಯ ಅಭಿಮಾನವುಂಟಾಯಿತು. ಅವರ ಉಪಕಾರವನ್ನು ವಿಶೇಷವಾಗಿ ಪ್ರಶಂಸಿಸಿದನು.

ನಮ್ಮ ಕಥಾನಾಯಕರು, ಯಾವ, ತಮ್ಮ ಧಣಿ, ನವಾಬ್ ಹೈದರಾಲಿಯ ಅಭಿಮಾನದಿಂದ ಐಶ್ವರ್ಯಪದವಿಗಳನ್ನು ಪಡೆದು ಸುಪ್ರಸಿದ್ಧರೆನ್ನಿಸಿದರೋ ಆತನ ವಂಶಕ್ಕೆ ಅಪಾಯವೊದಗಿದ ಸಂದರ್ಭದಲ್ಲಿ, ಸ್ವಾಮಿಭಕ್ತಿಯಿಂದ ಪ್ರೇರಿತರಾಗಿ ಮೇಲ್ಕಂಡಂತೆ ಸಹಾಯಮಾಡಿ ಕೃತಕೃತ್ಯರಾದರು. ಟಿಪ್ಪೂಸುಲ್ತಾನನು, ಪೂರ್ಣಯ್ಯನವರು ತನಗೆ ಮಾಡಿದ

ಸಹಾಯಕ್ಕಾಗಿ ಅವರ ವಿಷಯದಲ್ಲಿ ಸದಾ ಕೃತಜ್ಞನಾಗಿದ್ದನಲ್ಲದೆ, ಅವರನ್ನು ತನ್ನ ಪಿತೃಸ್ಥಾನೀಯರೋ ಎಂಬಂತೆ ಗೌರವಿಸುತ್ತಿದ್ದನೆಂದೂ ತಿಳಿದುಬರುತ್ತದೆ. ಹೈದರನ ತರುವಾಯವೂ ಪೂರ್ಣಯ್ಯನವರು ತಮ್ಮ ಆರ್ಥಿಕ ಸಚಿವ (Financial minister) ಸ್ಥಾನದಲ್ಲೇ ಸ್ಥಿರಗೊಳಿಸಲ್ಪಟ್ಟುದಲ್ಲದೆ, ಅವರು ಟಿಪ್ಪೂಸುಲ್ತಾನನಿಂದ, ಸೈನ್ಯಕ್ಕೆ ಪದಾರ್ಥಗಳನ್ನು ಸರಬರಾಯಿ ಮಾಡುವ ಕಮಿಶ್ಯಾರೇಟ್ (Commissirate) ಇಲಾಖೆಯ ಮುಖ್ಯಾಧಿಕಾರವನ್ನೂ ಪಡೆದರು. ಈ ನೂತನ ಉದ್ಯೋಗದಲ್ಲೂ, ಅವರು ತಮಗೆ ಸ್ವಾಭಾವಿಕವಾದ ನ್ಯಾಯಪರತೆಯಿಂದ ವರ್ತಿಸಿ ಸುಲ್ತಾನನನ್ನು ಮೆಚ್ಚಿಸಿದರು. ಅಷ್ಟೇ ಅಲ್ಲ - ಬ್ರಾಹ್ಮಣರಾದ ಪೂರ್ಣಯ್ಯನವರು ಕೇವಲ ಲೇಖನಿಯಚಾಲಕರಾಗಿ, ಕಚೇರಿಯಲ್ಲೇ ಕುಳಿತು ಕೆಲಸಮಾಡಿದ್ದವರೆಂದು ತಿಳಿಯಬಾರದು. 'ಶಾಪಾದಪಿ-ಶರಾದಪಿ' ಪ್ರೌಢರಾಗಿದ್ದ ದ್ರೋಣಾಚಾರ್ಯರಂತೆ ಆ ಮಹನೀಯರು, ಸುಲ್ತಾನನಿಂದ ತಮ್ಮ ಆಡಳಿತಕ್ಕೆ ವಹಿಸಲ್ಪಟ್ಟಿದ್ದ ೪೬೦೦ ಮಂದಿ ಪದಾತಿವರ್ಗದ ಸೈನ್ಯಕ್ಕೂ ಅಧಿನಾಯಕ (Commander) ರಾಗಿ, ಅದನ್ನು ಯುದ್ಧಕ್ಕೂ ನಡೆಯಿಸಿದ್ದರು. ಒಟ್ಟಿನಮೇಲೆ ಪರಮಾಶ್ಚರ್ಯಕರ ವಿಚಾರವೆಂದರೆ, ಅತಿಶಯ ಮಹಮ್ಮದೀಯ ಮತಾಭಿಮಾನಿಯೂ, ಪರಮತ ದ್ವೇಷಿಯೂ ಆದ ಟಿಪ್ಪೂವಿನ ಬಳಿ, ಬ್ರಾಹ್ಮಣ ಶ್ರೇಷ್ಠರಾಗಿದ್ದ ನಮ್ಮ ಕಥಾನಾಯಕರು ಆತನ ವಿಶೇಷ ನಂಬಿಕೆಗೆ ಪಾತ್ರರಾದ ಸಚಿವ ಶಿರೋಮಣಿಯಾಗಿದ್ದುದು. ಸುಲ್ತಾನನು ಯಾವುದೊಂದು ಮಹತ್ವದ ವಿಚಾರವನ್ನಾದರೂ, ಅವರ ಆಲೋಚನೆಯನ್ನು ಕೇಳದೆ ನಿರ್ವಹಿಸುತ್ತಿದ್ದುದು ಅಪೂರ್ವ. ಅನೇಕ ಸಂದರ್ಭಗಳಲ್ಲಿ ತನ್ನ ಮಧ್ಯಾಹ್ನ ಭೋಜನಕಾಲದಲ್ಲಿ ಕೂಡ, ಅವರನ್ನು ಅಂತಃಪುರಕ್ಕೆ ಕರೆಯಿಸಿಕೊಂಡು, ರಾಜಕಾರ್ಯಗಳಲ್ಲಿ ಆಪ್ತಾಲೋಚನೆಯನ್ನು ಕೇಳುತ್ತಿದ್ದನಂತೆ !

ರಾಜನೀತಿ ವಿಶಾರದರಾದ ವಿಪ್ರಶ್ರೇಷ್ಠ ಪೂರ್ಣಯ್ಯನವರಲ್ಲಿ ಕ್ಷಾತ್ರತೇಜವೂ ಧೈರ್ಯಸಾಹಸಗಳೂ ಎಷ್ಟುಮಟ್ಟಿಗೆ ನೆಲೆಗೊಂಡಿದ್ದವೆಂಬುದೂ ಪ್ರದರ್ಶನಕ್ಕೆ ಬರುವ ಒಂದು ಸಂದರ್ಭವೊದಗಿತು. ೧೭೮೨ನೆಯ ಸಂ|| ದಲ್ಲಿ ಟಿಪ್ಪೂಸುಲ್ತಾನನಿಗೆ ಇಂಗ್ಲೀಷರೊಂದಿಗೆ ಭಯಂಕರ ಕದನವು ಕೈಗ

ಟ್ಟಿತು. ಶತ್ರುಸೈನ್ಯವು ಮೈಸೂರು ಸೈನ್ಯವನ್ನು ತರುಬಿಕೊಂಡು ಬಂದು, ಗುಂಡಿನ ಮಳೆಯನ್ನು ಸುರಿಸುತ್ತಾ ಶ್ರೀರಂಗಪಟ್ಟಣವನ್ನು ಲಗ್ಗೆಹತ್ತಲು ಸನ್ನಾಹ ನಡೆಸುತ್ತಿದ್ದಾರೆ. ಮೈಸೂರು ಸೈನ್ಯದವರು ಶತ್ರುಗಳ ಗುಂಡಿ ನೇಟಿಗೆ ಬೆದರಿ, ಬೆಂಗೊಟ್ಟು ಕೋಟೆಯ ಕಡೆಗೆ ಓಡುತ್ತಿದ್ದಾರೆ. ಆಗ ಪೂರ್ಣಯ್ಯನವರು ಸೈನ್ಯದ ಬಟವಾಡೆಗೆಂದು ಖಜಾನೆಯಿಂದ ಪಾಳಯಕ್ಕೆ ತಂದಿದ್ದ ಅಪಾರ ದ್ರವ್ಯವನ್ನು ಶತ್ರುಗಳ ಕೈಗೆ ದಕ್ಕದಂತೆ ರಕ್ಷಿಸಿಕೊಂಡು ಕೋಟೆಯೊಳಕ್ಕೆ ಸಾಗಿಸಿಕೊಂಡು ಹೋಗುವ ಉದ್ಯೋಗದಲ್ಲಿ ಮಗ್ನರಾಗಿದ್ದಾರೆ. ಬ್ರಿಟಿಷ್ ಸೋಲ್ಜರರ ತುಪಾಕಿಗಳಿಂದ ಗುಂಡಿನೇಟುಗಳು ಮಳೆಯಂತೆ ಸುರಿಯುತ್ತಿವೆ. ಪೂರ್ಣಯ್ಯನವರಿಗೆ ಹಲವೆಡೆಗಳಲ್ಲಿ ಗುಂಡಿನೇಟುಗಳು ತಗುಲಿ, ಅವರು ವಿಶೇಷ ಗಾಯಪಟ್ಟಿದ್ದಾರೆ. ಆದರೇನು, ಅವರು ಪ್ರಾಣಕ್ಕಂಜಿ, ಖಜಾನೆಯನ್ನು ಬಿಟ್ಟು ಓಡಲಿಲ್ಲ. ಮೃತ್ಯುಮುಖದಲ್ಲಿದ್ದರೂ ಆ ಧೀರರು ಲೇಶಮಾತ್ರವೂ ಶಂಕಗೊಳ್ಳದೆ, ಸಮಸ್ತ ದ್ರವ್ಯವನ್ನೂ ಒಂಟೆಗಳಮೇಲೆ ಹೇರಿಸಿಕೊಂಡು, ಬದ್ಧಹಸ್ತರಾಗಿ ಅದನ್ನು ರಕ್ಷಿಸಿಕೊಂಡು, ಒಂದು ರೂಪಾಯಿಯೂ ನಷ್ಟವಾಗದಂತೆ, ಶತ್ರುಸೈನ್ಯ ಮಧ್ಯದಲ್ಲೇ ಪ್ರಯಾಣಮಾಡಿ, ಸುರಕ್ಷಿತವಾಗಿ ಕೋಟೆಯನ್ನು ಸೇರಿದರು. ೧೭೯೯ರಲ್ಲಿ ಇಂಗ್ಲೀಷರ ಸೈನ್ಯವು ಬಂದು ಶ್ರೀರಂಗಪಟ್ಟಣವನ್ನು ಮುತ್ತಿದ್ದಾಗ್ಗೆ, ಪೂರ್ಣಯ್ಯನವರು, ಜನರಲ್ ಸ್ಟೂಯರ್ಟ್ಸ್ ಎಂಬ ದಳಪತಿಗೆ, ತಮ್ಮ ಸೈನ್ಯದೊಂದಿಗೆ ಎದುರಾಗಿ ಯುದ್ಧಕೊಟ್ಟರು. ತರುವಾಯ ೧೭೯೯ರಲ್ಲಿ, ಮೈಸೂರು ಸೈನ್ಯಕ್ಕೆ ನಾಲ್ಕನೆಯಬಾರಿ ಇಂಗ್ಲೀಷರೊಂದಿಗೆ ಪ್ರಾಪ್ತವಾದ ಪ್ರಾಣಾಂತ್ಯಕಾರಿಯಾದ ಸಂಗ್ರಾಮದಲ್ಲಿ ಟಿಪ್ಪೂಸುಲ್ತಾನನು ಮೃತನಾದನಷ್ಟೆ! ಆ ತರುವಾಯ ಇಂಗ್ಲೀಷ್ ಸೈನ್ಯಾಧಿಪರು, ಟಿಪ್ಪೂಸುಲ್ತಾನನ ಮಕ್ಕಳೂ ಮತ್ತು ಆತನ ಮುಖ್ಯ ಅಧಿಕಾರಿಗಳೂ ಬಂದು ತಮಗೆ ಶರಣಾಗತರಾಗಬೇಕು ಎಂದು ಕೇಳಿದವರಲ್ಲಿ ಪೂರ್ಣಯ್ಯನವರೂ ಒಬ್ಬರಾಗಿದ್ದರು. ಮಹಾಕರ್ತೃತ್ವ ಶಾಲಿಯಾದ ಪೂರ್ಣಯ್ಯನವರು ಶರಣಾಗತರಾಗದಿದ್ದಲ್ಲಿ ಮೈಸೂರು ಸೈನ್ಯದೊಂದಿಗೆ ಯುದ್ಧವು ಅಂದಿಗೇ ಕೊನೆಗಾಣಲಾರದೆಂದು ಇಂಗ್ಲೀಷರು ಎಣಿಸಿದ್ದಂತೆ ತೋರುತ್ತದೆ. ಆ ಸಂದರ್ಭದಲ್ಲಿ ಪೂರ್ಣಯ್ಯನವರು, ಆವರೆಗೆ ನಡೆದ ಎಲ್ಲಾ ವಿಚಾರಗಳನ್ನೂ, ತಾವು ಬ್ರಿಟಿಷರ ಅಧಿಕಾ

ರಕ್ಕೆ ಶರಣಾಗತರಾಗದೆ ಶತ್ರುತ್ವವನ್ನೇ ಸಾಧಿಸಿ ನಿಲ್ಲುವುದರಿಂದ ಉಂಟಾಗುವ ಸಾಧಕ ಬಾಧಕಗಳನ್ನೂ ದೀರ್ಘವಾಗಿ ಪರ್ಯಾಲೋಚಿಸಿ, ಮುಂದೆ ಆಗುವ ಅನಾವಶ್ಯಕವಾದ ಜನಹತ್ಯೆಯನ್ನೂ, ರಕ್ತಪ್ರವಾಹವನ್ನೂ ತಪ್ಪಿಸುವುದಕ್ಕಾಗಿ, ಆಗ ಅವರ ಅಧಿಕಾರವನ್ನು ಒಪ್ಪಿಕೊಂಡು, ತಾಳ್ಮೆವಹಿಸಿ ನಡೆಯತಕ್ಕುದೇ ಯುಕ್ತವೆಂದು ನಿರ್ಧರಿಸಿ, ಅದೇ ಮೇರೆಗೆ ಆಚರಿಸಿದರು.



## ಅಧ್ಯಾಯ ೪ "ರಾಜಮನೆತನದ ಜೀರ್ಣೋದ್ಧಾರ ಕಾರ್ಯ"

ಇಂಗ್ಲೀಷರು, ಮರಾಟಿಯವರು ಮತ್ತು ನಿಜಾಮನ ಸಹಾಯಗೊಂಡು,-'ಮೈಸೂರಿನ ಹುಲಿ' ಎಂದು ಪ್ರಖ್ಯಾತನಾದ ಟಿಪ್ಪೂಸುಲ್ತಾನನನ್ನು ಯುದ್ಧದಲ್ಲಿ ಕೊಂದು ಮೇಲ್ಕಂಡಂತೆ ಮೈಸೂರು ರಾಜ್ಯವನ್ನು ಆಕ್ರಮಿಸಿದರಷ್ಟೆ? ಆದರೆ ಬ್ರಿಟಿಷ್ ಇಂಡಿಯದ ಇತರ ಭಾಗಗಳಂತೆ, ಮೈಸೂರು ದೇಶವನ್ನೂ ಸ್ವಂತವಾಗಿ ತಾವೇ ಆಳಬೇಕೆಂಬುದು ಅವರ ಅಪೇಕ್ಷೆಯಾಗಿರಲಿಲ್ಲ.—ಸಮಯ ಸಂದರ್ಭಗಳೂ ಅದಕ್ಕೆ ಅನುಕೂಲವಾಗಿರಲಿಲ್ಲ. ಪೂರ್ವದ ಹಿಂದೂ ರಾಜಮನೆತನದಿಂದ ಹೈದರಾಲಿಯೂ ಟಿಪ್ಪೂಸುಲ್ತಾನನೂ, ರಾಜ್ಯಪದವಿಯನ್ನು ಕಿತ್ತುಕೊಂಡು ಬಲವಂತದಿಂದ ಅಧಿಕಾರ ಸ್ಥಾನವನ್ನು ಆಕ್ರಮಿಸಿ ಅವರನ್ನು ಮೂಲೆಗೆ ಕೂರಿಸಿದ್ದರೆಂಬುದು ಈವರೆಗೇ ಸ್ಪಷ್ಟವಾಗಿದೆಯಲ್ಲವೆ! ಹಾಗೆ ಅನ್ಯಾಕ್ರಾಂತವಾಗಿ ಹೋಗಿದ್ದ ರಾಜ್ಯಪದವಿಯನ್ನು ಪುನಃ ರಾಜಮನೆತನಕ್ಕೆ ಸಂಪಾದಿಸಬೇಕೆಂದೇ ಮಹಾರಾಣಿ ಲಕ್ಷ್ಮಮ್ಮಣ್ಣಿಯವರು, ಮದರಾಸಿನಲ್ಲಿದ್ದ ಕಂಪೆನಿಸರ್ಕಾರದವರೊಂದಿಗೆ ಯೋಗ್ಯಜನರ ಮೂಲಕ ವ್ಯವಹಾರನಡೆಸಿ, ಬಹು ಕಷ್ಟಪಟ್ಟಿದ್ದರು. ಆ ಪ್ರಯತ್ನವು ಈವರೆಗೇ ಉಕ್ತವಾದಂತೆ, ಟಿಪ್ಪೂಸುಲ್ತಾನನ ಮರಣ ರೂಪದಿಂದ ಫಲಪ್ರದವಾಯಿತು. ಹೀಗೆ ಮೈಸೂರು ಸಂಸ್ಥಾನದಲ್ಲಿ ಪೂರ್ವದ ರಾಜಮನೆತನದ ಪುನಸ್ಥಾಪನೆಗೆ ಪ್ರಯತ್ನವು ಬಹು ಹಿಂದಿನಿಂದಲೂ ನಡೆಯುತ್ತಿದ್ದಿತು. ರಾಜನೀತಿ ವಿಚಕ್ಷಣರಾದ ಇಂಗ್ಲೀಷರು, ಟಿಪ್ಪೂಸುಲ್ತಾನನಿಂದ ಸೆಳೆದುಕೊಂಡ

ರಾಜ್ಯಾಧಿಪತ್ಯವನ್ನು ಮುಂದೆ ಹೇಗೆ ನಡೆಯಿಸತಕ್ಕದ್ದೆಂದು ದೀರ್ಘವಾಗಿ ಯೋಚಿಸಿದರು. ಅನೇಕ ಅನುಭವಸ್ಥರ ಸಲಹೆ ಕೇಳಿದರು. ಹಾಗೆ ಸಲಹೆ ಕೊಟ್ಟವರಲ್ಲಿ ಪೂರ್ಣಯ್ಯನವರೂ ಒಬ್ಬರು. ಪೂರ್ಣಯ್ಯನವರು ರಾಜಕೀಯ ವಾತಾವರಣವು ಅತಿಶಯ ಪ್ರಕ್ಷುಬ್ಧವಾಗಿದ್ದ ಆ ಕಾಲದಲ್ಲಿ, ರಾಜ್ಯದಲ್ಲಿ ಶಾಂತತೆಯನ್ನುಂಟುಮಾಡಲು ಮಾರ್ಗವೇನೆಂಬುದನ್ನು ಕುರಿತು, ಜನರಲ್ ಹ್ಯಾರಿಸ್ ಸಾಹೇಬನಿಗೆ ಆಗ ಕೊಟ್ಟ ಸಲಹೆಗಳು ಮನನ ಯೋಗ್ಯವಾಗಿವೆ.—''ಟಿಪ್ಪೂಸುಲ್ತಾನನನ್ನು ಪದಭ್ರಷ್ಟನನ್ನಾಗಿಸಿ ದೇಶವನ್ನು ಹಿಂದೂ ರಾಜಮನೆತನಕ್ಕೊಪ್ಪಿಸಿ, ಅದರ ಸರ್ವಾಧಿಕಾರವನ್ನೂ ತಾವು ಆಕ್ರಮಿಸಬೇಕೆಂದು, ಪೂರ್ಣಯ್ಯನವರು, ಸುಲ್ತಾನನಿಗೆ ವಿರೋಧವಾಗಿ ಇಂಗ್ಲೀಷರೊಂದಿಗೆ ಪಿತೂರಿ ನಡಿಸಿದರು'' ಎಂಬೊಂದು ಅಪವಾದವು ಕೆಲವು ಮತಿಭ್ರಾಂತ ಜನಗಳಿಂದ ಅವರಮೇಲೆ ಹೊರಿಸಲ್ಪಟ್ಟಿರುವುದುಂಟಲ್ಲವೆ? ಅಂಥವರು, ಆ ಮಹನೀಯರು ಜನರಲ್ ಹ್ಯಾರಿಸ್ ಸಾಹೇಬನಿಗೆ ಕೊಟ್ಟ ಆ ಸಲಹೆಯನ್ನು ಗಮನವಿಟ್ಟು ನೋಡಬೇಕು. ಇವು ಅವರ ಸಲಹೆಗಳು.

*(೧) ಟಿಪ್ಪೂಸುಲ್ತಾನನ ಮನೆತನದವರಲ್ಲಿ ಒಬ್ಬನು ಈಗ ಸ್ಥಾಪಿಸಲ್ಪಡಲಿರುವ ಆಡಳಿತದ ಮುಖ್ಯಸ್ಥನಾಗಿ ನಿಯಮಿಸಲ್ಪಡಬೇಕು.

(೨) ಆತನು, ಉಭಯರಿಗೂ ಸಮ್ಮತವಾಗುವ ಒಂದು ನಿಬಂಧನೆಯನ್ನನುಸರಿಸಿ, ಇಂಗ್ಲೀಷರಿಗೆ ಕಪ್ಪವನ್ನು ಕಟ್ಟುತ್ತಾ ಬರಬೇಕು.

(೩) ದೇಶದಲ್ಲಿ ಶಾಂತಿರಕ್ಷಣೆಗಾಗಿ, ಆವಶ್ಯಕ ತೋರುವ ಸ್ಥಳಗಳಲ್ಲಿ ಇಂಗ್ಲೀಷರು ತಮ್ಮ ಫೌಜುಗಳನ್ನು ಇಡಬೇಕು.

(೪) ಹಾಗೆ ಆಡಳಿತದ ಮುಖ್ಯಸ್ಥನಾಗಿ ಆರಿಸಲ್ಪಡುವ ಸುಲ್ತಾನನ ವಂಶೀಯನು ಆತನ ಹಿರೀ ಮಗನಾದ ಫತ್ತೇ ಹೈದರನಾಗಿರಬೇಕು.

ಅವರ ಅಭಿಪ್ರಾಯದಲ್ಲಿ ಈಯೊಂದು ಏರ್ಪಾಡಿನಿಂದಲ್ಲದೆ, ಬೇರೆ ಯಾವ ಉಪಾಯದಿಂದಲೂ ದೇಶದಲ್ಲಿ ಹರಡಿರುವ ಅಶಾಂತತೆಯು ನೀಗಲಾರದು ಎಂಬುದು ಸ್ಥಿರವಾಗಿದ್ದಿತು. ಹಾಗೆ ಯೋಚಿಸಲು ಕಾರಣವೂ ಇದ್ದಿತು. ಹಾಗೆ ಮಾಡಿ ಸೈನಿಕರನ್ನು ಒಂದು ಸ್ಥಿಮಿತಕ್ಕೆ ತಾರದಿದ್ದಲ್ಲಿ, ಜೀವ

*See Pages 2703-2704 Mysore Gazetteer Vol. II, Part IV (New edition)

ನೋಪಾಯ ವಿಹೀನರಾಗಿ ನಿಲ್ಲುವ ಸುಲ್ತಾನನ ಮುಸಲ್ಮಾನ ಸೈನಿಕರು ದೇಶದಮೇಲೆ ದಂಗೆ ದರೋಡೆಗಳನ್ನು ನಡೆಯಿಸಲು ನಿರಾತಂಕವಾಗುವುದು. ಅಲ್ಲದೆ, ರಾಜ್ಯಾಧಿಪತ್ಯಮಾಡಿದ ಟಿಪ್ಪೂಸುಲ್ತಾನನ ವಂಶವನ್ನು ಈ ರೂಪದಿಂದ ಗೌರವಪಡಿಸುವುದರಿಂದ ದೇಶದಲ್ಲಿ ಹೆಚ್ಚು ಸಂಖ್ಯೆಯಿಂದಿರುವ ಮಹಮ್ಮದೀಯರು ತೃಪ್ತರಾಗಿ ಶಾಂತತೆಯಿಂದಿರಲೂ ಮಾರ್ಗವಾಗುವುದು. ಮತ್ತು ಈ ಏರ್ಪಾಡಿನಿಂದ ಈಗ ಎರಡು ತಲೆಗಳಿಂದ ನಡೆದು ಬಂದಿರುವ ಆಡಳಿತದಿಂದ ಸಂಸ್ಥಾನದ ಎಲ್ಲಾ ಇಲಾಖೆಗಳಲ್ಲೂ ತುಂಬಿ ಪ್ರಬಲಿಸಿರುವ ಮಹಮ್ಮದೀಯ ಪ್ರಜಾಸಮುದಾಯವನ್ನು ಸಮಾಧಾನದಿಂದಿರಿಸಲು, ಇದಕ್ಕಿಂತಲೂ ಉತ್ತಮವಾದ ಮಾರ್ಗವು ಬೇರೆ ಇರಲಾರದು, ಹೀಗೆಂದು ಕಾರಣಗಳನ್ನು ಹೇಳಿ, ಅವರು ತಮ್ಮ ಸಲಹೆಗಳನ್ನು ಪುಷ್ಟೀಕರಿಸಿದರು.

ಹ್ಯಾರಿಸ್ ಸಾಹೇಬನು ಇವು ಪೂರ್ಣಯ್ಯನವರ ಸಲಹೆಗಳೆಂದು ಅವನ್ನು ಗವರ್ನರ್ ಜನರಲ್ ಆದ ಮಾರ್ಕ್ವಿಸ್ ವೆಲ್ಲೆಸ್ಲಿ ಸಾಹೇಬನಿಗೆ ಬರೆದು ಕಳುಹಿಸಿದನು. ಆದರೆ ವೆಲ್ಲೆಸ್ಲಿ ಸಾಹೇಬನು, ಪೂರ್ಣಯ್ಯನವರಂತೆ ಇದೊಂದೇ ದೃಷ್ಟಿಯಿಂದಲ್ಲ-ಬೇರೊಂದು ದೃಷ್ಟಿಯಿಂದಲೂ ಈ ವಿಷಯವನ್ನು ಕುರಿತು ವಿಚಾರಮಾಡಬೇಕಾಗಿದ್ದಿತು. ಹೈದರಾಲಿ ಟಿಪ್ಪೂಸುಲ್ತಾನರ ವಂಶೀಯರಿಗಿಂತಲೂ, ಮೈಸೂರು ರಾಜ್ಯದಮೇಲೆ ಯಾರ ಬಾಧ್ಯತೆಯು ಹೆಚ್ಚು ಎಂಬುದು ಮುಖ್ಯವಾಗಿ ಗಮನಿಸಬೇಕಾದ ಪ್ರಶ್ನೆಯಾಗಿದ್ದಿತು. ಅಲ್ಲದೆ ಯುದ್ಧಕಾಲದಲ್ಲಿ ತಮಗೆ ಸಹಾಯಮಾಡಿದ್ದ ಹೈದರಾಬಾದಿನ ನಿಜಾಮಲ್ಲಿ ಮತ್ತು ಮರಾಟಿಯವರು ಇವರ ಮನಸ್ಸನ್ನು ತೃಪ್ತಿಗೊಳಿಸುವುದು ಹೇಗೆಂಬುದನ್ನೂ ಕಂಪೆನಿ ಸರಕಾರದವರು ಯೋಚಿಸಬೇಕಾಗಿತ್ತು. ಹೀಗೆ ಅನೇಕ ಸಂದಿಗ್ಧ ವಿಚಾರಗಳನ್ನೆಲ್ಲ ಕೂಲಂಕಷವಾಗಿ ವಿಮರ್ಶಿಸಿ, ಕೊನೆಗೆ ಆ ವಿಷಯದಲ್ಲಿ ಹೇಗೆಮಾಡಬೇಕೆಂದು ಯೋಚಿಸಿ, ಈ ಕೆಳಗೆ ಹೇಳುವಂತೆ ನಿರ್ಧರಿಸಿದರು. ಟಿಪ್ಪೂಸುಲ್ತಾನನ ರಾಜ್ಯವನ್ನು ನಾಲ್ಕು ಭಾಗಗಳನ್ನಾಗಿ ವಿಭಾಗಿಸಿದರು. ಇಪ್ಪತ್ನಾಲ್ಕು-ಇಪ್ಪತ್ನಾಲ್ಕು ಲಕ್ಷ ರೂಪಾಯಿ ಹುಟ್ಟುವಳಿಯ ಎರಡು ಪಾಲುಗಳನ್ನು ಇಂಗ್ಲೀಷರೂ ನಿಜಾಮಲ್ಲಿಯೂ ಹಂಚಿಕೊಂಡರು. ಐವತ್ತುಲಕ್ಷ ರೂಪಾಯಿ ಹುಟ್ಟುವಳಿಯ ಒಂದು ಭಾಗವನ್ನು ಪ್ರತ್ಯೇಕವಾಗಿಟ್ಟು ಅದರಿಂದ ಈಗಿನ ಮೈಸೂರು ಸಂಸ್ಥಾನವನ್ನು ಏರ್ಪಡಿಸಿ, ಅದ

ನ್ನು ಪೂರ್ವದ ಹಿಂದೂರಾಜರ ಪಾಲಿಗೆ ವಹಿಸಿ, ಆ ಆರ್ಷೇಯ ರಾಜಮನೆ ತನವನ್ನು ಜೀರ್ಣೋದ್ಧಾರಮಾಡಿದರು. ಮಿಕ್ಕ ಹನ್ನೆರಡು ಲಕ್ಷ ರೂಪಾಯಿ ಹುಟ್ಟುವಳಿಯ ಒಂದು ಭಾಗವನ್ನು, ಯುದ್ಧದಲ್ಲಿ ಯಾವ ಭಾಗವನ್ನೂ ವಹಿಸದೆಯೂ, ದ್ರವ್ಯಸಹಾಯವನ್ನಾಗಲೀ, ಜನಸಹಾಯವನ್ನಾಗಲೀ ಕಳುಹಿಸದೆಯೂ, ಕೇವಲ ನಾಮಮಾತ್ರಕ್ಕೆ ಸಹಾಯಕರೆನ್ನಿಸಿದ್ದ ಮರಾಟಿಯವರಿಗೆ ಕೊಡಬೇಕೆಂದು ನಿಶ್ಚಯಿಸಿದರು. ಮರಾಟರು ಅದಕ್ಕೆ ಒಪ್ಪದಿರಲು, ಅದರಲ್ಲಿ ಒಂದು ಭಾಗವನ್ನು ಇಂಗ್ಲೀಷರೂ, ಎರಡು ಭಾಗವನ್ನು ನಿಜಾಮಲ್ಲಿಯೂ ಹಂಚಿಕೊಂಡುಬಿಟ್ಟರು. ಹೀಗೆ ಹೈದರಾಲಿಯಿಂದ ಸಂಪಾದಿತವಾಗಿದ್ದ ಮೈಸೂರು ರಾಜ್ಯವು, ಅವನ ಮಗ ಟಿಪ್ಪುವಿನ ಅವಿವೇಕ ಆಡಳಿತದಿಂದ ಪರಾಜಿತವಾಗಿ ದಿಕ್ಕುಪಾಲಾಗಿ ವಿಭಾಗವಾಗಿಹೋಯಿತು.

ತರುವಾಯ ಇಂಗ್ಲೀಷ್ ಅಧಿಕಾರಿಗಳು ಸುಲ್ತಾನನ ಮಕ್ಕಳನ್ನು ತಕ್ಕ ಸಿಬ್ಬಂದಿಯೊಂದಿಗೆ ವೆಲ್ಲೂರು ಕೋಟೆಗೆ ನಾಗಿಸಿ, ಟಿಪ್ಪುವಿನ ಬಳಿ ಪ್ರಬಲರಾಗಿದ್ದ ಕಮರುದ್ದೀನ್ ಮುಂತಾದ ಮುಹಮ್ಮದೀಯ ಸರದಾರರಿಗೆ ಜಹಗೀರಿಯೋ ಮುಂತಾಗಿ ಕೊಟ್ಟು, ಅವರನ್ನು ಬೇರೆ ಬೇರೆ ಸ್ಥಳಗಳಿಗೆ ಚದರಿಸಿದರು. ಇನ್ನು ಮಿಕ್ಕವರೆಂದರೆ, ಹಿಂದೂ ಅಧಿಕಾರಿಗಳು. ಅವರಲ್ಲೆಲ್ಲ ವಿಶೇಷ ಅನುಭವಸ್ಥರಾಗಿದ್ದವರು ಪೂರ್ಣಯ್ಯನವರು. ಅವರಿಗೆ ಸಂಸ್ಥಾನದ ಆಯುವ್ಯಯ, ಆಡಳಿತ, ಜನಗಳ ಶೀಲಸ್ವಭಾವಗಳು, ಸ್ಥಳ ವಿದ್ಯಮಾನಗಳು ಮುಂತಾದ ಎಲ್ಲಾ ವಿಧವಾದ ಅನುಭವಗಳೂ ಸಂಪೂರ್ಣವಾಗಿದ್ದುವು. ಅವುಗಳನ್ನು ಯೋಗ್ಯರೀತಿಯಲ್ಲಿ ಉಪಯೋಗಪಡಿಸಿಕೊಳ್ಳುವುದೆಂದರೆ, ಅವರಿಗೆ ಸಂಸ್ಥಾನದ ಆಡಳಿತದ ಮುಖ್ಯ ಜವಾಬುದಾರಿಯನ್ನು ವಹಿಸುವುದೊಂದಲ್ಲದೆ ಬೇರೇ ಮಾರ್ಗವಿರಲಿಲ್ಲ. ರಾಜ್ಯವನ್ನು ಪೂರ್ವದ ರಾಜಮನೆತನಕ್ಕೆ ವಹಿಸಿದಮೇಲೆ, ಅದನ್ನು ಯೋಗ್ಯರೀತಿಯಿಂದ ರೂಢಿಸಲು, ಇಂತಹ ಅನುಭವಸ್ಥರೊಬ್ಬರ ಆವಶ್ಯಕತೆಯು ಅತಿಮುಖ್ಯವಾಗಿ ಅಪೇಕ್ಷಣೀಯವಾಗಿತ್ತು. ಅದರಂತೆಯೋ ಇಂಗ್ಲೀಷ್ ಅಧಿಕಾರಿಗಳು, ಆಗ ಇದ್ದ ಇತರ ಹಲವು ಮಂದಿ ಹಿಂದೂ ಮುಸಲ್ಮಾನ್ ದೊಡ್ಡಮನುಷ್ಯರ ಅಭಿಪ್ರಾಯಗಳನ್ನೂ ಕೇಳಿ, ಸಕಲರ ಸಮ್ಮತಿಯಿಂದಲೂ, ಪೂರ್ಣಯ್ಯನವರೇ ದಿವಾನಗಿರಿ ಪದವಿಗೆ ಯೋಗ್ಯ

ರೆಂದು ನಿರ್ಧರಿಸಿದರು. ಪೂರ್ಣಯ್ಯನವರಿಗಾದರೂ, ಟಿಪ್ಪೂಸುಲ್ತಾನನ ಮರಣದಿಂದ, ಮುಂದೆ ರಾಷ್ಟ್ರಸೇವೆಯ ಮತ್ತೆಲ್ಲ ಮಾರ್ಗಗಳೂ ಮುಚ್ಚಿದಂತಾಗಿದ್ದುವು. ಅವನ ವಂಶೀಯರಿಗೆ ಯಾವುದಾದರೊಂದುಬಗೆಯಿಂದ ಪ್ರಭುತ್ವಚಿನ್ಹೆಯಾದರೂ ಉಳಿಯಲೆಂದು ಅವರುಪಟ್ಟ ಪ್ರಯತ್ನಗಳೆಲ್ಲವೂ ನಿರರ್ಥಕವಾದುವು. ಸುಲ್ತಾನನ ಪರಮತದ್ವೇಷ, ಅವನ ಸ್ವಪ್ರತಿಷ್ಠೆ, ಅದೂರದರ್ಶಿತ್ವ ಮುಂತಾದ ಹೀನಗುಣಗಳ ಫಲವಾಗಿ ಅವನ ಮಕ್ಕಳು ಸಕಲರ ಪ್ರೀತಿವಿಶ್ವಾಸಗಳಿಗೂ ಬಾಹಿರರಾಗಿ, ಎಂತೋ ಒಂದೆಡೆಯಲ್ಲಿದ್ದು ತಮ್ಮ ಜೀವಿತಕಾಲವನ್ನು ಕಳೆಯಲು ನಿರ್ಬಂಧಿಸಲ್ಪಟ್ಟರು. ಆಗ ಪೂರ್ಣಯ್ಯನವರಿಗೆ, ಮುಂದೆ ತಮ್ಮ ವಿದ್ಯಾಬುದ್ಧಿಗಳನ್ನೂ, ಬಹುಕಾಲದ ಅನುಭವವನ್ನೂ ಉಪಯೋಗಿಸಿ ಆರ್ಷೇಯಕಾಲದಿಂದಬಂದ ಹಿಂದೂ ಸಾಮ್ರಾಜ್ಯದ ಸೇವೆಯಲ್ಲಿ ತಮ್ಮ ಸ್ವದೇಶ ಸ್ವಧರ್ಮಗಳ ಪುನರುದ್ಧಾರಕ್ಕಾಗಿ ಶ್ರಮಿಸುವುದೊಂದು ; ಹಾಗಲ್ಲದೆ ಲೋಕದ ದೃಕ್ಪಥದಿಂದ ಮರೆಯಾಗಿ ಆಮರಣಾಂತವಾಗಿ ಒಂದು ಅಭುಕ್ತಮೂಲೆಯಲ್ಲಿ ಅನಾಮಧೇಯರಾಗಿ ತಮ್ಮ ಜೀವಿತವನ್ನು ಕಳೆಯುವುದೊಂದು, ಈ ಎರಡು ಮಾರ್ಗಗಳು ತೋರಿಸಲ್ಪಟ್ಟುವು. ಮಹಾಪ್ರಾಜ್ಞರಾದ ಅವರು ಈ ಎರಡರಲ್ಲಿ ಯಾವ ಮಾರ್ಗವನ್ನು ಪರಿಗ್ರಹಿಸುವರು !

ಪೂರ್ಣಯ್ಯನವರು, ಜನರಲ್ ಹ್ಯಾರಿಸ್ ಸಾಹೇಬನ ಅಪ್ಪಣೆಯ ಮೇರೆಗೆ ಮೈಸೂರಿಗೆ ಪ್ರಯಾಣಮಾಡಿ, ಮಹಾಮಾತೃಶ್ರೀ ಲಕ್ಷ್ಮಮ್ಮಣ್ಣಿಯವರನ್ನು ಕಂಡು, ಗವರ್ನರ್ ಜನರಲ್ ಸಾಹೇಬರವರ ನಿರೂಪವನ್ನನುಸರಿಸಿ, ಚಾಮರಾಜ ಒಡೆಯರವರ ಪುತ್ರರಾದ ಶ್ರೀ ಕೃಷ್ಣರಾಜ ಒಡೆಯರವರಿಗೆ ಮೈಸೂರು ಸಂಸ್ಥಾನದ ಧೊರೆತನವನ್ನು ವಹಿಸಲು ಕಂಪೆನಿಯ ಸರ್ಕಾರದವರು ಏರ್ಪಡಿಸಿದ್ದಾರೆಂಬ ಶುಭವಾರ್ತೆಯನ್ನು ತಿಳಿಸಿದರು. ಟಿಪ್ಪೂಸುಲ್ತಾನನ ಬಾಧೆಯಿಂದ ಬಹುನೊಂದಿದ್ದ ರಾಜಮನೆತನದವರಿಗೆ ಆ ಮಾತುಗಳು ಕರ್ಣಾನಂದದಾಯಕಗಳಾಗಿದ್ದುವು. ಮಹಾರಾಣಿ ಲಕ್ಷ್ಮಮ್ಮಣ್ಣಿಯವರು- 'ನಮ್ಮನ್ನು ಬಂಧನದಿಂದ ತಪ್ಪಿಸಿ, ರಾಜ್ಯಪದವಿಯನ್ನು ಕೊಟ್ಟು, ಉದ್ಧರಿಸಿದ ಇಂಗ್ಲಿಷ್ ದರ್ಬಾರಿನವರಿಗೆ ನಾವು ವಂಶಪಾರಂಪರ್ಯವಾಗಿ ಕೃತಜ್ಞರಾಗಿರುವೆವು' - ಎಂದು ವಿಜ್ಞಾ

ಸಿಸಬೇಕೆಂದು ಹೇಳಿಕೊಂಡರು. ಆ ವೃತ್ತಾಂತವನ್ನು ಕೇಳಿ, ರಾಜಧಾನಿಯ ನಿವಾಸಿಗಳೂ ರಾಜ ಪರಿವಾರದವರೂ ಎಷ್ಟುಮಟ್ಟಿಗೆ ಆನಂದ ಪರವಶರಾಗಿರಬಹುದು !—

ಶಾ. ಶಕ. ೧೭೨೧ನೆಯ ಸಿದ್ಧಾರ್ಥಿ ಸಂ॥ ದ ಜ್ಯೇಷ್ಠ ಬಹುಳ ದ್ವಾದಶಿ (೧೭೯೯ನೆಯ ಜೂನ್ ೩೦) ಭಾನುವಾರ ಧೊರೆಗಳವರಿಗೆ ಪಟ್ಟಾಭಿಷೇಕವೆಂದು ಪ್ರಕಟಿಸಲ್ಪಟ್ಟಿತು. ರಾಜಧಾನಿಯೂ ಅರಮನೆಯೂ ನೇತ್ರಾನಂದಕರವಾಗಿ ಅಲಂಕರಿಸಲ್ಪಟ್ಟುವು. ಪೂರ್ಣಯ್ಯನವರ ಅಪ್ಪಣೆಯಿಂದ ಸಕಲ ನೌಕರರೂ, ರಾತ್ರಿ ಹಗಲುಗಳೆಂದು ಗಮನಿಸದೆ ನಿದ್ರೆ ಆಹಾರಗಳನ್ನು ಮರೆದು ಅವರವರ ಉದ್ಯೋಗಗಳಲ್ಲಿ ನಿರತರಾದರು. ಶ್ರೀರಂಗಪಟ್ಟಣದಿಂದ ಕರ್ನಲ್ ವೆಲ್ಲೆಸ್ಲಿ, ಜನರಲ್ ಹ್ಯಾರಿಸ್, ಬ್ಯಾರಿಕ್ಲೋಸ್ ಮೊದಲಾದ ಇಂಗ್ಲೀಷ್ ಸರದಾರರೂ ಹೈದರಾಬಾದಿನ ಮೀರ್ ಆಲಂ ಮುಂತಾದ ಅಧಿಕಾರಸ್ಥರೂ ಬಂದು ನೆರೆದರು. ಸಭೆಯು ಒಂದೆಡೆ ಸಹಸ್ರಾರುಮಂದಿ ಬ್ರಾಹ್ಮಣ ಸುವಾಸಿನಿಯರಿಂದಲೂ, ಮತ್ತೊಂದೆಡೆ ನಗರದ ಶೆಟ್ಟಿವರ್ತಕರು, ಇತರ ಪರಿವಾರದವರು ಮುಂತಾದ ಜನಗಳಿಂದಲೂ ತುಂಬಿತು. ಶ್ರೀ ಲಕ್ಷ್ಮೀರಮಣಸ್ವಾಮಿ ದೇವಸ್ಥಾನದಲ್ಲಿ ಸಿಂಗರಿಸಲ್ಪಟ್ಟಿದ್ದ ಅಭಿಷೇಕಮಂಟಪದಲ್ಲಿ ಪಟ್ಟಾಭಿಷೇಕ ಮಹೋತ್ಸವವು ನಡೆಯತಕ್ಕದೆಂದು ನಿಶ್ಚಿತವಾಗಿದ್ದಿತು. ಮಂಗಳಸ್ನಾನಮಾಡಿ, ದಿವ್ಯವಸ್ತ್ರಾಭರಣ ವಿಭೂಷಿತರಾಗಿ, ಧೊರೆಗಳವರು ಆನೆಯಮೇಲೆ ಅಂಬಾರಿಯಲ್ಲಿ ಕುಳಿತು ಮೆರೆವಣಿಗೆಯಾಗಿ ದೇವಸ್ಥಾನದಬಳಿ ಬಂದಿಳಿದರು. ತರುವಾಯ ಗಂಧರ್ವಗಾನವನ್ನು ನಾಚಿಸುವಂತೆ ದಿವ್ಯ ಮಂಗಳವಾದ್ಯಗಳು ಭೋರ್ಗರೆಯುತ್ತಿರಲು, ದ್ವಿಜೋತ್ತಮರು ವೇದಮಂತ್ರಗಳನ್ನು ಉದ್ಘೋಷಿಸುತ್ತಿರಲು, ಸಕಲರೂ ಜಯಜಯವೆಂದು ಉಚ್ಚಸ್ವರದಿಂದ ಜಯಘೋಷ ಮಾಡುತ್ತಿರಲು, ಸಿಂಹಾಸನದ ಒಂದು ಪಾರ್ಶ್ವದಲ್ಲಿ ಚಕ್ರವರ್ತಿ ಸಾರ್ವಭೌಮರ ಪರವಾಗಿ ಜನರಲ್ ಹ್ಯಾರಿಸ್ ಸಾಹೇಬರೂ ಮತ್ತೊಂದು ಪಕ್ಕದಲ್ಲಿ ಹೈದರಾಬಾದಿನ ನಿಜಾಮರ ಪರವಾಗಿ ಮೀರ್‌ಆಲಂರವರೂ ನಿಂತು, ಐದುವರ್ಷ ವಯಸ್ಸಿನ ಆ ಮಹಾರಾಜರ ಉಭಯ ಹಸ್ತಗಳನ್ನೂ ಹಿಡಿದು, ಸಿಂಹಾಸನವನ್ನೇರಿಸಿ ಕುಳ್ಳಿರಿಸಿದರು. ತರುವಾಯ ಯಥಾಶಾ

ಸ್ತ್ರವಾಗಿ ಸಕಲ ಕಾರ್ಯಗಳೂ ಸಾಂಗವಾಗಿ ನೆರವೇರಿದುವು. ಸಕಲರೂ ಆ ಮಹೋತ್ಸವಗಳನ್ನು ನೋಡಿ, ರಾಜವಂಶವು ಆಚಂದ್ರಾರ್ಕವಾಗಿ ಅಭಿವೃದ್ಧಿಯಾಗಿರಲೆಂದು ಆಶೀರ್ವದಿಸಿದರು.

ಧೊರೆಗಳವರಿಗೆ ಪಟ್ಟಾಭಿಷೇಕವು ನಡೆದ ಆ ಸಂದರ್ಭದಲ್ಲೇ ಜನರಲ್ ಹ್ಯಾರಿಸ್ ಸಾಹೇಬರು ಪೂರ್ಣಯ್ಯನವರನ್ನು ಸಿಂಹಾಸನದ ಬಳಿಗೆ ಕರೆದು * ನಾವು ಈಗ ಧೊರೆಗಳವರ ಸನ್ನಿಧಿಯಲ್ಲಿ ನಿಮಗೆ ಈ ಸಂಸ್ಥಾನದ ಮುಖ್ಯ ಮಂತ್ರಿ ಪದವಿಯನ್ನು ಕೊಡಿಸುತ್ತಲಿದ್ದೇವೆ. ಇಂದು ಮೊದಲುಗೊಂಡು ನೀವು ಸಮಸ್ತ ಕಾರ್ಯಗಳಲ್ಲೂ ಜಾಗರೂಕರಾಗಿದ್ದು, ಧೊರೆಗಳವರಿಗೆ ಹಿತವನ್ನೇ ಆಚರಿಸುತ್ತ, ಈ ಸಂಸ್ಥಾನದ ಪೂರ್ವ ಮರ್ಯಾದೆಯನ್ನು ಮೀರದೆ ಧೊರೆಗಳವರಿಗೆ ಬಾಲ್ಯ ವಯಸ್ಸು ಕಳೆದು, ಅವರು ಸರ್ವಸ್ವತಂತ್ರರಾಗಿ ರಾಜ್ಯ ಕೋಶ ಮುಂತಾದುದರ ವಿಚಾರಣೆಯನ್ನು ಮಾಡತಕ್ಕ ವಯಸ್ಸು ಬರುವವರೆಗೂ ನೀವೇ ಚೆನ್ನಾಗಿ ಸಕಲ ಕಾರ್ಯಗಳ ವಿಚಾರಣೆಯನ್ನೂ ಮಾಡಿಕೊಂಡಿದ್ದು ಆ ಬಳಿಕ ಧೊರೆಗಳವರ ಚಿತ್ತಾನುಸಾರ ಇರುವರಾಗಿರಿ:............ನಿಮ್ಮ ಮನಸ್ಸಿನಲ್ಲಿ ಸುಲ್ತಾನನ ಮಗನಿಗೆ ರಾಜ್ಯವನ್ನು ಕೊಡಿಸಬೇಕೆಂದಿದ್ದ ಅಭಿಪ್ರಾಯವನ್ನು ತಿಳಿದಿದ್ದರೂ, ಆ ಅಪರಾಧವನ್ನು ಕ್ಷಮಿಸಿ, ಇಲ್ಲಿ ಮಂತ್ರಿ ಪದವಿಯನ್ನು ಕೊಡಿಸಿದ್ದೇವೆ.'' ಎಂಬದಾಗಿ ಹೇಳಿ, ವಿನಯಶೀಲರಾಗಿದ್ದ ಪೂರ್ಣಯ್ಯನವರಿಗೆ ಧೊಗಳವರ ಹಸ್ತದಿಂದಲೇ ಮುಖ್ಯ ಮಂತ್ರಿ ಪದವಿಯನ್ನು ಕೊಡಿಸಿದರು. ತರುವಾಯ ಇತರ ಅನೇಕ ಅಧಿಕಾರಿಗಳನ್ನೂ ಸಂಸ್ಥಾನದ ಆಯಾ ಇಲಾಖೆಗಳಿಗೆ ನಿಯಮಿಸಿದ್ದಾಯಿತು. ಸಕಲರೂ ಯುಕ್ತರೀತಿಯು ಸಭಾಮರ್ಯಾದೆಗಳನ್ನು ಪಡೆದು ಯಥಾಸ್ಥಾನಗಳಿಗೆ ತೆರಳಿದರು.

ಆರ್ಷೇಯ ರಾಜಮನೆತನದ ಜೀರ್ಣೋದ್ಧಾರಕಾರ್ಯವನ್ನು ಹೀಗೆ ಸರ್ವ ಸಮ್ಮತಿಯಿಂದ ನೆರವೇರಿಸಿ, ಇಂಗ್ಲೀಷ್ ಸರಕಾರದವರು ಸಕಲರ ಕೃತಜ್ಞತೆಗೂ ಪಾತ್ರರಾದರು.



* ಶ್ರೀಮನ್ಮಹಾರಾಜರವರ ವಂಶಾವಳಿ, ಪುಟ ೨೫೦-೨೫೧.

**ಅಧ್ಯಾಯ ೫**  **"ರಾಜ್ಯಾಡಳಿತ"**

ಹೈದರಾಲಿ ಮತ್ತು ಟಿಪ್ಪೂಸುಲ್ತಾನ್ ಇವರ ಕಾಲದಲ್ಲೂ ಅದಕ್ಕೆ ಪೂರ್ವದಲ್ಲಿ ಯದುರಾಯರ ಕಾಲದಿಂದಲೂ ನಡೆದುಬಂದ ರಾಜವು ನೆತನದವರ ಕಾಲದಲ್ಲೂ ಸ್ವತಂತ್ರ ರಾಜ್ಯಾಡಳಿತದಲ್ಲಿದ್ದ ಮೈಸೂರು ಸಂಸ್ಥಾನವು, ಈಗ ಇಂಗ್ಲೀಷರ ಅಧೀನಕ್ಕೆ ಸಿಕ್ಕಿ ಆಶ್ರಿತ ಸಂಸ್ಥಾನವಾಯಿತು. ಆ ಸ್ಥಿತಿಯಲ್ಲಿ ಅದು ಸಾಮ್ರಾಜ್ಯ ಸರ್ಕಾರದವರೊಂದಿಗೆ ಕೆಲವು ಕಟ್ಟುಪಾಡುಗಳನ್ನು ಮಾಡಿಕೊಳ್ಳಬೇಕಾಯಿತು. ಒಂದು ಪಕ್ಷದಲ್ಲಿ ಚಿಕ್ಕವಯಸ್ಸಿನ ಶ್ರೀಮನ್ಮಹಾರಾಜಾ ಕೃಷ್ಣರಾಜ ಒಡೆಯರೂ, ಮತ್ತೊಂದು ಪಕ್ಷದಲ್ಲಿ ಇಂಗ್ಲಿಷ್ ಧೊರೆತನದವರ ಪರವಾಗಿ ಲಾರ್ಡ್ ಮಾರ್ನಿಂಗ್‌ಟನ್ ಸಾಹೇಬರೂ ಇದ್ದು ಒಂದು ತಹನಾಮೆಯು ಹುಟ್ಟಿತು. ಅದರ ಮೇರೆಗೆ.—

೧ ಇಂಗ್ಲೀಷ್ ಸರಕಾರದವರು ಮೈಸೂರು ದೇಶದ ರಕ್ಷಣೆಗಾಗಿ ಇಲ್ಲೊಂದು ತಮ್ಮ ಸೈನ್ಯವನ್ನಿಟ್ಟಿರತಕ್ಕದ್ದು; ಅದರ ವೆಚ್ಚಕ್ಕಾಗಿ ದೊರೆಗಳು ವರುಷವೊಂದಕ್ಕೆ ಏಳುಲಕ್ಷ ವರಹಗಳೆಂದರೆ ೨೪|| ಲಕ್ಷ ರೂಪಾಯಿಗಳನ್ನು ಸಲ್ಲಿಸತಕ್ಕದ್ದು.

೨ ದೇಶದಮೇಲೆ ಪರರಾಯರ ಧಾಳಿಯು ಪ್ರಾಪ್ತವಾಗುವ ಸಂದರ್ಭದಲ್ಲಿ, ಯುದ್ಧಕ್ಕಾಗಿ ತಗಲುವ ಖರ್ಚು ವೆಚ್ಚಗಳಿಗಾಗಿ, ಸಂಸ್ಥಾನದ ಆದಾಯ ವೆಚ್ಚಗಳನ್ನು ನೋಡಿ, ಗವರ್ನರ್ ಜನರಲ್ ಸಾಹೇಬರು ನಿಷ್ಕರ್ಷಿಸುವಷ್ಟು ದ್ರವ್ಯವನ್ನು ಧೊರೆಗಳು ಕೊಡತಕ್ಕದ್ದು.

೩ ಸಾಮ್ರಾಜ್ಯ ಸರಕಾರಕ್ಕೆ ಸಲ್ಲಬೇಕಾದ ಪೊಗದಿಯ ಹಣಕ್ಕೆ ತಡೆಯುಂಟಾದ ಸಂದರ್ಭದಲ್ಲಿ ಅವರು ಒಳದೇಶದ ಆಡಳಿತದಲ್ಲ ಪ್ರವೇಶಿಸಿ, ಆದಾಯ ವೆಚ್ಚಗಳನ್ನು ಕ್ರಮಪಡಿಸಬಹುದು. ಆವಶ್ಯಕ ತೋರುವ ನಿಯಮ ನಿಬಂಧನೆಗಳನ್ನು ನಿರ್ಮಿಸಬಹುದು. ಮತ್ತು ತಮಗೆ ಸಲ್ಲಬೇಕಾದ ಹಣಕ್ಕೆ ಆಧಾರವಾಗಿ ಸಂಸ್ಥಾನದಲ್ಲಿ ಯುಕ್ತ ತೋರಿದಷ್ಟು ಭೂಭಾಗವನ್ನು ತಮ್ಮ ಸ್ವಾಧೀನಕ್ಕೆ ತೆಗೆದುಕೊಳ್ಳಲೂ ಬಹುದು.

೪ ಹಾಗೆ ಸ್ವಾಧೀನಮಾಡಿಕೊಳ್ಳುವ ಸಂದರ್ಭವೊದಗಿದಾಗ ಮಹಾರಾಜರು ಯಾವ ತಡೆಯೂ ಇಲ್ಲದೆ ಆಡಳಿತವನ್ನು ಬಿಟ್ಟುಕೊಟ್ಟರಾದರೆ,

ಸಾಮ್ರಾಜ್ಯ ಸರ್ಕಾರದವರೇ ರಾಜ್ಯಭಾರ ನಡೆಸಿ, ಆದಾಯ ವೆಚ್ಚಗಳ ಲೆಕ್ಕಗಳನ್ನು ಅವರಿಗೆ ಒಪ್ಪಿಸಲು ಬದ್ಧರಾಗಿರತಕ್ಕದ್ದು. ಮತ್ತು ಅವರ ಸ್ವಂತ ವೆಚ್ಚಕ್ಕಾಗಿ ಮೂರುಲಕ್ಷ ರೂಪಾಯಿಗಳನ್ನೂ, ಖರ್ಚು ಕಳೆದು ಉಳಿದ ಹಣದಲ್ಲಿ, ಐದರಲ್ಲಿ ಒಂದಂಶವನ್ನೂ ಅವರಿಗೆ ಕೊಡತಕ್ಕದ್ದು.

೫ ಇಂಗ್ಲೀಷ್ ದೊರೆತನದವರ ಅನುಮತಿಯಿಲ್ಲದೆ, ಮೈಸೂರರಸರು ಇತರ ದೇಶಾಧಿಪತಿಗಳ ಸಂಗಡ ಸ್ನೇಹವನ್ನಾಗಲೀ ಪತ್ರ ವ್ಯವಹಾರವನ್ನಾಗಲೀ ನಡೆಯಿಸಕೂಡದು.

೬ ದೇಶದಲ್ಲಿನ ಕೋಟೆಗಳನ್ನು ಕಟ್ಟಿಸುವ ಅಥವ ಕೆಡಹುವ ಮುಂತಾದ ವಿಚಾರಗಳೆಲ್ಲಾ ಗವರ್ನರ್ ಜನರಲ್‌ರವರ ಆಜ್ಞೆಯಿಂದಲೇ ನಡೆಯಬೇಕು.

೭ ಸರಕಾರದ ದ್ರವ್ಯದ ವಿಷಯದಲ್ಲಿ ಮಿತವೆಚ್ಚ, ರಾಜ್ಯಭಾರದಲ್ಲಿ ನ್ಯಾಯವಿಮರ್ಶೆ, ವ್ಯಾಪಾರ, ವ್ಯವಸಾಯ, ಕೈಗಾರಿಕೆ ಮುಂತಾದುವುಗಳ ಅಭಿವೃದ್ಧಿ, ಪ್ರಜೆಗಳ ಕ್ಷೇಮಚಿಂತನೆ,-ಮಾತ್ರವಲ್ಲ, ದೊರೆಗಳವರ ಗೃಹಕೃತ್ಯ ವಿಚಾರ ಇವುಗಳ ವಿಷಯದಲ್ಲೂ, ಮಹಾರಾಜರು, ಕಾಲ ಕಾಲವರಿತು ಗವರ್ನರ್ ಜನರಲ್‌ರವರು ಕೊಡುವ ಬುದ್ಧಿವಾದವನ್ನು ಅಗತ್ಯ ಗಮನಿಸತಕ್ಕದ್ದು—

—ಎಂಬೀ ನಿಬಂಧನೆಗಳು ಉಭಯಪಕ್ಷದವರಿಂದಲೂ ಅಂಗೀಕೃತವಾದುವು. ಶ್ರೀ ಕೃಷ್ಣರಾಜ ಒಡೆಯರವರು ಇನ್ನೂ ಬಹು ಚಿಕ್ಕವಯಸ್ಸಿನವರಾದುದರಿಂದ ತಹನಾಮೆಗೆ ಮಹಾರಾಣಿ ಲಕ್ಷ್ಮಮ್ಮಣ್ಣಿಯವರೂ ದಿವಾನ್ ಪೂರ್ಣಯ್ಯನವರೂ ರುಜು ಹಾಕಿದರು. ಇಂದಿನಾರಭ್ಯ ಮೈಸೂರು ದೇಶಕ್ಕೆ, ಮರಾಠೆಯವರು ನಿಜಾಮು ಮುಂತಾದ ಶತ್ರುಗಳ ಹಾವಳಿಯು ತಪ್ಪಿತ್ತು.

ಟಿಪ್ಪೂಸುಲ್ತಾನನ ಭಯಂಕರ ಆಡಳಿತವು ಕೊನೆಗಂಡ ತರುವಾಯ ಮೈಸೂರುದೇಶವು ಶ್ರೀಮಾನ್ ಪೂರ್ಣಯ್ಯನವರ ಆಡಳಿತಕ್ಕೆ ಒಳಪಟ್ಟುದು, ದೇಶೀಯರ ಸುದೈವದಿಂದೆಂದು ಅನೇಕಮಂದಿ ಐತಿಹಾಸಿಕರು ಮುಕ್ತ ಹಸ್ತದಿಂದ ವರ್ಣಿಸಿರುತ್ತಾರೆ. ಮಹನೀಯರಾದ ಪೂರ್ಣಯ್ಯನವರು, ರಾಜ್ಯದ ಆಡಳಿತವನ್ನು ಕೈಗೆ ತೆಗೆದುಕೊಂಡು, ಮನಸ್ಸಾಕ್ಷಿಗೆ ವಿರೋಧವಿಲ್ಲದೆ, ಲೇಶಮಾತ್ರವೂ ಆಲಸ್ಯಭಾವಕ್ಕೆ ಆಸ್ಪದಕೊಡದೆ ತಾವು ಮಾಡುವ ದೇಶಸೇವೆ

ಯು ದೇವರ ಸೇವೆಯೆಂದು ದೃಢವಾಗಿ ನಂಬಿ, ಅಂದಿನಿಂದ ಸುಮಾರು ಹನ್ನೆರಡು ವರುಷಕಾಲ (೧೮೧೧) ರಾಜ್ಯಭಾರ ಮಾಡಿದರು. ರಾಜ್ಯ ಪಾಲನೆಯಲ್ಲಿ ಅವರು ಗಮನಿಸಿ ಆಚರಿಸಬೇಕಾದ ಕಾರ್ಯಗಳು ಮುಖ್ಯವಾಗಿ ನಾಲ್ಕು ಇದ್ದುವು.

೧ ದೇಶದ ಪ್ರಜಾವರ್ಗದ ಮನಸ್ಸಿನಲ್ಲಿ ಉಂಟಾಗಿದ್ದ ಅಶಾಂತತೆಯನ್ನು ಹೋಗಲಾಡಿಸಿ ದೇಶದಲ್ಲಿ ಸರ್ವತ್ರ ಶಾಂತಮಯ ವಾತಾವರಣವನ್ನು ಕಲ್ಪಿಸುವುದು.

೨ ದೇಶದ ಸದ್ಯಸ್ಥಿತಿಯನ್ನು ಉತ್ತಮಗೊಳಿಸಲು ಆವಶ್ಯಕವೆನ್ನಿಸುವ ರಾಜ್ಯಪದ್ಧತಿಯನ್ನು ರೂಢಿಗೆ ತರುವುದು.

೩ ಶತಮಾನ ಕಾಲವಾಗಿ ದೇಶದಲ್ಲಿ ನಡೆಯುತ್ತಿದ್ದ ಯುದ್ಧಗಳಿಂದ ದೇಶಕ್ಕೆ ಆಗಿದ್ದ ಕಷ್ಟನಷ್ಟಗಳನ್ನು ಸರಿಪಡಿಸುವುದು.

೪ ಸಾಮ್ರಾಜ್ಯ ಸರಕಾರದೊಂದಿಗೆ ಮಾಡಿಕೊಂಡ ತಹನಾಮೆಗೆ ವಿರೋಧವಾಗದಂತೆಯೂ, ಅದು ಅಕ್ಷರಶಃ ಪಾಲಿಸಲ್ಪಟ್ಟು, ಬ್ರಿಟಿಷ್ ಸರಕಾರಕ್ಕೆ ಸಂದಾಯವಾಗಬೇಕಾದ ಪೊಗದಿಯ ಹಣಕ್ಕೆ ತೊಂದರೆಯುಂಟಾಗದಂತೆಯೂ ಸಾಧ್ಯವಿರುವ ಸಕಲ ಪ್ರಯತ್ನಗಳನ್ನೂ ಮಾಡುವುದು.

ಇವುಗಳಲ್ಲಿ ಮೊದಲನೆಯ ಕಾರ್ಯವೊಂದು ಎಲ್ಲಕ್ಕಿಂತಲೂ ಮೊದಲು ಗಮನಿಸತಕ್ಕುದಾಗಿದ್ದಿತು. ಟಿಪ್ಪುವಿನ ಅವ್ಯವಸ್ಥಿತ ಆಡಳಿತದಿಂದ ರಾಜ್ಯದಲ್ಲಿ ಬಿಗಿ ತಪ್ಪಿಹೋಗಿತ್ತು. ಎಲ್ಲೆಲ್ಲೂ ಪಾಳಯಗಾರರು ತಮ್ಮ ತಮ್ಮ ಕೈಗೆ ಸಿಕ್ಕಷ್ಟು ಭಾಗವನ್ನು ಸ್ವಾಧೀನಪಡಿಸಿಕೊಂಡು ಸ್ವತಂತ್ರರಾಗ ತೊಡಗಿದ್ದರು ಪಾಳಯಗಾರರು ಮಾತ್ರವಲ್ಲ - ಆಯಾ ಸ್ಥಳಗಳಲ್ಲಿದ್ದ ಪ್ರಮುಖರಾದ ರೈತರಾಗಲೀ ಅಥವ ಪಟೇಲರಾಗಲೀ, ಆಯಾ ತಾಲ್ಲೂಕುಗಳ ರಕ್ಷಣೆಗೆಂದು ನಿಯಮಿತರಾಗುವ ಅಮಾಲರಿಗೆ ಕೇಳಿದಷ್ಟು ಲಂಚ ರುಷವತ್ತುಗಳನ್ನಿತ್ತು ತಾವೇ ಸರ್ವಾಧಿಕಾರಿಗಳೋ ಎಂಬಂತೆ ವರ್ತಿಸುವರು. ಅಮಾಲನೊಂದುವೇಳೆ ಅವರಿಗೆ ವಿರೋಧವಾಗಿ ನಡೆದನೆಂದರೆ ಒಡನೆ ಅವನು ಗುಪ್ತವಾಗಿ ಭಯಂಕರ ರೀತಿಯಿಂದ ಕೊಲ್ಲಲ್ಪಡುತ್ತಿದ್ದನು. ಒಬ್ಬನಿಗೆ ಅಂತಹ ಗತಿಯು ಪ್ರಾಪ್ತವಾದುದನ್ನು ತಿಳಿದ ಇತರರು ಯಾವ ತಂಟೆಗೂ ಹೋಗದೆ ತಮಗೆ ತೊಂದರೆಯಿಲ್ಲದಂತೆ ಕಾಲಯಾಪನೆ

ಮಾಡಿಕೊಂಡು, ಸ್ವಲಾಭದಲ್ಲಿ ದೃಷ್ಟಿಯಿಟ್ಟು ಸುಮ್ಮನಿದ್ದುಬಿಡುತ್ತಿದ್ದರು. ಅಮಿಲಾರಿಗೆ ಮೇಲ್ಪಟ್ಟ ಮುಸಲ್ಮಾನ ಅಧಿಕಾರಿಗಳ ಮನೆಯ ಸ್ತ್ರೀಯರೆಲ್ಲ ನಂಬಿಕೆಗಾಗಿ ಟಿಪ್ಪುವಿನ ಆಜ್ಞಾನುಸಾರ ರಾಜಧಾನಿಯಲ್ಲೇ ಇರಬೇಕಾಗಿದ್ದುದರಿಂದ ಅವರು ಸದಾಕಾಲವು ಚಿಂತಾಮಗ್ನರಾಗಿಯೋ ಅಥವ ಲಂಚ ಮುಂತಾದ ಹೀನ ಅಭಿಲಾಷಾಪೂರ್ಣತೆಯಲ್ಲಿ ಆಸಕ್ತರಾಗಿಯೋ ಕಾಲಯಾಪನೆ ಮಾಡುತ್ತಿದ್ದರಲ್ಲದೆ, ದೇಶದ ರಾಜಕೀಯ ವಿಚಾರವನ್ನು ಪೂರ್ಣ ಮನಸ್ಸಿನಿಂದ ಗಮನಿಸುತ್ತಿರಲಿಲ್ಲ. ಪ್ರಾರಂಭದಲ್ಲಿದ್ದ ಈ ತೊಂದರೆಗಳನ್ನು ಕರ್ನಲ್ ಬ್ಯಾರಿಕ್ಲೋಸ್, ಕರ್ನಲ್ ಸರ್ ಆರ್ಥರ್ ವೆಲ್ಲೆಸ್ಲಿ ಮತ್ತು ದಿವಾನ್ ಪೂರ್ಣಯ್ಯ ಇವರು ಧೈರ್ಯದಿಂದ ಎದುರಿಸಿ, ದೇಶದಲ್ಲಿ ಶಾಂತತೆಯನ್ನುಂಟುಮಾಡಲು ಸರ್ವ ಸಾಹಸಮಾಡಿದರು. ಅವರೆಗೆ ಯಾರಿಂದ ಸರಕಾರಕ್ಕೆ ಎಷ್ಟು ದ್ರವ್ಯ ಬಾಕೀ ಬರಬೇಕಾದುದಿದ್ದರೂ ಅದನ್ನೆಲ್ಲ ಮಾಫೀಯಾಗಿ ಬಿಟ್ಟುಬಿಟ್ಟರು. ದೇಶದ ಸುರಕ್ಷಣೆಗಾಗಿ ಇಪ್ಪತ್ತುಸಾವಿರ ಕಂದಾಚಾರದ ಸೈನ್ಯವನ್ನು ಏರ್ಪಡಿಸಿ ಅವರ ಕೆಲಸ ಕಾರ್ಯಗಳನ್ನು ನಿಗದಿಮಾಡಿದರು. ಪೂರ್ಣಯ್ಯನವರೂ ಕ್ಲೋಸ್ ಸಾಹೇಬರೂ ದೇಶದಲ್ಲೆಲ್ಲ ಸಂಚಾರವನ್ನು ಪ್ರಾರಂಭಿಸಿ, ಸ್ಥಳವಿದ್ಯಮಾನಗಳನ್ನು ಸ್ವತಃ ವಿಚಾರಮಾಡಿ ದೇಶಸ್ಥಿತಿಯನ್ನು ಅನುಭವಮಾಡಿಕೊಳ್ಳತೊಡಗಿದರು. ಈ ಸಂಚಾರದಲ್ಲಿ ಅವರು ಎಲ್ಲಕ್ಕಿಂತಲೂ ಮೊದಲು ಪಾಳೆಯಗಾರರ ವಿಷಯವನ್ನು ಕುರಿತು ಗಮನಿಸಬೇಕಾದುದು ಅತ್ಯಾವಶ್ಯಕವೆನ್ನಿಸಿತು. ಎದುರಿಸಿದವರನ್ನು, ತಮ್ಮ ಜೊತೆಗಿದ್ದ ಸೈನ್ಯದ ಸಹಾಯದಿಂದ ಅಡಗಿಸಿದರು. ಪುಂಡರೆಂದು ತೋರಿದವರನ್ನು ಕೈಸೆರೆಹಿಡಿದು ನಿರ್ಬಂಧಿಸಿದರು. ಶರಣಾಗತರಾದವರಿಗೆ, ಗೊತ್ತಾದ ವಾಸಸ್ಥಳಗಳನ್ನೇರ್ಪಡಿಸಿಕೊಟ್ಟು, ವಿರಾಮವೇತನ ಅಥವ ಪರಿಹಾರದ್ರವ್ಯಾದಿ ರೂಪದಿಂದ ವಶಪಡಿಸಿಕೊಂಡರು. ಯೋಗ್ಯರೂ ಬುದ್ಧಿವಂತರೂ ಎಂದು ತೋರಿದವರಿಗೆ ಸೈನ್ಯ ಅಥವ ಮುಲ್ಕೀ ಮುಂತಾದ ಇಲಾಖೆಗಳಲ್ಲಿ ಅವರಿಗೆ ಯೋಗ್ಯವಾದ ಉದ್ಯೋಗಕೊಟ್ಟು ಸ್ವಾಧೀನಪಡಿಸಿಕೊಂಡರು.

ದೇಶದಲ್ಲಿ ಪುಂಡುಮಾಡುತ್ತಿದ್ದ ಧೋಂಡೋಜೀವಾಗನೆಂಬ ಮರಾಠಾ ದರೋಡೇಕೋರನನ್ನೂ ಪಾಳೆಗಾರರ ಪ್ರಾಬಲ್ಯವನ್ನು ಅಡಗಿಸಿದ ತರುವಾಯ, ಪಾಳೆಯಗಾರರಿಲ್ಲದಿದ್ದ ಸ್ಥಳಗಳಲ್ಲಿ ಕಂದಾಚಾರ

ದವರ ಮೂಲಕ ರೈತರ ಪುಂಡುತನವನ್ನು ನಿಲ್ಲಿಸಿದರು. ಸರಕಾರದ ಆಡಳಿತವನ್ನು ಖಜಾನೆ, ಮುಲ್ಕಿ, ಸೈನ್ಯ, ಕಾಲುಬಲ, ಕಂದಾಚಾರ, ಚಿಲ್ಲರೆ ಬಾಬು ಎಂಬ ಆರು ಇಲಾಖೆಗಳಾಗಿ ವಿಂಗಡಿಸಿ, ಇವುಗಳ ಮೇಲ್ವಿಚಾರಣೆಯನ್ನು ದಿವಾನರು ಸ್ವತಃ ತಾವೇ ಇಟ್ಟುಕೊಂಡರು. ಕಂದಾಚಾರದವರು ಈಗಿನ ಟಪಾಲು ಇಲಾಖೆ, ಮತ್ತು ಪೊಲೀಸು ಇಲಾಖೆಗಳ ಕೆಲಸಗಳೆರಡನ್ನೂ ನಿರ್ವಹಿಸಬೇಕಾಗಿತ್ತು. ದೇಶವು ೧೧೬-೧೨೦ ತಾಲ್ಲೂಕುಗಳಾಗಿ ವಿಂಗಡವಾಗಿ ಅಷ್ಟು ಮಂದಿ ಅಮೀಲರು ಅಥವ ಅಮಲ್ದಾರರು ದಿವಾನರಿಂದ ನಿಯಮಿತರಾದರು. ಶ್ರದ್ಧಾಳುಗಳೂ ಪಾಪಭೀತರೂ, ಸದ್ಗುಣಸನ್ನಡತೆಗಳಿಂದ ದಿವಾನರಿಗೆ ಯೋಗ್ಯರೆಂದು ತೋರಿದವರೂ ಮಾತ್ರವೇ ಈ ಘನವಾದ ಉದ್ಯೋಗಗಳಿಗೆ ಕಳುಹಿಸಲ್ಪಡುತ್ತಿದ್ದರು. ಅಮಲ್ದಾರರು, ತಾಲ್ಲೂಕಿನ ಕಂದಾಯ ಖಜಾನೆ, ಸಾಧಾರಣ ನ್ಯಾಯವಿಮರ್ಶೆ ಮುಂತಾದ ವಿಚಾರಗಳನ್ನು ಗಮನಿಸುತ್ತಿದ್ದರು. ಚಿಲ್ಲರೆ ಬಾಬಿನಲ್ಲಿ, ಅರಮನೆಯ ಆಡಳಿತಗಳೂ, ನ್ಯಾಯವಿಚಾರಕ್ಕೆ ಸಂಬಂಧಿಸಿದ ಕಾಗದಪತ್ರಗಳ ರಕ್ಷಣೆ ಇವುಗಳೂ ಸೇರಿದ್ದುವು. ಬೆಂಗಳೂರು ಬಿದನೂರು ಮತ್ತು ಚಿತ್ರದುರ್ಗ ಈ ಮೂರು ಡಿವಿಜನ್ ಸ್ಥಳಗಳಲ್ಲಿ ಮಾತ್ರ ಸುಬೇದಾರರುಗಳೆಂಬ ಅಧಿಕಾರಿಗಳಿದ್ದು, ಅವರು ದೊಡ್ಡದೊಡ್ಡ ಸಿವಿಲ್ ಮತ್ತು ಕ್ರಿಮಿನಲ್ ಮೊಕದ್ದಮೆಗಳನ್ನು ವಿಚಾರನಡೆಸಿ ತೀರ್ಪು ಕೊಡುತ್ತಿದ್ದರು. ಹೀಗೆ ತೀರ್ಪುಕೊಡುವುದಾದರೂ ಅಧಿಕಾರಿಗಳ ಇಚ್ಛಾನುಸಾರವಾಗಿರಲಿಲ್ಲ. ಕ್ರಿಮಿನಲ್ ವ್ಯಾಜ್ಯಗಳಲ್ಲಿ ಅಪರಾಧಿಗೆ ಸಂಬಂಧವಿಲ್ಲದ ಐದುಮಂದಿ ಪಂಚಾಯಿತರೂ, ಸಿವಿಲ್ ವ್ಯಾಜ್ಯಗಳಲ್ಲಿ ಉಭಯ ಪಕ್ಷದವರೂ ಹಿಂದೂಗಳೇ ಆಗಿದ್ದರೆ, ಹಿಂದೂ ಪಂಚಾಯಿತರೂ, ಹಾಗಲ್ಲದಿದ್ದಲ್ಲಿ ವಾದಿಯ ಜಾತಿಯವರಿಬ್ಬರೂ, ಪ್ರತಿವಾದಿಯ ಜಾತಿಯ ಮೂವರೂ, ಪಂಚಾಯಿತರಾಗಿ ನಿಯಮಿಸಲ್ಪಟ್ಟು ಅವರ ಸಮಕ್ಷಮ ವಿಚಾರ ನಡೆಸಿ, ಅಮೀಲರಾಗಲೀ ಸುಬೇದಾರರಾಗಲೀ ಆ ಪಂಚಾಯಿತರ ಅಭಿಪ್ರಾಯದಮೇಲೆ, ತಮ್ಮ ಅಭಿಪ್ರಾಯವನ್ನು ಬರೆದು ದಿವಾನರಲ್ಲಿಗೆ ಕಳುಹಿಸುತ್ತಿದ್ದರು. ದಿವಾನರೂ, ಕೆಲವು ವೇಳೆ ಆ ಕಾಗದಪತ್ರಗಳ ಅವಲೋಕನದಿಂದಲೂ, ಕೆಲವು ವೇಳೆ ಪುನಃ ವಿಚಾರಮಾಡಿಯೂ, ಕೆಲವು ವೇಳೆ ರೆಸಿಡೆಂಟರೊಂ

ದಿಗೆ ಯೋಚಿಸಿಯೂ ತಮ್ಮ ತೀರ್ಮಾನವನ್ನು ಕೊಡುತ್ತಿದ್ದರು. ಅಮಾಲ್ದಾರ ಅಥವ ಸುಬೇದಾರರ ತೀರ್ಪಿನಮೇಲೆ ದಿವಾನರಲ್ಲಿ ಅಪ್ಪೀಲು ಮಾಡಿ ಕೊಳ್ಳಬಹುದಾಗಿತ್ತು. ದಿವಾನರು ಮೇಲಿಂದಮೇಲೆ ದೇಶದಲ್ಲಿ ಸಂಚಾರ ವನ್ನಿಟ್ಟುಕೊಂಡೇ ಇರುತ್ತಿದ್ದುದರಿಂದ, ಅಧಿಕಾರಿಗಳು ತಮ್ಮ ಮನ ಬಂದಂತೆ ನಡೆಯುವುದಕ್ಕಾಗಲೀ, ಪ್ರಜೆಗಳ ವಿಚಾರದಲ್ಲಿ ಅನ್ಯಾಯ ಅಪ ಡ್ಡಾಳಗಳು ನಡೆಯುವುದಕ್ಕಾಗಲೀ ಲೇಶಮಾತ್ರವೂ ಅವಕಾಶವಿರಲಿಲ್ಲ. ಖೂನಿ ಅಥವ ದರೋಡೆ ಮುಂತಾದ ಅಪರಾಧಗಳನ್ನು ಮಾಡಿದಂಥವ ರನ್ನು ದಿವಾನರೂ ರೆಸಿಡೆಂಟರೂ ವಿಚಾರ ನಡೆಸಿ ಮರಣದಂಡನೆಯನ್ನು ವಿಧಿಸುತ್ತಿದ್ದುದುಂಟು. ೧೮೦೫ನೆಯ ಸಂವತ್ಸರದಲ್ಲಿ ಅದಾಲತ್ ಕಚೇರಿ ಎಂಬ ಮುಖ್ಯ ನ್ಯಾಯಸ್ಥಾನವು ಏರ್ಪಾಡಾಯಿತು. ಅಲ್ಲಿಯ ನ್ಯಾಯಾ ಧೀಶರು ದಿವಾನರ ಆಲೋಚನೆಯನ್ನು ಕೇಳಿಯೇ ತೀರ್ಪು ಹೇಳುತ್ತಿ ದ್ದರು. ಮತಸಂಬಂಧವಾದ ವ್ಯಾಜ್ಯಗಳು ಬಂದಾಗ್ಗೆ ಮುಹಮ್ಮದೀಯರ ವ್ಯಾಜ್ಯಗಳು ಖಾಜೀಗಳ ಪಂಚಾಯಿತಿಯಿಂದಲೂ, ಹಿಂದೂಗಳ ವ್ಯಾಜ್ಯ ಗಳು ಪೂರ್ವಾಚಾರವನ್ನು ಅನುಸರಿಸಿಯಾಗಲೀ, ಧರ್ಮಶಾಸ್ತ್ರಾನುಸಾರ ವಾಗಿಯಾಗಲೀ ತೀರ್ಮಾನಿಸಲ್ಪಡುತ್ತಿದ್ದುವು.

ಸರ್ಕಾರದ ಉತ್ಪತ್ತಿಗೆ ಭೂಕಂದಾಯ, ಸಾಯರು, ತೆರಿಗೆ, ಆಬ್ಕಾರಿ, ಹೊಗೆಸೊಪ್ಪು ಇವು ಮುಖ್ಯ ಅಂಶಗಳಾಗಿದ್ದುವು. ಭೂಕಂದಾಯದಲ್ಲಿ, ಮನೆಗಂದಾಯ ಎರುಕಂದಾಯಗಳೆರಡೂ ಸೇರಿದ್ದುವು. ಸಾಯರು ತೆರಿ ಗೆಯು ಕೆಲವುಕಡೆ ನೇರವಾಗಿ ಸರಕಾರದ ನೌಕರರಿಂದಲೂ, ಮತ್ತೆ ಕೆಲವುಕಡೆ ಗುತ್ತಿಗೆದಾರರಿಂದಲೂ ವಸೂಲಾಗುತ್ತಿತ್ತು.

ಪೂರ್ಣಯ್ಯನವರು ರಾಜ್ಯದ ಆಡಳಿತದ ಸುವ್ಯವಸ್ಥೆಗಾಗಿ ಮಾಡಿದ ಮೇಲ್ಕಂಡ ಹಲವು ಬಗೆಯ ಏರ್ಪಾಡುಗಳಿಂದ ದೇಶದಲ್ಲಿ ಸರ್ವತ್ರ ಸುಖ ಶಾಂತಿ ಸಮಾಧಾನಗಳು ನೆಲೆಸಿದುವು. ಪ್ರಜೆಗಳು ತಮ್ಮ ತಮ್ಮ ಗ್ರಾಮ ಗಳಲ್ಲಿ ಮನೆ ಬಾಗಿಲುಗಳನ್ನು ಕಟ್ಟಿಕೊಂಡು, ತಮ್ಮ ಧನ ಮಾನ ಪ್ರಾಣ ಗಳಿಗೆ ಭಯವಿಲ್ಲವೆಂದು ಧೈರ್ಯಗೊಂಡು ನೆಲೆಸಿದರು. ಸೀಮೆಯಲ್ಲಿ ವ್ಯವ ಸಾಯವೂ ವ್ಯಾಪಾರವೂ ಉದ್ಯೋಗವೂ ದಿನದಿನಕ್ಕೆ ಹೆಚ್ಚಿದುವು. ದಿವಾನ್ ಪೂರ್ಣಯ್ಯನವರು ಸಂಸ್ಥಾನದ ಆಡಳಿತವನ್ನು ಕೈಕೊಂಡ ತರುವಾಯ

ನಾಲ್ಕೈದು ವರ್ಷಗಳಲ್ಲೇ ಎಷ್ಟುಮಟ್ಟಿನ ಅಭಿವೃದ್ಧಿಯು ಕಂಡುಬಂದಿತೆಂಬುದನ್ನು ಈ ಕೆಳಗೆ ಕೊಟ್ಟಿರುವ ಪಟ್ಟಿಯಿಂದ ತಿಳಿಯಬಹುದು.

| | ೧೮೦೧ | ೧೮೦೫ |
|---|---|---|
| *ಗ್ರಾಮ ಗ್ರಾಮಾಂತರಗಳು | ೫೦೬ | ೨೫೩೦೩ |
| ಮನೆಗಳು | ೧೨೮೪೭ | ೫೭೬೪೫೯ |
| ಕುಟುಂಬಗಳು | ೧೨೦೪೧ | ೪೮೨೬೧೨ |
| ಜನಸಂಖ್ಯೆ (ಕುಟುಂಬ 1ಕ್ಕೆ 4½ಯಂತೆ) | ೫೪೧೮೪ | ೨೧೭೧೭೫೪ |
| ನೇಗಿಲುಗಳು | ೯೧೭೩ | ೩೨೪೫೪೮ |
| ಮಗ್ಗಗಳು | ೬೪೦ | ೩೦೯೪೨ |
| ಅಂಗಡಿಗಳು | ೧೯೫ | ೧೩೮೪೦ |

ಪೂರ್ಣಯ್ಯನವರ ಆಡಳಿತದಿಂದ ದೇಶಕ್ಕೆ ಎಷ್ಟುಮಟ್ಟಿನ ಸುಖಸಂಪತ್ತುಗಳು ಪ್ರಾಪ್ತವಾದುವು, ಅವರು ಕಂಪೆನಿ ಸರಕಾರದವರೊಂದಿಗೆ ಮಾಡಿಕೊಂಡ ಕರಾರಿಗೆ ಲೇಶಮಾತ್ರವೂ ವ್ಯತ್ಯಾಸವುಂಟಾಗದಂತೆ, ಎಷ್ಟು ತೃಪ್ತಿಕರವಾಗಿ ರಾಜ್ಯದ ಕಾರುಭಾರುಗಳನ್ನು ನಡೆಯಿಸಿಕೊಂಡು ಹೋಗುತ್ತಿದ್ದರು ಎಂಬುದನ್ನು ಕುರಿತು, ಆಗ ಇಲ್ಲೇ ಇದ್ದ ಕರ್ನಲ್ ವಿಲ್ಕ್ಸ್ ಸಾಹೇಬನು ಗವರ್ನರ್ ಜನರಲ್ ಸಾಹೇಬರಿಗೆ ಬರೆಯುತ್ತಿದ್ದ ಕಾಗದಪತ್ರಗಳಲ್ಲೆಲ್ಲಾ ವಿಸ್ತಾರವಾಗಿ ಹೊಗಳಿ ಬರೆದಿದ್ದಾನೆ. ಆಗ ಅಧಿಕಾರದಲ್ಲಿದ್ದ ಜನರಲ್ ಆರ್ಥರ್ ವೆಲ್ಲೆಸ್ಲಿ ಸಾಹೇಬನೂ, ಅವರು, ಸಬ್‌ಸಿಡಿಯರಿ ಕರಾರುಗಳಿಗೆ ಲೇಶಮಾತ್ರವೂ ವಿರೋಧವುಂಟಾಗದಂತೆ ತೃಪ್ತಿಕರವಾಗಿ ಆಡಳಿತ ನಡೆಸಿದರೆಂದು ಮುಕ್ತ ಹಸ್ತನಾಗಿ ವರ್ಣಿಸಿದ್ದಾನೆ. ಅವರು ಅಧಿಕಾರ ಸೂತ್ರಗಳನ್ನು ವಹಿಸಿದ ಎರಡನೆಯ ವರ್ಷದಲ್ಲೇ ಎಂದರೆ, ೧೮೦೧ನೆಯ ಮೇ ೨೬ರಲ್ಲಿ ಆತನು ಬರೆದ ಒಂದು ಪತ್ರದಿಂದ ಈ ವಿಚಾರವು ಬಹು ಸ್ಪಷ್ಟವಾಗಿ ಗೋಚರವಾಗುತ್ತದೆ.

‡ "ರಾಜರ ಸರಕಾರವು ಸುವ್ಯವಸ್ಥಿತ ಸ್ಥಿತಿಯಲ್ಲಿದೆ. ಹಿಂದಿನ ಕಿರಾತರಾಜ್ಯಭಾರದ ಹಾವಳಿಯಿಂದ ದೇಶಾಂತರಗತರಾಗಿ ಹೋಗಿದ್ದ ಜನಗಳೆಲ್ಲ

*Mysore Gazetteer Pages 2783 Vol. II Part IV

‡ " PP. 2795-2796.

ರೂ ಹಿಂದಿರುಗಿ ತಮ್ಮ ಸ್ವಸ್ಥಳಗಳನ್ನು ಸೇರುತ್ತಿದ್ದಾರೆ. ರಾಜಮನೆತನದವರು, ಪೂರ್ವದ ತಳಹದಿಯ ಮೇಲೆಯೇ ಮನೋಹರವಾಗಿ, ನೂತನವಾಗಿ ಕಟ್ಟಲ್ಪಟ್ಟ ತಮ್ಮ ಅರಮನೆಯನ್ನು ಪ್ರವೇಶಮಾಡಿ ಅಲ್ಲಿ ನಿರ್ಭೀತರಾಗಿ ಸುಖವಾಗಿ ವಾಸಮಾಡಿಕೊಂಡಿದ್ದಾರೆ. ಮೈಸೂರು ನೇತ್ರಾನಂದಕರವಾಗಿ ಕಟ್ಟಲ್ಪಟ್ಟು ಜನಭರಿತವಾಗಿದೆ. ದೇಶವಾದ್ಯಂತವೂ ಸುಖವಾಗಿಯೂ ಶಾಂತವಾಗಿಯೂ ಇದೆ. ರಾಜರ ಭಂಡಾರವು ಧನಾಭಾವವಿಲ್ಲದೆ ತುಂಬಿರಬೇಕೆಂದು ನನ್ನ ಎಣಿಕೆಯಿದೆ; ಏಕೆಂದರೆ, ನಮಗೆ ಬರಬೇಕಾದ ಕಿಸ್ತುಗಳು ತಗಾದೆಯಿಲ್ಲದೆಯೇ ಕಾಲಕ್ಕೆ ಸರಿಯಾಗಿ ಬರುತ್ತಿವೆ. ದಿವಾನ್ ಪೂರ್ಣಯ್ಯನವರು, ದೇಶವನ್ನು ಇಷ್ಟುಮಟ್ಟಿನ ಸುಸ್ಥಿತಿಗೆ ತಂದಿರುವುದು ಮಾತ್ರವಲ್ಲ; ಮುಂದೆ ಶಾಶ್ವತವಾಗಿ ದೇಶಕ್ಷೇಮವನ್ನು ಮನಸ್ಸಿನಲ್ಲಿಟ್ಟು ದೇಶದಲ್ಲಿರುವ ಕೆರೆ ಕೊಳಗಳನ್ನೆಲ್ಲ ಆಬಾದು ಸ್ಥಿತಿಗೆ ತಂದು ವ್ಯವಸಾಯಕ್ಕೆ ಅನುಕೂಲಪಡಿಸಿದ್ದಾರೆ. ಅನೇಕ ಊರುಗಳನ್ನೂ ಕೋಟೆ ಕೊತ್ತಲಗಳನ್ನೂ ಕಟ್ಟಿಸಿದ್ದಾರೆ. ಮುಂಗಡವಾಗಿ ದ್ರವ್ಯಸಹಾಯ ಮಾಡುವುದರ ಮೂಲಕವೂ, ಬಾಕಿಗಳನ್ನು ಮಾಫೀ ಬಿಡುವುದರ ಮೂಲಕವೂ, ಪ್ರಜೆಗಳಿಗೆ ಸ್ವಾವಲಂಬಿಗಳಾಗುವಂತೆ ಉತ್ತೇಜನ ಕೊಡುತ್ತಿದಾರೆ. ನಾವು ಈ ದೇಶದಲ್ಲಿ ನೂತನ ಆಡಳಿತವನ್ನು ಪ್ರಾರಂಭಿಸಿದಾಗ್ಗೆ, ಇದು ಎಷ್ಟುಮಟ್ಟಿಗೆ ಅಭಿವೃದ್ಧಿಯಾಗಬೇಕೆಂದು ಇಚ್ಛಿಸಿದ್ದೆವೋ, ಅಷ್ಟುಮಟ್ಟಿಗೆ ಸಂಪೂರ್ಣವಾಗಿ ಅಭಿವೃದ್ಧಿಯಾಗಿದೆಯೆಂದು ಸಂತೋಷದಿಂದ ಹೇಳುತ್ತೇನೆ.''

ದೇಶದಲ್ಲಿ ವಾಸಿಸುವ ಪ್ರಜೆಗಳು ಪ್ರಾಣಭೀತಿಯಿಲ್ಲದಂತೆ, ಸುಖವಾಗಿ ತಮ್ಮ ಮನೆಗಳಲ್ಲ ವಾಸಮಾಡಲು ಆವಶ್ಯಕವಾದಷ್ಟುಮಟ್ಟಿನ ಕಾರ್ಯಗಳನ್ನು ಮೇಲ್ಕಂಡಂತೆ ನೆರವೇರಿಸಿದ ತರುವಾಯ, ಪೂರ್ಣಯ್ಯನವರು, ದೇಶಾಭಿವೃದ್ಧಿಯ ಇತರ ಕಾರ್ಯಗಳನ್ನು ಕುರಿತು ಯೋಚಿಸತೊಡಗಿದರು. ಟೀಪುವಿನ ಕಾಲದಲ್ಲಿ ಕಿತ್ತು ನಾಶಪಡಿಸಿದ್ದ ಮೈಸೂರಿನ ಕೋಟೆಯನ್ನೂ, ಬೆಂಗಳೂರು ಮತ್ತು ಚನ್ನಪಟ್ಟಣಗಳ ಕೋಟೆಗಳನ್ನೂ ಪುನಃ ಕಟ್ಟಿಸಿದರು. ಶ್ರೀರಂಗಪಟ್ಟಣದಲ್ಲಿ ಮಹಾರಾಜರ ವಾಸಕ್ಕೆಂದು ೧೧೦೦೦ ವರಹಗಳ ವೆಚ್ಚದಿಂದ ಒಂದು ಮಹಲನ್ನು ಕಟ್ಟಿಸಿದರು. ೬೪೫೦೦ ವರಹಾಗಳ ವೆಚ್ಚದಿಂದ ಆಗ ಗವರ್ನರ್‌ಜನರಲ್ ಆಗಿದ್ದ ವೆಲ್ಲೆಸ್ಲಿ ಸಾಹೇಬರ

ಜ್ಞಾಪಕಾರ್ಥವಾಗಿ ಕಾವೇರೀ ನದಿಗೆ ಒಂದು ದೊಡ್ಡ ಸೇತುವೆಯನ್ನು ಕಟ್ಟಿಸಿದರು. ಅದು ಈಗಲೂ ವೆಲ್ಲೆಸ್ಲಿಬ್ರಿಡ್ಜ್ ಎಂದು ಪ್ರಸಿದ್ಧವಾಗಿದೆ. ಲಕ್ಷ್ಮಣತೀರ್ಥ ನದಿಗೆ ಸಾಗರಕಟ್ಟೆ ಬಳಿಯ ಅಣೆಕಟ್ಟೂ, ಪೂರ್ಣಯ್ಯನವರಿಂದಲೇ ಪ್ರಾರಂಭಿಸಲ್ಪಟ್ಟಿತು. ರೆಸಿಡೆಂಟಾಗಿದ್ದ ಬ್ಯಾರಿ ಕ್ಲೋಸ್ ಸಾಹೇಬನ ಜ್ಞಾಪಕಾರ್ಥವಾಗಿ ಕ್ಲೋಸ್‌ಪೇಟೆ ಎಂಬ ಊರನ್ನು ಕಟ್ಟಿಸಿದರು. ರೆಸಿಡೆಂಟ್ ವೆಬ್ ಸಾಹೇಬನ ಜ್ಞಾಪಕಾರ್ಥವಾಗಿ ಒಂದು ದೊಡ್ಡ ಕಲ್ಲುಕಂಭದಮೇಲೆ ಶಾಸನವನ್ನು ಬರೆಯಿಸಿ ಶ್ರೀರಂಗಪಟ್ಟಣಕ್ಕೆ ಉತ್ತರದಲ್ಲಿ ನೆಡಿಸಿದರು. ಅವರ ಆಡಳಿತದ ಹನ್ನೊಂದು ವರ್ಷಗಳಲ್ಲಿ ವರ್ಷವೊಂದಕ್ಕೆ ಏಳುಲಕ್ಷ ರೂಪಾಯಿಗಳಿಗೆ ಕಡಮೆಯಿಲ್ಲದೆ ರಸ್ತೆಗಳ ನಿರ್ಮಾಣಕ್ಕಾಗಿ ವಿನಿಯೋಗಿಸಿ ದೇಶದಲ್ಲೆಲ್ಲಾ ಪ್ರಯಾಣಕ್ಕೆ ವಿಶೇಷ ಸೌಕರ್ಯವನ್ನುಂಟುಮಾಡಿದರು. ಎಲ್ಲೆಲ್ಲೂ ಅನ್ನಛತ್ರಗಳೂ ಮುಸಾಫರ್‌ಖಾನೆಗಳೂ ಕಟ್ಟಿಸಲ್ಪಟ್ಟುವು. ರಸ್ತೆಗಳಿಗೆಲ್ಲ ಸಾಲುಮರಗಳು ಅವರ ಕೀರ್ತಿಧ್ವಜಗಳೋ ಎಂಬಂತೆ ಬೆಳೆಸಲ್ಪಟ್ಟುವು. ಆ ಮಹಾನುಭಾವರು ದಿವಂಗತರಾಗಿ ಎಷ್ಟುದಿನಗಳಾದರೂ ಆಗಿರಲಿ, ಅವರ ರಾಜನೀತಿ ಪ್ರದರ್ಶಕವಾದ ಆಡಳಿತವು ರಾಜ್ಯಾಧಿಕಾರಿಗಳಿಗೆ ಆದರ್ಶಕವಾಗಿದ್ದು - ಕಾಲಾನುಸಾರವಾಗಿ ಮರೆಯಾಗಿರಲಿ-ಆದರೆ 'ಪೂರ್ಣಯ್ಯನವರ ಛತ್ರ' ಎಂಬೊಂದು ಮಾತಿನ ಮೂಲಕ ಇನ್ನೂ ಎಷ್ಟು ತಲಾಂತರಗಳಾದರೂ, ಕನ್ನಡ ದೇಶದ ಪ್ರತಿಯೊಂದು ಮನೆಯಲ್ಲೂ ಅವರ ಹೆಸರು ಶಾಶ್ವತವಾಗಿ ಜೀವಿಸಿರಬಲ್ಲುದು ?

ಪೂರ್ಣಯ್ಯನವರ ದಿವಾನ್‌ಗಿರಿಯಲ್ಲಿ ೧೭೯೯ರಲ್ಲಿ ನಡೆದ ಕರಾರು ಒಂದು ಮಾತ್ರವಲ್ಲದೆ, ೧೮೦೧, ೧೮೦೩ ಮತ್ತು ೧೮೦೭ ಈ ಮೂರು ಸಂವತ್ಸರಗಳಲ್ಲಿ ಮೂರು ಬೇರೆ ಬೇರೆ ಕರಾರುಗಳು, ಮೈಸೂರು ದರ್ಬಾರಿಗೂ, ಕಂಪೆನಿ ಸರಕಾರಕ್ಕೂ ನಡೆದುವು. ಇವುಗಳಿಂದ ಈಗ ಬಳ್ಳಾರಿ ಉತ್ತರ ಆರ್ಕಾಡು ಮುಂತಾದ ಜಿಲ್ಲೆಗಳಿಗೆ ಸೇರಿರುವ ಕೆಲಕೆಲವು ಸ್ಥಳಗಳನ್ನು ಆಳ್ವಿಕೆಯ ಸೌಕರ್ಯಕ್ಕಾಗಿ ಕಂಪೆನಿಯವರು ಬ್ರಿಟಿಷ್ ರಾಜ್ಯಭಾರಕ್ಕೆ ಸೇರಿಸಿಕೊಂಡು ತಮಗೆ ಸೇರಿದ್ದ ಕೆಲವು ಸ್ಥಳಗಳನ್ನು ಮೈಸೂರು ರಾಜ್ಯಾಡಳಿತಕ್ಕೆ ವಹಿಸಿದರು. ೧೮೦೭ನೆಯ

ವರ್ಷದಲ್ಲಿ ನಡೆದ ಮೂರನೇ ಕರಾರಿನಲ್ಲಿ, ಹಿಂದಿನ ತಹನಾಮೆಯ ಪ್ರಕಾರ ಯುದ್ಧಕಾಲದಲ್ಲಿ ಒಂದು ಸೈನ್ಯವನ್ನು ಕಳುಹಿಸಬೇಕೆಂದಿದ್ದ ನಿಬಂಧನೆಯು ಬದಲಾಯಿಸಲ್ಪಟ್ಟು, ನಾಲ್ಕುಸಾವಿರ ಕುದುರೆ ಸೈನ್ಯವನ್ನು ಒದಗಿಸಬೇಕೆಂದು ಕ್ಲೃಪ್ತವಾಯಿತು. ಮೈಸೂರು ದರ್ಬಾರಿನ ವಿಷಯದಲ್ಲಿ ಕಂಪೆನಿ ಸರಕಾರದವರಿಗೆ ಸಂಪೂರ್ಣ ತೃಪ್ತಿಯುಂಟಾಯಿತು.

ಪೂರ್ಣಯ್ಯನವರ ಹನ್ನೆರಡು ವರ್ಷಗಳ ಆಳ್ವಿಕೆಯಲ್ಲಿ ದೇಶಾಭಿವೃದ್ಧಿಕರವಾದ ಅನೇಕಾನೇಕ ಸಂಗತಿಗಳು ನಡೆದುವು. ಅವುಗಳನ್ನೆಲ್ಲಾ ಈ ಚಿಕ್ಕ ಪುಸ್ತಕದಲ್ಲಿ ವಿವರಿಸುವುದು ಸಾಧ್ಯವಲ್ಲವಾಗಿ ಅತಿಮುಖ್ಯವಾದ ಕೆಲವು ವಿಚಾರಗಳನ್ನು ಮಾತ್ರ ಇಲ್ಲಿ ಕೊಡಲೆಳಸುತ್ತೇನೆ.

ಟಿಪ್ಪುವಿನಿಂದ ಆಕ್ರಮಿಸಲ್ಪಟ್ಟಿದ್ದ ಆನೇಗೊಂದಿ ಸಂಸ್ಥಾನದ ಕೆಲವು ಭಾಗವು ೧೭೯೯ರಲ್ಲಿ ರಾಜ್ಯವಿಭಾಗವಾದಾಗ ನಿಜಾಮನ ಭಾಗಕ್ಕೆ ಹೋಯಿತು. ಪೂರ್ಣಯ್ಯನವರು ಆ ಸಂದರ್ಭದಲ್ಲಿ ಆನೇಗೊಂದಿ ರಾಜವಂಶೀಕನಾಗಿದ್ದ ತಿರುಮಲರಾಯನೆಂಬಾತನಿಗೆ, ಆ ಸೀಮೆಯ ಪರಿಹಾರ ದ್ರವ್ಯವಾಗಿ ೩೩೭೫ ಕಂಠೀರಾಯ ವರಹಗಳನ್ನು ಕೊಡಿಸಿದರು. ಇದು ಅವರ ಉದಾರ ಸ್ವಭಾವವನ್ನು ವ್ಯಕ್ತಗೊಳಿಸುತ್ತದೆ.

೧೭೯೯ - ೧೮೧೦ನೆಯ ಸಂವತ್ಸರಗಳಲ್ಲಿ ಮೈಸೂರು ಸಂಸ್ಥಾನದಲ್ಲಿ ಪೂರ್ತಿಯಾದ ಸರ್ವೆ ಕೆಲಸವು ನಡೆದು, ೧೮೦೮ರಲ್ಲಿ ಲೆ. ಕ. ಕೋಲಿನ್ ಮೆಕೆಂಜಿ ಎಂಬಾತನಿಂದ ಮೈಸೂರುದೇಶದ ನಕಾಶೆಯು ಸಿದ್ಧಪಡಿಸಲ್ಪಟ್ಟಿತು.

೧೮೦೦ - ೧೮೦೧ನೆಯ ಸಂವತ್ಸರಗಳಲ್ಲಿ, ಬುಕನನ್ ಹ್ಯಾಮಿಲ್ಟನ್ ಎಂಬಾತನು ಮದರಾಸಿನಿಂದ ಹೊರಟು, ಮೈಸೂರು ದಕ್ಷಿಣ ಕನ್ನಡ ಮತ್ತು ಮಲಬಾರು ಸೀಮೆಗಳಲ್ಲಿ ಸಂಚರಿಸಿ, ದೇಶದ ಉತ್ಪತ್ತಿ, ಕೈಗಾರಿಕೆ, ವ್ಯಾಪಾರ, ವ್ಯವಸಾಯ ಮುಂತಾದ ವಿಚಾರಗಳನ್ನೆಲ್ಲಾ ವಿಸ್ತಾರವಾಗಿ ಬರೆದಿಟ್ಟನು. ಅದರಿಂದ ಟಿಪ್ಪುಸುಲ್ತಾನನು ಅಂತ್ಯವಾದೊಡನೆಯೇ ದೇಶಸ್ಥಿತಿಯು ಹೇಗಿತ್ತೆಂಬ ವಿಚಾರದಲ್ಲಿ ಒಂದು ಅಗಾಧ ನಿಧಿಯೇ ದೊರೆಯಲು ಅನುಕೂಲವಾಗಿದೆ. ಮೈಸೂರು ದೇಶದಲ್ಲಿ ಆಬ್ಬೆ

ದುಬಾಯಿಸ್ ಎಂಬವರಿಂದ ಪ್ರಥಮಕ್ಕೆ ಕ್ಯಾಥೋಲಿಕ್ ಚರ್ಚ್ ಕಟ್ಟಲ್ಪಟ್ಟಿತು.

೧೮೦೯ನೆಯ ಸಂವತ್ಸರದಲ್ಲಿ ಈ ದೇಶದಲ್ಲಿ ದೇವೀ ಹಾಕಿಸುವ ಪದ್ಧತಿಯು ಆಚರಣೆಗೆ ಬಂತು. ಪ್ರಥಮಕ್ಕೆ, ಮಹಾರಾಣಿ ಲಕ್ಷ್ಮಮ್ಮಣ್ಣಿಯವರ ಪ್ರಯತ್ನದಿಂದ ಅರಮನೆಯಲ್ಲೇ,-ಕೃಷ್ಣರಾಜ ಒಡೆಯರವರನ್ನು ಮದುವೆಯಾಗಲಿದ್ದ ವಧುವಿಗೇ ದೇವೀ ಹಾಕಿಸಲಾಯಿತು. ಈ ಸಂಗತಿಯನ್ನು ದಿವಾನ್ ಪೂರ್ಣಯ್ಯನವರಿಂದ ತಿಳಿದ ಮದರಾಸ್ ಗವರ್ನರ್ ಲಾರ್ಡ್ ವಿಲಿಯಂ ಬೆಂಟಿಂಕ್ ಸಾಹೇಬನು, ಹಿಂದೂಸ್ಥಾನದ ಎಲ್ಲಾ ಪ್ರಜೆಗಳಿಗೂ ಈ ಉಪಚರಣೆಯನ್ನು ಪ್ರಚಾರಗೊಳಿಸಿ, ಆ ಚಿಕಿತ್ಸಾ ಪದ್ಧತಿಯನ್ನು ವಿಶೇಷ ಪ್ರಸಿದ್ಧಿಗೆ ತರಲು ಪ್ರಯತ್ನ ನಡೆಸಿದನು.

ಶ್ರೀರಂಗಪಟ್ಟಣ ಶಿರಾ ಮುಂತಾದ ಸ್ಥಳಗಳಲ್ಲಿದ್ದ ಬ್ರಿಟಿಷ್ ಸೈನ್ಯಗಳಿಗೆ, ಆಯಾ ಸ್ಥಳಗಳ ಹವೆಯು ಸರಿಬೀಳದೆ ವಿಶೇಷ ಅನಾರೋಗ್ಯವಾಗುತ್ತಿದ್ದುದರಿಂದ ೧೮೦೯ರಲ್ಲಿ ಬೆಂಗಳೂರಿನಲ್ಲಿ ದಂಡಿನವಾಸಕ್ಕೆ ಅನುಕೂಲವಾದ ಏರ್ಪಾಡುಗಳನ್ನು ಮಾಡಿ ಅಲ್ಲಿಗೆ ತರಲ್ಪಟ್ಟು ಅದನ್ನು 'ಬೆಂಗಳೂರು ಕಂಟೋನ್ಮೆಂಟು' ಎಂಬ ಹೆಸರಿನಿಂದ ಅಭಿವೃದ್ಧಿಪಡಿಸಲಾಯಿತು.

೧೮೧೦ನೆಯ ಸಂವತ್ಸರವು ಮುಗಿಯುತ್ತಿರಲಾಗಿ, ವಯೋವೃದ್ಧರಾದ ಪೂರ್ಣಯ್ಯನವರು, ಆಗ ರೆಸಿಡೆಂಟಾಗಿದ್ದ ಕರ್ನಲ್ ಮಾಲ್ಕಂ ಸಾಹೇಬನನ್ನು ಕುರಿತು ತಮ್ಮ ದಿವಾನಗಿರಿಯನ್ನು ತಮ್ಮ ಮನೆತನಕ್ಕೇ ಹಕ್ಕುದಾರಿಯಾಗಿರುವಂತೆ ಅನುಕೂಲಮಾಡಿಕೊಡಬೇಕೆಂದು ಕೇಳಿಕೊಂಡರು. ಅದು ಮೇಲಕ್ಕೆ ತಿಳಿಸಲ್ಪಡಲಾಗಿ, ಅಲ್ಲಿಂದ ಮಹಾಬಹಾದೂರಿಯು ಒಂದು ಸಂಸ್ಥಾನದ ದಿವಾನಗಿರಿಯನ್ನು ಹಾಗೆ ಹಕ್ಕುದಾರಿಯನ್ನಾಗಿಸುವುದು ಯುಕ್ತವಲ್ಲವೆಂದು ಯೋಚಿಸಿ, ಅದಕ್ಕೆ ಬದಲಾಗಿ ವರ್ಷವೊಂದಕ್ಕೆ ೧೦೦೦೦ ವರಹಾ ಉತ್ಪನ್ನವಿದ್ದ ಯಳಂದೂರೆಂಬ ಒಂದು ತಾಲ್ಲೂಕನ್ನು ಅವರ ಪರಿಶ್ರಮಗಳಿಗೆ ಪ್ರತಿಫಲವಾಗಿ ಇನಾಮಾಗಿ ಕೊಡಬಹುದೆಂದು, ಗವರ್ನರ್ ಜನರಲ್‌ರವರ ಅಪ್ಪಣೆಮೇರೆಗೆ ಮೈಸೂರು ಮಹಾರಾಜರವರು ಸಮ್ಮತಿಸಿದರು. ೧೮೧೧ನೇ ಡಿಸೆಂಬರು ೨೭ನೆಯ ದಿನ ಮಹಾರಾಜರವರು ದೊಡ್ಡದೊಂದು ದರ್ಬಾರು ನಡೆಸಿ, ಅದಕ್ಕೆ ದಿವಾನ್ ಪೂರ್ಣಯ್ಯನವರನ್ನು ವಿಶೇಷ ಗೌರವ

ದಿಂದ ಬರಮಾಡಿಕೊಂಡು, ಆ ಸಂದರ್ಭದಲ್ಲಿ ಯೋಗ್ಯವಾದ ಖಿಲ್ಲತ್ತುಗಳೊಂದಿಗೆ, ಜಹಗೀರನ್ನು ಅವರಿಗೆ ಒಪ್ಪಿಸಿದರು.

ಇದಾದ ತರುವಾಯ ೧೮೦೯ರಲ್ಲಿ ಯೂರೋಪಿಯನ್ ಸೋಲ್ಜರುಗಳು ದಂಗೆಯೆದ್ದರು. ಅದನ್ನು ಅಡಗಿಸುವ ವಿಚಾರದಲ್ಲೂ ಇಂಗ್ಲೀಷ್ ಆಫೀಸರುಗಳೊಂದಿಗೆ ಮೈಸೂರು ದರ್ಬಾರಿನವರು ವಹಿಸಿದ ಶ್ರದ್ಧೆಯು ವಂದಿಸಲ್ಪಟ್ಟಿದೆ.

ಪೂರ್ಣಯ್ಯನವರು ತಮ್ಮ ಬಹು ಜವಾಬುದಾರಿಯ ದಿವಾನಗಿರಿ ಕೆಲಸಕ್ಕೆ ಸಂಬಂಧಿಸಿದ ರಾಜಕೀಯ ಕಾರ್ಯಗಳಲ್ಲಿ ಹಗಲೂ ರಾತ್ರಿಯೂ ಮಗ್ನರಾಗಿದ್ದರಾದರೂ ಮಹಾರಾಜರ ವಿದ್ಯಾಭ್ಯಾಸದಲ್ಲಿ ಎಂದೂ ಅಶ್ರದ್ಧೆವಹಿಸಿದವರಲ್ಲ. ರಾಜಕಾರ್ಯದ ವಿಷಯದಲ್ಲಿ ತಮ್ಮ ಜವಾಬುದಾರಿಯು ಎಷ್ಟು ಮಟ್ಟಿನದಿತ್ತೋ, ಅಷ್ಟೇ ಪ್ರಮಾಣದ ಉತ್ತರವಾದಿತ್ವವು ಬಾಲರಾಜರ ವಿದ್ಯಾಭ್ಯಾಸದ ವಿಷಯದಲ್ಲೂ ಇತ್ತೆಂಬುದನ್ನು ಅವರು ಚೆನ್ನಾಗಿ ತಿಳಿದಿದ್ದರು. ಧೊರೆಗಳ ಅವಲೋಕನ-ಅಪ್ಪಣೆಗಳಿಗೆಂದು ಕಳುಹಿಸಿದ ಪ್ರತಿಯೊಂದು ಕಾಗದವನ್ನೂ ಅವರು ಖುದ್ದಾಗಿ ಓದಿನೋಡಿ, ತರುವಾಯವೇ ರುಜುಮಾಡಬೇಕೆಂದು ಅವರು ಕೇಳಿಕೊಂಡಿದ್ದರು. ಮಹಾರಾಜರಿಗೆ ೧೮೧೧ನೆಯ ವರ್ಷದ ವೇಳೆಗೆ ಹದಿನೆಂಟು ವರ್ಷಗಳು ತುಂಬುತ್ತಿದ್ದವು. ಅಷ್ಟರೊಳಗೆ ಅವರು, ಕನ್ನಡ, ಮರಾಠಿ, ಪರ್ಷಿಯನ್ ಮತ್ತು ಸಂಸ್ಕೃತ ಭಾಷೆಗಳಲ್ಲಿ, ತಕ್ಕಷ್ಟು ಪಾಂಡಿತ್ಯವನ್ನು ಸಂಪಾದಿಸಿ, ರಾಜ್ಯಭಾರವನ್ನು ವಹಿಸಿಕೊಳ್ಳಲು ತಕ್ಕ ಸಾಮರ್ಥ್ಯವಂತರಾಗಿದ್ದರು. ಅವರಿಗೆ ಹದಿನಾರು ವರ್ಷಗಳು ತುಂಬಿದಾಗಿನಿಂದಲೂ, ಸಂಸ್ಥಾನದ ಎಲ್ಲಾ ಇಲಾಖೆಗಳ ಆಡಳಿತದಲ್ಲೂ ಪ್ರವೇಶಿಸಿ ಅನುಭವಗೊಳ್ಳುವಂತೆ ಪೂರ್ಣಯ್ಯನವರು ಒತ್ತಾಯಗೊಳಿಸುತ್ತಲೇ ಇದ್ದರು. ಕೊನೆಗೆ ೧೮೧೧ರಲ್ಲಿ ಶ್ರೀಮನ್ಮಹಾರಾಜರು ತಾವೇ ಸ್ವತಃ ಆಳ್ವಿಕೆಯನ್ನು ವಹಿಸಲು ಇಚ್ಛೆಗೊಂಡಿದ್ದೇವೆಂದು, ಆಗ ರೆಸಿಡೆಂಟಾಗಿದ್ದ ಕೋಲ್ ಸಾಹೇಬನಲ್ಲಿ ತಿಳಿಸಿದರು. ಕೋಲ್ ಸಾಹೇಬರು ಆ ಸಂಗತಿಯನ್ನು ಪೂರ್ಣಯ್ಯನವರಿಗೆ ತಿಳಿಸಿ, ಶ್ರೀಮನ್ಮಹಾರಾಜರು ಆಳ್ವಿಕೆಯನ್ನು ಸ್ವೀಕರಿಸಿದರೂ, ದಿವಾನಪದವಿಯನ್ನು ತಾವೇ ವಹಿಸಿರುವಂತೆ ಅನುಕೂಲಗೊಳಿಸುವುದಾಗಿ ಹೇಳಿದರು. ಆದರೆ ವೃದ್ಧಾಪ್ಯದಿಂದಲೂ, ವಯ್ಯ

ಸ್ಸಿಗೆ ಸಹಜವಾದ ಚಿಂತಾ ಮತ್ತು ಆಲಸ್ಯಾದಿಗಳಿಂದಲೂ ಬಹುಮಟ್ಟಿಗೆ ಝುರ್ಝುರಿತರಾಗಿದ್ದ ಪೂರ್ಣಯ್ಯನವರು ಮುಂದೂ ಅಧಿಕಾರಮಾಡಲು ಇಷ್ಟವಿಲ್ಲದೆ, ವಿಶ್ರಾಂತಿಯನ್ನು ಹೊಂದಬಯಸಿ, ೧೮೧೧ನೆಯ ಡಿಶಂಬರಿನಲ್ಲಿ ಶ್ರೀರಂಗಪಟ್ಟಣಕ್ಕೆ ಪ್ರಯಾಣಮಾಡಿದರು. ಮುಂದೆ ಆ ಮಹಾಮಂತ್ರಿಯು ಬಹುಕಾಲ ಜೀವಿಸಲಿಲ್ಲ.—'ನಾನಿನ್ನು ನನ್ನ ಪಿತೃಪಿತಾಮಹರಿರುವ ಸ್ಥಾನಕ್ಕೆ ಪ್ರಯಾಣಮಾಡುತ್ತೇನೆ' ಎಂದು, ಅವರು ಆಗ ಅಲ್ಲಿನ ಕೋಟೆಯಲ್ಲಿ ಸೈನ್ಯಾಧಿಪತಿಯಾಗಿದ್ದ ಕರ್ನಲ್ ಹಿಲ್ ಸಾಹೇಬನಿಗೆ ಹೇಳಿ ಕಳುಹಿಸಿದರು. ಮತ್ತು, ತರುವಾಯ ಸ್ವಲ್ಪ ದಿವಸಗಳಲ್ಲೇ, ಎಂದರೆ ೧೮೧೨ನೆಯ ಮಾರ್ಚಿ ೨೭ನೆಯ ದಿನ ಅಲೌಕಿಕ ಕಾರ್ಯಕಲಾಪಗಳಿಂದಲೂ ಅಧಿಕಾಧಿಕ ದೇಶಸೇವೆಯಿಂದಲೂ ಜೀರ್ಣವಾಗಿದ್ದ ತಮ್ಮ ಭೌತಿಕ ಕಳೇಬರವನ್ನು ತ್ಯಜಿಸಿ ದಿವಂಗತರಾದರು.



## ಗುಣಾತಿಶಯಗಳು

ಪೂರ್ಣಯ್ಯನವರು ದಿವಂಗತರಾದರೆಂಬ ವಾರ್ತೆಯು ಒಡನೆ ಎಲ್ಲೆಲ್ಲೂ ಹಬ್ಬಿತು. ಆಗ ನಂದೀದುರ್ಗದಲ್ಲಿದ್ದ ರೆಸಿಡೆಂಟ್ ಕೋಲ್ ಸಾಹೇಬನು ಆ ಸಂಗತಿಯನ್ನು ಮದರಾಸು ಗವರ್ನರಿಗೆ ತಿಳಿಸಿದನು. ಅಲ್ಲಿಂದ ಆ ವೃತ್ತಾಂತವು ಗವರ್ನರ್ ಜನರಲ್ ಸಾಹೇಬನಿಗೆ ಕಳುಹಿಸಲ್ಪಟ್ಟಿತು. ಆ ಇಬ್ಬರೂ ಆ ಮಹಾಮಂತ್ರಿಯ ಮರಣಕ್ಕಾಗಿ ವ್ಯಥೆಪಟ್ಟರಲ್ಲದೆ, ಪೂರ್ಣಯ್ಯನವರ ಜ್ಯೇಷ್ಠಪುತ್ರರಾದ *ಆನಂದರಾಯರಿಗೆ ತಮ್ಮ ಸಂತಾಪವನ್ನು ತಿಳಿಸಬೇಕೆಂದು ಬರೆದು ಖಿಲ್ಲತ್ತುಗಳೊಡನೆ ಕಳುಹಿಸಿದರು. ಪೂರ್ಣಯ್ಯನವರ ವಿಚಾರದಲ್ಲಿ ಕಂಪೆನಿ ಸರಕಾರದ ಮಹೋನ್ನತ ಅಧಿಕಾರಿಗಳಲ್ಲೂ ಎಂತಹ ಅಭಿಪ್ರಾಯವಿತ್ತೆಂಬುದನ್ನು ಆ ಸಂದರ್ಭದಲ್ಲಿ ಗವರ್ನರ್ ಜನರಲ್

---

*ಇವರು ಅನಂತರಾಯರೆಂತಲೂ ಕರೆಯಲ್ಪಟ್ಟಿದ್ದಾರೆ.

ಲಾರ್ಡ್ ಮಿಂಟೋಯವರು ಬರೆದು ಕಳುಹಿಸಿದ ಒಂದು *ಪತ್ರವು ಉತ್ತಮ ರೀತಿಯಿಂದ ವ್ಯಕ್ತಗೊಳಿಸುತ್ತದಾದುದರಿಂದ ಅದನ್ನು ಇಲ್ಲಿ ಉದ್ಧರಿಸುತ್ತೇವೆ

ಶ್ರೀಮನ್ಮಹಾರಾಜರವರು ಮಂತ್ರಿವರ್ಯರ ಮರಣವಾರ್ತೆಯನ್ನು ಕೇಳಿದೊಡನೆಯೇ ವ್ಯಸನಾಕ್ರಾಂತರಾಗಿ, ಅವರ ಕುಟುಂಬದವರಿಗೆ ತಮ್ಮ ಅನುತಾಪವನ್ನು ತಿಳಿಸುವಂತೆ ಹೇಳಿಕಳುಹಿಸಿದ್ದಲ್ಲದೆ, ಶ್ರೀರಂಗಪಟ್ಟಣದ ಕೋಟೆಯಲ್ಲಿದ್ದ ತಮ್ಮ ಅರಮನೆಯನ್ನು ಅವರ ಉತ್ತರಕ್ರಿಯಾದಿಗಳು ನಡೆಯುವ ಕಾಲದಲ್ಲಿ ಅವರ ಮನೆಯವರ ವಶಕ್ಕೆ ಬಿಟ್ಟುಕೊಡಬೇಕೆಂದು ಅಲ್ಲಿನ ಅಧಿಕಾರಿಗಳಿಗೆ ಆಜ್ಞಾಪಿಸಿದರು. ಅಲ್ಲದೆ ಪೂರ್ಣಯ್ಯನವರಿಗೆ ಸಲ್ಲುತ್ತಿದ್ದ ವಿಶ್ರಾಂತ ವೇತನ (500 Star Pagodas) ವನ್ನು ಅವರ ಮಕ್ಕಳು ಅನಂತರಾಯರಿಗೂ ಕೊಡುತ್ತಾಬರಬೇಕೆಂದು ಆಜ್ಞಾಪಿಸಿದರು.

*The Right Honourable the Governor General in Council has received the intelligence of the decease of Purnaiya with the feelings naturally excited by the contemplation of the eminent service, which he must be considered to have rendered to the British Government as well as to that of Mysore, by the wisdom, integrity, and ability of his distinguished and brilliant administration and by a recollection of the virtues of his character, and singal merits of his conduct in the discharge of the duties of that high and res-- ponsible situation... ... ... ... ... ... .. ... ... .. ... ... ....
PP. 2825, Mysore Gajetteer Vol. II Part-IV

ಮಾರ್ಕ್ವಿಸ್ ವೆಲ್ಲೆಸ್ಲಿ, ಜನರಲ್ ವೆಲ್ಲೆಸ್ಲಿ, ಸರ್. ಬ್ಯಾರಿಕ್ಲೋಸ್ ಮುಂತಾದ ಎಲ್ಲಾ ಇಂಗ್ಲಿಷ್ ಅಧಿಕಾರಿಗಳೂ ಪೂರ್ಣಯ್ಯನವರ ಅತ್ಯುತ್ತಮರೀತಿಯ ಆಳ್ವಿಕೆಯನ್ನು ಕುರಿತು ವಿಶೇಷ ರೀತಿಯಿಂದ ಹೊಗಳಿದ್ದಾರೆ. ಕರ್ತವ್ಯನಿಷ್ಠರಾದ ಪೂರ್ಣಯ್ಯನವರು ಪ್ರೇಲ್ಯಾಂಡ ಬ್ರಿಟಿಷ್ ಅಧಿಕಾರಿಗಳಿಗೆ ಅತಿಶಯ ತೃಪ್ತಿಯುಂಟಾಗುವಂತೆ ನಡೆದುಕೊಂಡರು. ಪೂರ್ಣಯ್ಯನವರ ಮೃತವಾರ್ತೆಯನ್ನು ಕೇಳಿದೊಡನೆಯೇ ಅವರಲ್ಲಿ ಒಬ್ಬೊಬ್ಬರೂ ಆ ಮಂತ್ರಿವರ್ಯರ ಗುಣಾತಿಶಯಗಳನ್ನೂ, ಕರ್ತವ್ಯ ತತ್ಪರತೆಯನ್ನೂ, ಕುರಿತು ದೀರ್ಘಪತ್ರಗಳನ್ನು ಬರೆದಿದ್ದಾರೆ. ಜನರಲ್ ವೆಲ್ಲೆಸ್ಲಿ ಸಾಹೇಬನು, ಇಲ್ಲಿಂದ ಸೀಮೆಗೆ ಹೊರಟುಹೋಗುವ ಸಂದರ್ಭದಲ್ಲಿ ಅವರ ಸದ್ಗುಣಗಳನ್ನೂ, ಸೌಜನ್ಯವನ್ನೂ, ರಾಜಕಾರ್ಯನಿಷ್ಠೆಯನ್ನೂ ವಿಶೇಷವಾಗಿ ಹೊಗಳಿ, ತನ್ನ ಪರಿಚಯವನ್ನು ಅವರು ಮರೆಯದಿರಲಿಕ್ಕಾಗಿ, ತನ್ನ ಪೂರ್ಣಪ್ರಮಾಣದ ಪ್ರತಿರೂಪ ಚಿತ್ರ (Full Size Photo) ವನ್ನು ಕಳುಹಿಸಿದ್ದನು. ಸರ್. ಜಾನ್ ಮಾಲ್ಕಂ ಎಂಬ ಆಂಗ್ಲೇಯ ದೊಡ್ಡ ಮನುಷ್ಯನೂ, ಅವರ ಅಪೂರ್ವ ಮೇಧಾಶಕ್ತಿಯನ್ನೂ, ಜನಗಳನ್ನು ತಮ್ಮ ಅಭಿಪ್ರಾಯಕ್ಕೆ ಒಲಿಸಿಕೊಳ್ಳಬಲ್ಲ ಅವರ ಆಕರ್ಷಕ ಸ್ವಭಾವವನ್ನೂ ಕುರಿತು, ಹೊಗಳಿ ಬರೆದಿದ್ದಾನೆ.

ಪೂರ್ಣಯ್ಯನವರು ಕೇವಲ ಸರಳ ಪ್ರಕೃತಿಯವರು. ನಡೆವಳಿಕೆಯಲ್ಲಿ ಆಡಂಬರವು ಅವರಿಗೆ ಸೇರದು. ದೇಹವು ಮಟ್ಟತರವಾಗಿಯೂ ಸ್ವಲ್ಪ ಸ್ಥೂಲವಾಗಿಯೂ ಇದ್ದು, ನೋಟಕ್ಕೆ ಎಣೆಗೆಂಪು ವರ್ಣದಿಂದ ಅವರು ಸುಲಕ್ಷಣ ಶರೀರಿಗಳಾಗಿದ್ದರು. ಕಷ್ಟಸಹಿಷ್ಣುತೆಯಲ್ಲಿ ಅವರಿಗೆ ಸಮಾನರಿರಲಿಲ್ಲ. ಕೆಲಸಬಿದ್ದ ರೀತಿಯಲ್ಲಿ ಆಹಾರಕ್ಕಾಗಲೀ ಲಘು-ಬಹಿಃಶ್ಯಂಕೆಗಳಿಗಾಗಲೀ ಏಳದೆ ಹಲವು ಗಂಟೆಗಳಕಾಲ ಕುಳಿತು, ಕರ್ತವ್ಯಮಗ್ನರಾಗಿದ್ದುಬಿಡುವರಂತೆ! ಶ್ರೀಮನ್ಮಧ್ವಾಚಾರ್ಯರವರಲ್ಲಿ ಪರಮ ಭಕ್ತಿಯುಳ್ಳವರಾಗಿದ್ದು, ಆ ಮಹಾನುಭಾವರಿಂದಲೂ ಮತ್ತು ವ್ಯಾಸತೀರ್ಥರಿಂದಲೂ ವಿರಚಿತವಾದ ಸಕಲಗ್ರಂಥಗಳನ್ನೂ ಮೂಲತಃ ಪಾಠ ಮಾಡಿದ್ದರು. ಪ್ರತಿದಿನವೂ ಸ್ವತಃ ಮನೆಯ ದೇವತಾರ್ಚನೆ ಮಾಡದಲ್ಲದೆ ಅವರು ಎಂದೂ ಊಟಮಾಡಿದವರಲ್ಲ. ಅವರ ಬ್ರಾಹ್ಮಣ

ಕರ್ಮನಿಷ್ಠೆಯು ಎಷ್ಟುಮಟ್ಟಿನದೆಂಬುದಕ್ಕೆ ಒಂದು ವಿಚಾರವು ದಂತ ಕಥೆಯಾಗಿ ಹೇಳಲ್ಪಟ್ಟಿದೆ. ಅವರು ಸಂಸ್ಥಾನದಲ್ಲಿ ಸಂಚರಿಸುತ್ತಿದ್ದಾಗ್ಗೆ ಒಂದುದಿನ ಸಂಧ್ಯಾಕಾಲದಲ್ಲಿ ಒಬ್ಬ ಬ್ರಾಹ್ಮಣ ಅಮಲ್ದಾರನು ಸೂರ್ಯನಿಗೆ ಎದ್ದುನಿಂತು ಅರ್ಘ್ಯಕೊಡದೆ, ಕುಳಿತಲ್ಲಿಂದಲೇ ಬೊಗಸೆ ನೀರನ್ನೆತ್ತಿ ಚೆಲ್ಲಿದುದನ್ನು ಕಂಡು, ಆತನನ್ನು 'ಸಸ್ಪೆಂಡು' ಮಾಡಿದ್ದರಂತೆ! ಗಾಬರಿಗೊಂಡ ಅಮಲ್ದಾರನು, ದಿವಾನರನ್ನು ಕಂಡು ತನ್ನ ಅಪರಾಧವೇನೊ ಅಪ್ಪಣೆಕೊಡಿಸಬೇಕೆಂದು ಬೇಡಿಕೊಳ್ಳಲು,- 'ಅಲ್ಲವಯ್ಯ, ನಿಮ್ಮ ಜನ್ಮಸಾರ್ಥಕ್ಯಕ್ಕಾಗಿ ಸೂರ್ಯಭಗವಾನನಿಗೆ ಕೊಡುವ ಅರ್ಘ್ಯದ ವಿಷಯದಲ್ಲೇ ಅಷ್ಟುಮಟ್ಟಿನ ಅಲಕ್ಷ್ಯಭಾವದಿಂದ ನಡೆದುಕೊಳ್ಳುವ ನೀವು, ಇನ್ನು ಸರಕಾರಿ ಕೆಲಸವನ್ನು ಎಷ್ಟುಮಟ್ಟಿನ ಶ್ರದ್ಧೆಯಿಂದ ಮಾಡಬಲ್ಲಿರಿ!' ಎಂದು ಆಕ್ಷೇಪಿಸಿ, ಬುದ್ಧಿಹೇಳಿ, ತನ್ನ ತಪ್ಪಿಗಾಗಿ ಪಶ್ಚಾತ್ತಾಪ ಪಟ್ಟ ಆತನನ್ನು ಕ್ಷಮಿಸಿ ಕಳುಹಿಸಿದರಂತೆ!

ಪೂರ್ಣಯ್ಯನವರು ಎಷ್ಟುಮಟ್ಟಿನ ಬರಹಗಾರರೋ ಅಷ್ಟುಮಟ್ಟಿನ ಯುದ್ಧಕಲಾ ವಿಶಾರದರಾಗಿಯೂ ಇದ್ದರೆಂದು ಈವರೆಗೇ ಹೇಳಿದೆಯಲ್ಲವೆ? ಅಲ್ಲದೆ ಅವರಿಗೆ 'ಇಂಜನೀರಿಂಗ್' ಎಂದರೆ ಮರಾಮತ್ತು-ಶಿಲ್ಪಶಾಸ್ತ್ರಗಳಲ್ಲೂ ಸರ್ವೇಬಾಬಿನಲ್ಲೂ ಅತಿಶಯವಾದ ಪ್ರಜ್ಞೆಯಿದ್ದಿತೆಂದು ಹೆಸರುವಾಸಿಯಿದೆ. ಆ ಮಂತ್ರಿಶೇಖರರ ವಿಶೇಷ ಶಕ್ತಿಸಾಮರ್ಥ್ಯಗಳಿಗೆ ಮುಖ್ಯ ಕಾರಣವೇನೆಂದರೆ, ಅವರು ತಮಗೆ ಸರಿಯೆಂದು ತೋರಿದ ಕಾರ್ಯವನ್ನು ತಮ್ಮ ಪೂರ್ಣಶಕ್ತಿಯಿಂದ ಮಾಡಿಬಿಡುವರಲ್ಲದೆ, ತಮ್ಮ ವಿಷಯದಲ್ಲಿ ಇತರರು ಏನೆಂದುಕೊಳ್ಳುವರು, ಏನು ಅಭಿಪ್ರಾಯಪಡುವರು ಎಂದು ಎಂದೂ ಕಾದು ಕುಳಿತವರಲ್ಲ. ಅವರು ಗವರ್ನರ್ ಜನರಲ್ ಮುಂತಾದ ಅಧಿಕಾರಿಗಳನ್ನೂ ಮೆಚ್ಚಿಸಿ - ಇನ್ನಿವರ ಸಮಾನರಿಲ್ಲ - ಎಂದು ಹೊಗಳಿಸಿಕೊಂಡರಾದರೂ ಅವರಿಗೆ ಇಂಗ್ಲೀಸು ಭಾಷೆಯ ಪರಿಚಯವಿರಲಿಲ್ಲವಂತೆ. ಬ್ರಿಟಿಷ್ ಜನಗಳ ಸ್ವಾಭಾವಿಕ ಗುಣ ನಡತೆಗಳು ಎಂಥವೆಂಬುದನ್ನು ತಿಳಿದುಕೊಂಡು, ಅವುಗಳಿಗೆ ಅನುಗುಣವಾಗಿ ತಮ್ಮ ಮನಸ್ಸಾಕ್ಷಿಗೆ ವಿರೋಧವಿಲ್ಲದಂತೆ ನಡೆದು, ಅದ್ವಿತೀಯರೆ

ನ್ನಿಸಿಕೊಂಡ ಮಹಾಮತಿಗಳಿವರು- ಭಾವದಾಸ್ಯಕ್ಕೆ ಒಲಿಬಿದ್ದು, ಅವರ ಸಂಸ್ಕೃತಿಯ ಗುಲಾಮರಾದವರಲ್ಲ !

ಮಂತ್ರಿಪುಂಗವರಾದ ಪೂರ್ಣಯ್ಯನವರು ಬ್ರಾಹ್ಮಣಕುಲಶಿರೋಮಣಿಯೆನ್ನಿಸಿದ್ದರು. ಅವರ ಸಂಗಡ ಸಂಭಾಷಣೆಯು ಆಹ್ಲಾದಕರವಾಗಿರುವುದು. ಬರೆಯುವುದಕ್ಕೂ ಓದುವುದಕ್ಕೂ ಬಾರದಿದ್ದರೂ ಅವರಿಗೆ ಇಂಗ್ಲೀಷ್ ಭಾಷೆಯು ತಿಳಿಯುತ್ತಿದ್ದಿತಂತೆ ! ಸಂಸ್ಕೃತ ಕನ್ನಡ ಪಾರ್ಶೀಭಾಷೆಗಳಲ್ಲಿ ಅವರಿಗೆ ಸಂಪೂರ್ಣ ಪಾಂಡಿತ್ಯವಿದ್ದಿತು. ಅವರ ವಾಕ್ಯರಚನೆಯು ಮನೋಹರವೂ ಅರ್ಥಪೂರ್ಣವೂ ಆದ ಅದ್ವಿತೀಯ ಶೈಲಿಯಿಂದ ಕೂಡಿರುತ್ತಿದ್ದಿತಾದರೂ, ವಿಷಯ ವಿವರಣೆಯಲ್ಲಿ ವಿಲಂಬಿಸದೆಯೂ ಸಂದಿಗ್ಧಾರ್ಥವಿಲ್ಲದಂತೆ ಸ್ಪಷ್ಟವಾಗಿಯೂ ಇರುತ್ತಿದ್ದಿತೆಂದು ಹೆಸರಾಗಿದೆ. ತಮ್ಮ ಮತದಲ್ಲೂ ಮತಾಚಾರ್ಯರಲ್ಲೂ ಪೂರ್ಣಶ್ರದ್ಧಾವಂತರಾದ ಈ ಬ್ರಾಹ್ಮಣಶ್ರೇಷ್ಠರು, ಮಹಮ್ಮದೀಯ ಧರ್ಮಾಭಿಮಾನಿಯಾದ ಟಿಪ್ಪೂಸುಲ್ತಾನನ ಬಳಿ ಅವನಿಗೆ ಪ್ರೀತಿಪಾತ್ರರಾಗಿ ಅಧಿಕಾರ ಮಾಡಿದರೆಂಬುದೊಂದು ಮಹದಾಶ್ಚರ್ಯಕರ ವಿಚಾರವು. ಒಂದು ಸಂದರ್ಭದಲ್ಲಿ ಆತನು – 'ನೀವು ಮಹಮ್ಮದೀಯ ಮತಕ್ಕೆ ಸೇರಕೂಡದೇಕೆ ?' ಎಂದು ಕೇಳಿದನಂತೆ ! ಸಮಯಜ್ಞರಾದ ಪೂರ್ಣಯ್ಯನವರು – 'ಪ್ರಭುಚಿತ್ತ, ನಾನು ಎಷ್ಟಾದರೂ ತಮ್ಮ ಸೇವಕ' ಎಂದು ನುಡಿದು ಒಡನೆ ಆ ಸ್ಥಳದಲ್ಲಿ ನಿಲ್ಲದೆ ಕಾರ್ಯಾಂತರವಾಗಿ ಹೊರಟುಹೋದರು. ಈ ವಿಚಾರವು ಸುಲ್ತಾನನ ತಾಯಿಗೆ ತಿಳಿಯಲು, ಆಕೆಯು ಮಗನನ್ನು ಕುರಿತು, ಅವರ ವಿಷಯದಲ್ಲಿ ಬಹು ಜಾಗರೂಕತೆಯಿಂದ ನಡೆಯಬೇಕೆಂದು ಎಚ್ಚರಿಸಿದಳಂತೆ ! ಅವರು ಬಹು ಖಂಡಿತವಾದಿಗಳೇ ಆದರೂ, ಎಂದೂ ನಿಷ್ಠುರವಾಗಿ ಮಾತನಾಡದೆ, ತಮ್ಮ ಪ್ರತ್ಯುತ್ತರವನ್ನು ವಿನೋದದಲ್ಲಿ ಪರ್ಯವಸಾನಗೊಳಿಸುವ ಜಾಣ್ಮೆಯನ್ನು ಗಳಿಸಿದ್ದರು. ಒಂದಾನೊಂದು ಸಂದರ್ಭದಲ್ಲಿ ಅವರು ಟಿಪ್ಪೂಸುಲ್ತಾನನನ್ನು ಕುರಿತು – ನಾನಾಗಲೀ ನೀವಾಗಲೀ ಎಂದೂ ಉತ್ತಮ ರಾಜತಂತ್ರಜ್ಞರಾಗಲಾರೆವು. ನಾನು ಸುಳ್ಳುಹೇಳಿ ಅರಿಯೆ – ನೀವು ನಿಜಹೇಳಿ ಅರಿಯಿರಿ' ಎಂದರು. ಸುಲ್ತಾನನ ತಾಯಿಯು ಆ ಸಂಗತಿಯನ್ನು ಕೇಳಿ ಬಿದ್ದುಬಿದ್ದು ನಕ್ಕಳಂತೆ !

ಮೈಸೂರು ಸಂಸ್ಥಾನಕ್ಕೆ ಪೂರ್ಣಯ್ಯನವರು ಮಾಡಿದ ಮಹೋಪಕಾರವು ಎಂದಿಗೂ ಮರೆಯತಕ್ಕುದಲ್ಲವಾದರೂ, ಅವರ ಆಳ್ವಿಕೆಯ ಕೊನೆಯ ಭಾಗದಲ್ಲಿ ದುರ್ದೈವವಶವಾಗಿ ಅವರಿಗೂ ಮಹಾರಾಜರಿಗೂ ಕೆಲವು ಅಭಿಪ್ರಾಯಭೇದಗಳು ಉಂಟಾದುವು. ಅವಕ್ಕೆ ಕಾರಣವೇನೆಂದು ಎಲ್ಲೂ ಸ್ಪಷ್ಟವಾಗಿ ಹೇಳಲ್ಪಟ್ಟಿಲ್ಲವಾದರೂ,-'ವೃದ್ಧಾಪ್ಯದ ಅಶಕ್ತತೆಯೂ, ಬುದ್ಧಿಶಕ್ತಿಯ ಸ್ಖಾಲಿತ್ಯವೂ ಕಾರಣವಾಗಿ ಅವರ ಆಡಳಿತವು ಸ್ವಲ್ಪಮಟ್ಟಿಗೆ ಬಿಗಿತಪ್ಪುತ್ತಿದೆ'ಯೆಂದ, ರೆಸಿಡೆಂಟ್ ಸಾಹೇಬನು, ಮೇಲಕ್ಕೆ ಬರೆದ ಒಂದು ಪತ್ರದಿಂದ ತಿಳಿದು ಬರುತ್ತಿದೆ. ಆ ಸಮಯವನ್ನು ಸಾಧಿಸಿ, ಅಧಿಕಾರ ಸೂತ್ರಗಳನ್ನು ತಮ್ಮ ಕೈಗೆ ತೆಗೆದುಕೊಳ್ಳಬೇಕೆಂದು ಹಂಬಲಿಸುತ್ತಿದ್ದ ಮಹಾರಾಜರಲ್ಲಿ, ಪೂರ್ಣಯ್ಯನವರಿಗೆ ಆಗದಿದ್ದವರು ಅವರಮೇಲೆ ಹೇಳಿದ ಹೆಚ್ಚು ಕಡಮೆ ಮಾತುಗಳು ಮಹಾರಾಜರ ಮನಸ್ಸನ್ನು ಕೆಡಿಸಿರಬಹುದು. ಈ ಸಂದರ್ಭಗಳನ್ನೆಲ್ಲಾ ಯೋಚಿಸಿದ ಪ್ರಾಜ್ಞರಾದ ಪೂರ್ಣಯ್ಯನವರು, ಮುಂದೆ ಅಧಿಕಾರಮಾಡಲು ಇಷ್ಟವಿಲ್ಲದೆ ತಮ್ಮ ಕೆಲಸಕ್ಕೆ ರಾಜೀನಾಮೆಕೊಟ್ಟು ವಿಶ್ರಾಂತಿಪಡೆದು ಶ್ರೀರಂಗಪಟ್ಟಣಕ್ಕೆ ಪ್ರಯಾಣ ಮಾಡಿ, ಕೊನೆಗಾಲದವರೆಗೂ ಅಲ್ಲೇ ವಾಸಿಸಿದರು. ರಾಜ್ಯದಲ್ಲಿ ನವೀನವಾಗಿ ಹಲವು ಇಲಾಖೆಗಳನ್ನು ಏರ್ಪಡಿಸಿ, ಸಂಸ್ಥಾನವನ್ನು ವ್ಯವಸಾಯ ವಾಣಿಜ್ಯ ಕೈಗಾರಿಕೆ ಮುಂತಾದುವುಗಳಲ್ಲೂ, ಕೆರೆ ಕಟ್ಟೆ ಕಾಲುವೆ, ಅನ್ನಛತ್ರ ಸಾಲುಮರ ತೋಪು ಮುಂತಾದುವುಗಳನ್ನು ಹೆಚ್ಚಿಸಿ ಜನಗಳ ವಿದ್ಯೆ ಬುದ್ಧಿ ಸುಖಶಾಂತತೆಗಳಲ್ಲೂ ಟಿಪ್ಪುವಿನ ಕಾಲದಲ್ಲಿದ್ದುದಕ್ಕಿಂತಲೂ ಶತಾಂಶ ಸುಖಮಯವನ್ನಾಗಿ ಮಾಡಿದರಾದರೂ, ತಾವು ಅಧಿಕಾರಸೂತ್ರಗಳನ್ನು ಒಪ್ಪಿಸಿದಾಗ ಖಜಾನೆಯಲ್ಲಿ ಎರಡು ಕೋಟಿ ರೂಪಾಯಿಗಳಿಗೆ ಮೇಲ್ಪಟ್ಟು ನಗದು ಹಣವನ್ನೂ ಶೇಖರಿಸಿದ್ದರು. ಯಾವುದೊಂದು ಕಾರ್ಯವನ್ನಾದರೂ,-ಇದು ಹೀಗೆ ಅದು ಹಾಗೆ, ಇದು ಸರಿ-ಇದು ತಪ್ಪು ಎಂದು ಆಕ್ಷೇಪಣೆಮಾಡುವುದು ಬಹು ಸುಲಭ. ಆದರೆ ಆಯಾ ಸಂದರ್ಭಗಳಲ್ಲಿ ಆಯಾ ಸ್ಥಾನಗಳಲ್ಲಿದ್ದು ಕೆಲಸಮಾಡಿದವನಿಗೆ ಮಾತ್ರವೇ ಆಯಾ ಕೆಲಸಗಳಲ್ಲಿರುವ ಕಷ್ಟಸುಖಗಳೇನೆಂಬುವ ಪರಿಚಯವಾಗಲು ಸಾಧ್ಯವಿರುವುದು। ಮಿಕ್ಕವರದು ಶುಷ್ಕ ವಾಚಾವೇದಾಂತ ಮಾತ್ರವೇ।

ಮೈಸೂರು ಸಂಸ್ಥಾನದ ಇತಿಹಾಸ ರಚನೆಗೆ ಪೂರ್ಣಯ್ಯನವರು ಮಾಡಿದ ಸಹಾಯವು ಅನ್ಯಾದೃಶವಾದುದು. ಕರ್ನಲ್ ವಿಲ್ಕ್ಸ್ ಸಾಹೇಬನು ಪ್ರಾರ್ಥಿಸಲು, ಪೂರ್ಣಯ್ಯನವರು, ಆಗ ಸಂಸ್ಥಾನದಲ್ಲಿ ಯಾರ ಬಳಿ ಶಾಸನ ಸನ್ನದು ಮೊದಲಾದ ಬರವಣಿಗೆಯ ದಾಖಲೆಗಳಿದ್ದುವೋ ಅಂಥವರನ್ನೂ, ಹಿಂದಿನ ಹಲವು ಸಂಗತಿಗಳನ್ನು ತಿಳಿದಿದ್ದ ಹಳಬರನ್ನೂ ಒಂದೆಡೆ ಸೇರಿಸಿ, ಅವರಿಂದ ಚರಿತ್ರ ಲೇಖನಕ್ಕೆ ಆವಶ್ಯಕವಾದ ಸಕಲ ವಿಷಯಗಳನ್ನೂ ವಿಲ್ಕ್ಸ್ ಸಾಹೇಬನಿಗೆ ಒದಗಿಸಿಕೊಟ್ಟರು. ಒಬ್ಬ ಬಡ ವಿಧವೆಯ ಮಗನಾಗಿದ್ದ ಚಿಕ್ಕ ವಯಸ್ಸಿನ ಬ್ರಾಹ್ಮಣ ಯುವಕನು ಒಂದು ಮಹಾಸಂಸ್ಥಾನದ ಅದೃಷ್ಟ ಸೂತ್ರಗಳನ್ನೇ ಹಿಡಿದು ಆಡಿಸಿ, ಆಚಂದ್ರಾರ್ಕವಾದ ಯಶೋ ವೈಭವದಿಂದ ಚಿರಜೀವಿಯಾದನೆಂದರೆ, ಆ ವ್ಯಕ್ತಿಯಲ್ಲಿ ಸಕಲ ಸದ್ಗುಣಗಳೂ ಅತ್ಯಧಿಕ ಪ್ರಮಾಣದಲ್ಲಿ ಸಮ್ಮೇಳನವಾಗಿರದಿದ್ದರೆ ಸಾಧ್ಯವಾದೀತೆ ?



## ಉಪಸಂಹಾರ

ಮಹಾಮಂತ್ರಿ ಪೂರ್ಣಯ್ಯನವರು ತಮ್ಮ ಅಗಾಧ ಪರಿಶ್ರಮಗಳ ಮೂಲಕ ಸಂಪಾದಿಸಿದ ಯಳಂದೂರು ಜಹಗೀರಿಯ ಮೂಲಕವಾಗಿ, ಅವರ ವಂಶವು ನಮ್ಮ ಈ ದೇಶದಲ್ಲೇ ಇದ್ದು ನಡೆದು ಬರಲು ಅವಕಾಶವಾಯಿತೆಂದು ಸಂತೋಷದಿಂದ ಹೇಳಬೇಕಾಗಿದೆ. ಪೂರ್ಣಯ್ಯನವರು ತಮ್ಮ ಧರ್ಮಪತ್ನಿ ಅಶ್ವತ್ಥಲಕ್ಷ್ಮಮ್ಮನವರೆಂಬ ಸಾಧ್ವೀಮಣಿಯಲ್ಲಿ ಪಡೆದ ಮಕ್ಕಳಲ್ಲಿ *ಆನಂದರಾವ್ (ಅನಂತರಾವ್) ಎಂಬುವರೇ ಜ್ಯೇಷ್ಠರೆಂದು ತಿಳಿಯಬರುತ್ತದೆ. ಈ ಮಹನೀಯರ ವಂಶವು ಈವರೆಗೂ ನಮ್ಮ

---

*See Pages 2825 - 26 Mysore Gazetteer Vol. II, Part IV.

ದೇಶದಲ್ಲಿ ಸುರಕ್ಷಿತವಾಗಿ ನಡೆದುಬಂದು ೧೯೦೧ನೆಯ ಸಂವತ್ಸರದಲ್ಲಿ, ಪೂರ್ಣಯ್ಯನವರಿಂದ ನಾಲ್ಕನೆಯ ತಲೆಯವರಾದ ಸರ್ ಪಿ. ಎನ್. ಕೃಷ್ಣ ಮೂರ್ತಿಗಳವರು ಸಂಸ್ಥಾನದ ದಿವಾನ ಪದವಿಯನ್ನೂ ಪಡೆದರು. ಅವರ ವಂಶೀಕರು, ಈಗಲೂ ಬೆಂಗಳೂರಿನಲ್ಲಿರುವ ಅವರ ಭವ್ಯಸೌಧ ದಲ್ಲಿ ವಾಸಿಸುತ್ತಾ, ಸಕಲರಿಗೂ ತಮ್ಮ ಪೂರ್ವಿಕರಾದ ಅಮಾತ್ಯಶೇ ಖರ ಪೂರ್ಣಯ್ಯನವರ ಜ್ಞಾಪಕ ಕೊಡುತ್ತಲಿದ್ದಾರೆ.

ಇಷ್ಟು ಸಂಗತಿಗಳು ಬರೆಯಲ್ಪಟ್ಟುವಾದರೂ, ಆ ಮಹನೀಯರ ಜೀವಿತ ವಿಚಾರದಲ್ಲಿ ಹೇಳಲ್ಪಡದಿರುವ ನೂರಾರು ಅಜ್ಞಾ ತವಿಚಾರಗಳು ಇನ್ನೂ ಇವೆಯೆಂದು ಹೇಳಲು ನಮಗೆ ಸಂಕೋಚವಿಲ್ಲ. ಈ ಮಹನೀಯರ ಜೀವಿತವಿಚಾರದಲ್ಲ ಇನ್ನೂ ಹೆಚ್ಚು ವಿಷಯಗಳನ್ನು ತಿಳಿದಿರುವವರು ಅವನ್ನು ಗೋಪ್ಯಪಡಿಸದೆ ಗ್ರಂಥರೂಪದಲ್ಲಿ ಬೆಳಕಿಗೆ ತಂದರೆ, ಅವರ ಪ್ರತಿಭಾಪೂರ್ಣಜೀವಿತವು ಅನೇಕರಿಗೆ ಆದರ್ಶವಾ ದೀತು. ಆದರೂ ಈವರೆಗೆ ತಿಳಿದುಬಂದ ವಿಷಯ - ವಿಚಾರಗಳ ಸಹಾ ಯದಿಂದ ಗ್ರಂಥಮಾಲಾ ಮೂಲಕ ಇಷ್ಟುಮಾತ್ರ ಒಬ್ಬ ಕರ್ಣಾಟಕ ಪುತ್ರವರ್ಯನ ಸೇವೆಯನ್ನು ಯಥಾಮತಿ ಮಾಡಲಾಯಿತು. ಈ ಜೀ ವಿತ ಕಥನವು, ಬಡತನದಲ್ಲೇ ಹುಟ್ಟಿ, ಬಡತನದಲ್ಲೇ ಬೆಳೆದು, ಜೀವನ ಯಾತ್ರೆಯನ್ನು ಸಾಗಿಸಬೇಕಾಗಿರುವ ಕನ್ನಡಿಗ ತರುಣರಲ್ಲಿ, ನಮ್ಮ ಚರಿತ್ರನಾಯಕರಲ್ಲಿದ್ದ ಶ್ರದ್ಧೆ, ವಿನಯಸಂಪತ್ತಿ, ಕ್ರಿಯಾಶುದ್ಧಿ, ಕರ್ತವ್ಯ ನಿಷ್ಠೆ, ಧೈರ್ಯ, ಸ್ವಾಮಿಭಕ್ತಿ ಮುಂತಾದ ಸದ್ಗುಣಗಳ ಅನುಕರಣೆಯಿಂದ ತಮ್ಮ ಜೀವಿತವನ್ನೂ ಚರಿತಾರ್ಹವನ್ನಾಗಿ ಮಾಡಿಕೊಳ್ಳಲು ಲೇಶಮಾ ತ್ರವಾದರೂ ಸ್ಫೂರ್ತಿಯನ್ನುಂಟುಮಾಡಿದರೆ ಸಾಕು; 'ಗ್ರಂಥಮಾಲೆ'ಯ ಅಸ್ತಿತ್ವವು ಧನ್ಯವಾದಂತಾಯಿತು. ನಮ್ಮ ಶ್ರಮವು ಅಂತು ಕೃತಕೃತ್ಯ ವಾಗಲು ಭಗವತ್ಕೃಪೆಯಾಗಲಿ !

**ತಥಾಸ್ತು.**

---

ಶ್ರೀರಾಮಸಹಾಯಂ

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

(ಸಚಿತ್ರ ಮಾಸ ಪುಸ್ತಕಾವಳಿ)

**ಮುನ್ನುಡಿ:—**

ನೆಪೋಲಿಯನ್ ಬೋನಪಾರ್ಟ್ ಎಂಬ ಯಾವ ಯೋಧಾಗ್ರೇಸರನ ಸಾಮ್ರಾಜ್ಯಾಕಾಂಕ್ಷೆಯು ಒಂದು ಸಂದರ್ಭದಲ್ಲಿ ಆದ್ಯಂತ ಯೂರೋಪು ಖಂಡವನ್ನೆಲ್ಲ ಗಡಗಡನೆಂದು ನಡುಗಿಸಿ, ರಾಜಕೀಯ ವಾತಾವರಣದಲ್ಲಿ ಒಂದು ಪ್ರಚಂಡ ಕ್ರಾಂತಿಯನ್ನೇ ಎಬ್ಬಿಸಿಬಿಟ್ಟಿತ್ತೋ ಆ ಮಹಾಪುರುಷನ ಜೀವಿತವನ್ನು ಈಗ ನಾವು ಓದಲಿರುವೆವು. ಧನಕನಕಾದಿಗಳೂ, ರಾಜ್ಯಾಧಿಪತ್ಯವೂ ತಮ್ಮ ಭೋಗಸಾಧನ ಸಾಮಗ್ರಿಗಳೆಂದು ತಿಳಿದು ಪ್ರಜಾವರ್ಗದ ಕಷ್ಟಸುಖಗಳನ್ನು ಲೇಶಮಾತ್ರವೂ ಗಮನಿಸದೆ ಮದೋನ್ಮತ್ತರಾಗಿರುತ್ತಿದ್ದ ರಾಜ್ಯಾಧಿಪತಿಗಳೆಂಬ ಆನೆಗಳಿಗೆ ಅಂಕುಶಪ್ರಾಯನಾಗಿ ಯಾವ ವೀರಾಗ್ರಣಿಯು ಶತ್ರುಭೀಕರನಾಗಿದ್ದನೋ ಆ ನೆಪೋಲಿಯನ್ ಬೋನಪಾರ್ಟನ ಜೀವಿತದ ಕೆಲ ಸಂಗತಿಗಳನ್ನು ಈ ಚಿಕ್ಕ ಪುಸ್ತಕದಲ್ಲಿ, ಕೊಡಲೆಳಸಿದ್ದೇವೆ. ಪ್ರಜಾಪಾಲನಾ ಸಾಮರ್ಥ್ಯವು-ಸದ್ಗುಣ ಸನ್ನಡತೆಗಳು, ನಿಸ್ವಾರ್ಥತೆ, ಸ್ವಶಕ್ತಿಪ್ರದರ್ಶನ ಧೈರ್ಯ ಸಾಹಸಗಳು, ರಾಜನೀತಿ ನೈಪುಣ್ಯ ಮುಂತಾದುವುಗಳನ್ನು ಗಳಿಸುವುದರಿಂದಲಲ್ಲದೆ, ಕೇವಲ ಜನ್ಮದಿಂದ ಮಾತ್ರ ಲಭ್ಯವಾಗತಕ್ಕುದಲ್ಲವೆಂಬುದನ್ನು ತನ್ನ ಕೃತಿಗಳಿಂದ ಲೋಕಕ್ಕೆ ತೋರ್ಪಡಿಸಿದ, ವೀರವರ ನೆಪೋಲಿಯನ್ ಬೋನಪಾರ್ಟ್ ಮಹಾಶಯನ ಸಂಕ್ಷಿಪ್ತ ಜೀವನ ಚರಿತ್ರೆಯು ಇಲ್ಲಿ ಯಥಾಯೋಗ್ಯವಾಗಿ ಕೊಡಲ್ಪಡಲಿರುವುದು.

ಅಲೌಕಿಕ ಬುದ್ಧಿ ಕುಶಲತೆ, ಅಪ್ರತಿಮ ಮಾತೃಭಕ್ತಿ, ಸೋದರವಾತ್ಸಲ್ಯ, ಸ್ನೇಹಾನುರಾಗಗಳು, ಕೃತಜ್ಞತೆ, ಗಾಂಭೀರ್ಯ, ರಾಜತಂತ್ರಪ್ರವೀಣತೆ, ಯುದ್ಧ ಕೌಶಲ್ಯ, ಅಸಮಾನ ಧೈರ್ಯ ಸಾಹಸಗಳು, ಸರ್ವತೋಮುಖವಾದ ಪಾಂಡಿತ್ಯ, ವ್ಯಭಿಚಾರ ವಿಮುಖತೆ, ದುರಾಚಾರ ದೂರತ್ವ,

ಸ್ವದೇಶಾಭಿಮಾನ, ದೈವಭಕ್ತಿ, ಪ್ರಭುತ್ವ ನೈಪುಣ್ಯ, ನಿರ್ಭಯತೆ, ಇವು
ಗಳೊಂದಿಗೆ ತಾಳ್ಮೆ, ನಮ್ರತೆ, ದಯಾದಾಕ್ಷಿಣ್ಯಾದಿಗಳು, ದೃಢ ಚಿತ್ತತೆ ಈ
ಮುಂತಾದ ಹಲವು ಸದ್ಗುಣಗಳು ಆತನಲ್ಲಿ ಏಕತ್ರ ಸಮ್ಮಿಳಿತವಾಗಿದ್ದುದ
ರಿಂದ, ನೆಪೋಲಿಯನ್ನನು ತನ್ನ ಕಾಲದ ರಾಜಕಾರ್ಯ ಧುರೀಣರಲ್ಲಿ
ಅಗ್ರೇಸರನೆನ್ನಿಸಿಕೊಂಡನು. ರಾಜಕಾರ್ಯಧುರೀಣನೆನ್ನಿಸಿಕೊಂಡು, ಅಷ್ಟ
ರಲ್ಲೇ ನಿಲ್ಲಲಿಲ್ಲ. ಫ್ರಾನ್ಸ್ ದೇಶಕ್ಕೆ ಚಕ್ರವರ್ತಿಯೂ ಆದನು. ಆ ಕಾಲ
ದಲ್ಲಿ ಆತನ ಧೈರ್ಯ ಸಾಹಸಗಳಿಗೆ ಈಡೇ ಇರಲಿಲ್ಲ. ಹತ್ತು ಮಂದಿ
ರಾಜಾಧಿರಾಜರು ಏಕವಾಗಿ, ಎಂತಹ ಕಾರ್ಯಗಳನ್ನು ಕೈಕೊಂಡು ನಡೆ
ಯಿಸಲು, ಅಸಾಧ್ಯವೆಂದು ಹಿಂಜರಿಯಬಹುದೋ ಅಂತಹ ಕಾರ್ಯಗಳನ್ನು
ಏಕಾಂಗಿಯಾದ ತಾನು ನಿರ್ಭಯವಾಗಿ ಕೈಕೊಂಡು ಸಕಲರೂ ಭಲೆ ಭಲೆ-
ಎಂದು ಹೊಗಳುವಂತೆ ನೆರವೇರಿಸಿಬಿಡುವಂತಹ ಕರ್ತೃತ್ವಶಾಲಿಯು ಆ
ನೆಪೋಲಿಯನ್ನನು! ತಾನು ಕೈಕೊಂಡ ಕಾರ್ಯವು ಸುಲಲಿತವಾಗಿ ನಡೆ
ಯುತ್ತಿರುವವರೆಗೆ ಆತನು ಆ ವಿಚಾರದಲ್ಲಿ ಹೆಚ್ಚು ಲಕ್ಷ್ಯವಿಡದೆ ಇರುತ್ತಿ
ದ್ದನು. ಆದರೆ ಒಂದು ಬಾರಿ ಅದಕ್ಕೇನಾದರೂ ವಿಘ್ನವುಂಟಾಯಿತೆಂದರೆ,
ಮುಂದೆ ಆ ಕೆಲಸವು ಎಂತಹ ದುರ್ಘಟವಾದುದೇ ಆಗಿರಲಿ, ಅದನ್ನು
ಸರ್ವ ಸಾಹಸದಿಂದ ಕೊನೆಗಾಣಿಸದಲ್ಲದೆ ಬಿಡುತ್ತಿರಲಿಲ್ಲ. ಕಷ್ಟಗಳು
ಪ್ರಾಪ್ತವಾದಷ್ಟೂ ಆತನ ಧೈರ್ಯ ಸಾಹಸಗಳೂ, ದೃಢಚಿತ್ತತೆಯೂ,
ಛಲವೂ ದಶಾಧಿಕವಾಗಿ ಹೆಚ್ಚುತ್ತಿದ್ದವು, 'ಅಸಾಧ್ಯವೆಂಬ ಪದವನ್ನೇ
ನಿಘಂಟಿನಿಂದ ಕಿತ್ತುಹಾಕಿಬಿಡಬೇಕು' ಎಂದು ಹೇಳುತ್ತಿದ್ದ ಕಾರ್ಯ
ಶೂರನು, ಆ ನೆಪೋಲಿಯನ್ ಬೋನಪಾರ್ಟ ಮಹಾಶಯನು.

ಹಿಂದೂ ಸಾಮ್ರಾಜ್ಯ ಸಂಸ್ಥಾಪಕನೆನ್ನಿಸಿ, ಗೋಬ್ರಾಹ್ಮಣ ರಕ್ಷಣೆ
ಮಾಡಿ ಆಚಂದ್ರಾರ್ಕ ಕೀರ್ತಿಚಂದ್ರಿಕೆಯನ್ನು ಬೆಳಗಿಸಿದ ಛತ್ರಪತಿ ಶಿವಾಜಿ
ಮಹಾರಾಜನಂತೆಯೇ ಈ ನೆಪೋಲಿಯನ್ನನ ಅಭಿವೃದ್ಧಿಗೂ ಆತನ ತಾಯಿಯ
ಪೋಷಣೆ ಬೋಧನೆಗಳೇ ಮೂಲಕಾರಣವಾದುವೆಂದು ಹೇಳಲ್ಪಟ್ಟಿದೆ. ತನ್ನ
ಸಕಲವಿಧ ಅಭಿವೃದ್ಧಿಗೂ, ಬಾಲ್ಯದಲ್ಲಿ ವಿದ್ಯಾಬುದ್ಧಿಗಳನ್ನು ಕಲಿಸಿ, ಸನ್ಮಾ
ರ್ಗ ದರ್ಶಕಳಾಗಿದ್ದ ಪರದೇವತಾಸ್ವರೂಪಿಣಿ ತನ್ನ ಮಾತೆಯೇ ಕಾರಣವೆಂ

ದು, ಆತನು ಅತ್ಯಂತ ಕೃತಜ್ಞತಾಭಾವದಿಂದ ಸರ್ವದಾ ಸ್ಮರಿಸಿಕೊಳ್ಳು ವನು. ಜನ್ಮದಾತ್ರಿಯಾದ ಮಾತೆಯ ಪವಿತ್ರ ಅಡಿದಾವರೆಗಳಲ್ಲಿ ಅಷ್ಟುಪ್ರ ಮಾಣದ ಭಕ್ತಿ ಗೌರವಗಳು ಯಾವನಿಗೆ ನೆಲೆಗೊಂಡಿರುವುವೋ ಅವನು ಸರ್ವಸಾಮಾನ್ಯನಾಗಿದ್ದರೂ ಚಕ್ರವರ್ತಿ ಪದವಿಯನ್ನೂ ಲೋಕದಲ್ಲಿ ಆಚಂದ್ರಾರ್ಕಕೀರ್ತಿಪ್ರತಿಷ್ಠೆಗಳನ್ನೂ ಗಳಿಸಿಕೊಳ್ಳಲು ಸಾಧ್ಯವೆಂಬುದಕ್ಕೆ ಈತನ ಜೀವಿತವೇ ಉದಾಹರಣೆಯಾಗಬಲ್ಲುದು. ನೆಪೋಲಿಯನನು ಯು ದ್ಧರಂಗದಲ್ಲಿ ಅಪ್ರತಿಮವೀರನಾಗಿ ಶತ್ರುಭೀಕರನೆನ್ನಿಸಿದ್ದರೂ ಸಾಮಾನ್ಯ ಜೀವಿತದಲ್ಲಿ ಸಮಾಧಾನಿಯೂ, ನಿಗರ್ವಿಯೂ, ನಯವಾದ ನಡೆನುಡಿಗಳುಳ್ಳ ವನೂ ದಾಕ್ಷಿಣ್ಯಪರನೂ ಆಗಿದ್ದನು. ಅನ್ಯಾಯ ಮೋಸ ಕಾಪ ಟ್ಯಾದಿಗಳನ್ನು ತನ್ನ ಹೃದಯಮೂಲದಿಂದ ದ್ವೇಷಿಸುತ್ತಿದ್ದುದಲ್ಲದೆ, ಅವು ಗಳನ್ನು ಕಂಡಲ್ಲಿ ಸಮೂಲನಿವಾರಿಸಲು ತನ್ನ ಸಾಮರ್ಥ್ಯವನ್ನೆಲ್ಲ ವಿನಿ ಯೋಗಿಸಿ ಶ್ರಮಿಸಲು ಹಿಂದೆಗೆಯುತ್ತಿರಲಿಲ್ಲ.

ನೆಪೋಲಿಯನನ ಜನನದಿಂದ ಯೂರೋಪುಖಂಡದ ಬಾಹ್ಯರೂಪ ವೇ ಬದಲಾವಣೆ ಹೊಂದಿತು. ಭೋಗಪರಾಯಣರಾಗಿದ್ದ ರಾಜರನೇಕರು ತಿಳಿವಳಿಕೆಗೊಂಡರು, ರಾಜ್ಯಭಾರವೆಂದರೆ ಮನಬಂದಂತೆ ನಡೆಯುವಿಕೆಯಲ್ಲ- ವಕ್ಕಲುಟಿಕೆಯಲ್ಲ, ಎಂದು ತಿಳಿಯುವಂತಹ ವಾತಾವರಣವು ಕಲ್ಪಿಸಲ್ಪ ಟ್ಟಿತು. ಪ್ರಜೆಗಳು ಯಾವರಾಜರ ಆಡಳಿತಕ್ಕೆ ಸಿಕ್ಕು ಅಗಾಧ ಕಷ್ಟಸಂಕ ಟಗಳನ್ನು ಅನುಭವಿಸಿ ಬಳಲಿ ಬೆಂಡಾಗಿದ್ದರೋ, ಅವರು ಆತನ ಬೆಂಬಲ ದಿಂದ ಧೈರ್ಯೋತ್ಸಾಹಗಳನ್ನು ಹೊಂದಿ ನರಕೇಸರಿಗಳಾದರು. ಹೀಗೆ ಲೋಕದ ಅಗಾಧ ಗೌರವ ಪ್ರತಿಷ್ಠೆಗಳಿಗೆ ಪಾತ್ರನಾಗಿ ಮಹಾಪ್ರತಿಭಾಶಾಲಿ ಯಾಗಿ ಬದುಕಿದ ಆತನು, ಕೊನೆಯಲ್ಲಿ ಶತ್ರುಗಳ ತಳತಂತ್ರಕ್ಕೆ ಸಿಕ್ಕುಬಿ ದ್ದು ತನ್ನ ಜನ್ಮಭೂಮಿಯಿಂದ ಬಹುದೂರದಲ್ಲಿದ್ದ ಒಂದು ದ್ವೀಪದಲ್ಲಿ ಸೆರೆ ಯಿದ್ದು ಅಲ್ಲೀ ತನ್ನ ಭೌತಿಕಕಳೇಬರವನ್ನು ತ್ಯಜಿಸಿದನು.

ಲೋಕದಲ್ಲಿ ಅಗಾಧ ಕಾರ್ಯಗಳನ್ನು ಮಾಡುವ ಮಹಾಪುರುಷರು, ಯಾವುದೊಂದು ದೇಶದ ಸ್ವತ್ತಾಗಿ ಉಳಿಯಲಾರರು. ಅವರು ತಮ್ಮ

ಗುಣನಡತೆಗಳು, ಹಲವುಬಗೆಯ ನಿಸ್ವಾರ್ಥಕಾರ್ಯಕಲಾಪಗಳು ಮುಂತಾದುವುಗಳಿಂದ ಲೋಕಕ್ಕೇ ಉದಾಹರಣ ಸ್ವರೂಪರಾಗಿ ನಿಲ್ಲುವರು. ಅವರ ಕೀರ್ತಿಪ್ರಚಾರಣೆಗೆ ದೇಶಕಾಲಗಳ ವಿಭಾಗದಿಂದ ಯಾವ ಪ್ರತಿಬಂಧಕವೂ ಪ್ರಾಪ್ತವಾಗಲಾರದು. ಅವರ ವ್ಯಕ್ತಿತ್ವವು ಯಾವುದೊಂದು ದೇಶಕ್ಕೆ ಮಾತ್ರ ಸಂಬಂಧಿಸಿದುದಲ್ಲ. ಅದು ಆದ್ಯಂತ ವಿಶ್ವಕ್ಕೇ ಸಂಬಂಧಪಟ್ಟುದು. ಆದುದರಿಂದ ಸ್ವಾತಂತ್ರ್ಯಪ್ರಿಯನೂ, ಯುದ್ಧಕಲಾನಿಪುಣನೂ, ಚಕ್ರವರ್ತಿಯೂ ಆದ ನೆಪೋಲಿಯನ್ ಬೋನೋಪಾರ್ಟನ ಈ ಸಂಕ್ಷಿಪ್ತ ಚರಿತ್ರೆಯನ್ನು, ಗ್ರಂಥಮಾಲಾ ವಾಚಕಮಹಾಶಯರಿಗೆ ಯಥಾಮತಿ ಒದಗಿಸಿಕೊಡಬೇಕೆಂದು ಸಂಕಲ್ಪಿಸಿದ್ದಾಯಿತು. ಗ್ರಂಥಮಾಲಾಭಿಮಾನಿಗಳಾದ ವಾಚಕಮಹಾಶಯರು, ಎಂದಿನಂತೆ ಈ ಕುಸುಮವನ್ನು ಸ್ವೀಕರಿಸಿ, ನಮ್ಮ ಭಾಷಾಸೇವಾಕಾರ್ಯವನ್ನು ಪ್ರೋತ್ಸಾಹಿಸಬೇಕೆಂದು ಪ್ರಾರ್ಥಿಸುತ್ತೇವೆ.

ಬೆಂಗಳೂರು<br>ತಾ. ೩೦-೬-೧೯೩೭

ಇತಿ ಸುಜನವಿಧೇಯ.<br>**ಎಂ. ರಾಮರಾವ್**

— ❖ —

ಸುಬೋಧ ಮುದ್ರಣಾಲಯ, ಬೆಂಗಳೂರು ನಗರ.

ಸುಬೋಧ ಕುಸುಮಾಂಜಲಿ ಗ್ರಂಥಮಾಲಾ



ಫ್ರಾನ್ಸ್‌ದೇಶದ ಚಕ್ರವರ್ತಿ

**ನೆಪೋಲಿಯನ್ ಬೋನಪಾರ್ಟ್**

|| ಶ್ರೀರಾಮಸಹಾಯಂ ||

ಫ್ರಾನ್ಸ್‌ದೇಶದ ಚಕ್ರವರ್ತಿ

# ನೆಪೋಲಿಯನ್ ಬೋನಪಾರ್ಟ್

ಅಧ್ಯಾಯ ೧ "ಜನನ-ಬಾಲ್ಯ-ವಿದ್ಯಾಭ್ಯಾಸ"

ಆಫ್ರಿಕಾ ಖಂಡಕ್ಕೆ ಉತ್ತರದ ಮೇರೆಯಾಗಿಯೂ, ಯೂರೋಪು ಖಂಡಕ್ಕೆ ದಕ್ಷಿಣದ ಮೇರೆಯಾಗಿಯೂ ಇರುವ ಮಧ್ಯಧರಾಸಮುದ್ರ (The Mediterranean Sea) ದಲ್ಲಿ, ಫ್ರಾನ್ಸ್‌ದೇಶಕ್ಕೆ ಸುಮಾರು ನೂರು ಮೈಲು ದೂರದಲ್ಲಿ ಕಾರ್ಸಿಕಾ ಎಂಬೊಂದು ದ್ವೀಪವು ಕಂಗೊಳಿಸುತ್ತಿದೆ. ಅದು ಪ್ರಾರಂಭದಿಂದಲೂ ಇಟಲೀದೇಶಕ್ಕೆ ಸೇರಿದ್ದುದರಿಂದ ಆ ದ್ವೀಪವಾಸಿಗಳ ಆಚಾರ ವ್ಯವಹಾರಗಳೆಲ್ಲವೂ ಇಟಾಲಿಯನ್ನರ ದೇಶ ಪದ್ಧತಿಗಳನ್ನೇ ಹೋಲುತ್ತಿದ್ದುವು. ಆದರೆ ಆ ದ್ವೀಪವು ೧೭೬೮ ನೆಯ ಸಂವತ್ಸರದಲ್ಲಿ ಫ್ರಾನ್ಸ್‌ದೇಶೀಯರಿಂದ ಜಯಿಸಲ್ಪಟ್ಟಿತಾದುದರಿಂದ ಕಾರ್ಸಿಕಾದ್ವೀಪವಾಸಿಗಳು ಸಕಲ ವಿಧಗಳಲ್ಲೂ ಬೋರ್ಬನ್ಸ್‌ರ ಆಧಿಪತ್ಯಕ್ಕೇ ಒಳಪಟ್ಟು ನಡೆಯಬೇಕಾಯಿತು.

ಆ ದ್ವೀಪದ ಮುಖ್ಯ ಪಟ್ಟಣವಾದ ಅಜೇಷಿಯೋ ಎಂಬ ನಗರದಲ್ಲಿ, ಹದಿನೆಂಟನೆಯ ಶತಮಾನದ ಮಧ್ಯಭಾಗದಲ್ಲಿ ಛಾರ್ಲ್ಸ್ ಬೋನಪಾರ್ಟ್ ಎಂಬೊಬ್ಬ ತರುಣನು ವಾಸವಾಗಿದ್ದನು. ಆತನ ವಂಶಕ್ಕೆ ಮೂಲಪುರುಷನಾದ ಫ್ರಾನ್ಸಿಸ್ ಬೋನಪಾರ್ಟ್ ಎಂಬಾತನು ಬಹುಕಾಲಗಳ ಹಿಂದೆ ಎಂದರೆ ೧೫೨೯ ನೆಯ ಸಂವತ್ಸರದ ಸುಮಾರಿನಲ್ಲೇ ಇಟಲಿದೇಶದಿಂದ ಬಂದು ಆ ದ್ವೀಪದಲ್ಲಿ ನೆಲೆಗೊಂಡಿದ್ದನು. ದ್ವೀಪದ ಭೂಗುಣವು ಫಲ

ವತ್ತಾಗಿಯೂ, ಹವೆಯು ಆರೋಗ್ಯಕರವಾಗಿಯೂ ಇದ್ದುದರಿಂದ ಫ್ರಾನ್ಸಿಸ್ ಬೋನಪಾರ್ಟಿಯು, ವಂಶಪಾರಂಪರ್ಯವಾಗಿ ಅಲ್ಲೇ ನಿಂತು ಬಿಟ್ಟನು. ಬಹು ಬಡತನಕ್ಕೆ ಒಳಪಟ್ಟು ಆ ದೇಶವನ್ನು ಬಂದುಸೇರಿದ್ದ ಆತನು ಕಾಲಕ್ರಮೇಣ ಉತ್ತಮ ಸ್ಥಿತಿಗೆ ಬಂದು ಗೌರವಸ್ಥನಾಗಿ ಜೀವಿಸ ತೊಡಗಿದನು. ಮುಂದೆ ಆತನ ವಂಶೀಕರು ನ್ಯಾಯವಾದಿ ವೃತ್ತಿಯನ್ನಾಶ್ರಯಿಸಿ, ಹದಿನೇಳು ಹದಿನೆಂಟನೆಯ ಶತಮಾನಗಳಲ್ಲಿ ಗಣ್ಯರಾಗಿ ಜೀವಿಸಿದರು. ಮೇಲೆ ಹೇಳಿದ ಛಾರ್ಲ್ಸ್ ಬೋನಪಾರ್ಟಿಯು ೧೭೬೪ನೆಯ ಸಂವತ್ಸರದಲ್ಲಿ, ಆ ದ್ವೀಪದ ಕನ್ಯೆಯರಲ್ಲೆಲ್ಲ ಅತಿಶಯ ಸುಂದರಿಯಾಗಿದ್ದ ಲೆಟಿಷಿಯಾ ರಮೋಲಿನಿ ಎಂಬೊಬ್ಬ ಕನ್ಯೆಯನ್ನು ವರಿಸಿ ವಿವಾಹವಾದನು. ವಿವಾಹಕಾಲದಲ್ಲಿ ವರನ ವಯಸ್ಸು ಹದಿನೆಂಟು ಲೆಟಿಷಿಯಳು ಹದಿನೈದು ವರ್ಷ ವಯಸ್ಕಳಾಗಿದ್ದಳು. ಛಾರ್ಲ್ಸನ ವಂಶದಂತೆಯೇ ರಾಮೋಲಿನಿಯ ವಂಶವಾದರೂ, ಕಾರ್ಸಿಕಾ ದ್ವೀಪದಲ್ಲೇ ನಾಲ್ಕಾರು ಶತಮಾನಗಳಿಂದ ನೆಲೆಸಿದ್ದು ಬಹು ಹೆಸರುವಾಸಿಯಾಗಿದ್ದುದು. ಫ್ಲೋರೆನ್ಟೈನ್ ವಂಶೋದ್ಭವಳಾದ ಲೆಟಿಷಿಯಳು ಸೌಂದರ್ಯವನ್ನು ಮಾತ್ರವಲ್ಲ- ಸೌಂದರ್ಯಕ್ಕೆ ಇಮ್ಮಡಿಮುಮ್ಮಡಿ ಪ್ರಮಾಣದಿಂದ ಸುಗುಣಸಂಪದವನ್ನೂ ಗಳಿಸಿದ್ದಳು. ಛಾರ್ಲ್ಸ್ ಬೋನಪಾರ್ಟಿಯು ತನ್ನ ವಂಶಕ್ಕೆ ಬಂದಿದ್ದ ನ್ಯಾಯವಾದಿ ವೃತ್ತಿಯಲ್ಲೇ ವಿಶೇಷ ದ್ರವ್ಯಸಂಪಾದನೆ ಮಾಡಿಕೊಂಡು ದಿವ್ಯವಾದೊಂದು ಭವನದಲ್ಲಿ ವಾಸವಾಗಿದ್ದನು.

ಹೀಗಿರುವಲ್ಲಿ ಮುಂದೆ ಕೆಲ ವರ್ಷಗಳೊಳಗಾಗಿಯೇ ಕಾರ್ಸಿಕಾ ದ್ವೀಪವಾಸಿಗಳಿಗೆ ಫ್ರಾನ್ಸ್ ದೇಶೀಯರೊಂದಿಗೆ ಕದನವು ಸಂಭವಿಸಿತು. ಆಗ ದೇಶಾಭಿಮಾನಿಗಳಾದ ಸರ್ವರೂ ತಮ್ಮ ಸ್ವಾತಂತ್ರ್ಯರಕ್ಷಣೆಗಾಗಿ ಶಸ್ತ್ರಧಾರಿಗಳಾಗಿ ಯುದ್ಧಕ್ಕೆ ಸಿದ್ಧರಾದರು. ಛಾರ್ಲ್ಸ್ ಬೋನಪಾರ್ಟಿಯೂ ತನ್ನ ನ್ಯಾಯವಾದಿ ವೃತ್ತಿಯನ್ನು ಬದಿಗಿಟ್ಟು ಶತ್ರುಗಳೊಂದಿಗೆ ಹೋರಾಟಕ್ಕೆ ಹೊರಟನು. ಆ ವೇಳೆಗೆ ಆ ದಂಪತಿಗಳಲ್ಲಿ ಎರಡು ಮಕ್ಕಳು ಹುಟ್ಟಿ ಇಬ್ಬರೂ ಮೃತರಾಗಿಹೋಗಿದ್ದರು. ಮೂರನೆಯ ಜೋಸೆಫ್ ಎಂಬೊಬ್ಬ ಮಗನು ಮಾತ್ರ ಬದುಕಿದ್ದ ಲೆಟಿಷಿಯಳು ನಾಲ್ಕನೆಯ ಗರ್ಭವನ್ನು ಧರಿಸಿದ್ದಳು. ಬಲವಂತರಾದ ಶತ್ರುಗಳ ಬಾಧೆಗೆ ಗುರಿ

ಯಾದ ಆ ದ್ವೀಪವಾಸಿಗಳು ಪಯೋಲಿ ಎಂಬೊಬ್ಬ ನಾಯಕನ ಕೈಕೆಳಗೆ ನಿಂತು ಶತ್ರುಗಳನ್ನೆದುರಿಸುತ್ತಾ, ಅಪಾಯವೇಳೆಯಲ್ಲಿ ಪ್ರಾಣರಕ್ಷಣೆಗಾಗಿ ಓಡಿ, ಗುಡ್ಡಗಾಡುಗಳಲ್ಲಿ ತಲೆತಪ್ಪಿಸಿಕೊಂಡು ಜೀವಿಸುತ್ತಾ ಬಹು ಕಷ್ಟ ಪಡುತ್ತಿದ್ದರು. ಪತಿಯಾದ ಛಾರ್ಲ್ಸ್ ಬೋನಪಾರ್ಟಿಯು ದೇಶಾಭಿಮಾನ ಪ್ರೇರಿತನಾಗಿ ಪಡುತ್ತಿದ್ದ ಕಷ್ಟಗಳಲ್ಲಿ ಲೆಟಿಷಿಯಳೂ ಭಾಗವಹಿಸಿ- ಗರ್ಭಿಣಿಯಾಗಿದ್ದ ತನ್ನ ದೇಹಸ್ಥಿತಿಯನ್ನೂ ಗಮನಿಸದೆ ಕುದುರೆಯನ್ನೇರಿ ಎಲ್ಲಿಗೆಂದರಲ್ಲಿಗೆ ಪ್ರಯಾಣಮಾಡುತ್ತಿದ್ದಳು. ಹೀಗೆ ಸ್ವಲ್ಪಕಾಲ ಯುದ್ಧ ನಡೆದು ಮುಂದೆ ಕೆಲ ದಿನಗಳಲ್ಲೇ ಕೊನೆಗಂಡಿತು. ಫ್ರೆಂಚರ ಪ್ರಬಲ ಸೇನೆಯು ಕಾರ್ಶಿಕಾ ದ್ವೀಪವಾಸಿಗಳನ್ನು ಗೆದ್ದು ಅದನ್ನು ತನ್ನ ಆಳ್ವಿಕೆಗೆ ತೆಗೆದುಕೊಂಡುಬಿಟ್ಟಿತು. ಇದರಿಂದ ಆ ದ್ವೀಪವಾಸಿಗಳಲ್ಲಿದ್ದ ಇಟಾಲಿಯನರೆಲ್ಲರೂ ಫ್ರಾನ್ಸಿನ ಬೋರ್ಬನ್ ಸಿಂಹಾಸನಕ್ಕೆ ಅಡಿಯಾಳುಗಳಾಗಿ ನಡೆಯಬೇಕಾಯಿತು.

ಕಾರ್ಶಿಕಾದ್ವೀಪವು ಸ್ವಾತಂತ್ರ್ಯವನ್ನು ನೀಗಿಕೊಂಡು, ಫ್ರಾನ್ಸಿನ ಆಡಳಿತಕ್ಕೆ ಒಳಪಟ್ಟು ಎರಡುತಿಂಗಳ ಕಾಲವಾಗಿತ್ತು. ಯುದ್ಧಭೂಮಿಯಿಂದ ಹಿಂದಿರುಗಿದ್ದ ಛಾರ್ಲ್ ಬೋನಪಾರ್ಟಿಯು, ಗರ್ಭಿಣಿಯಾದ ತನ್ನ ಪತ್ನಿಯೊಂದಿಗೆ ರಾಜಧಾನಿಯ ತನ್ನ ಮನೆಯಲ್ಲೇ ವಾಸವಾಗಿದ್ದನು. ಒಂದಾನೊಂದು ಪ್ರಾತಃಕಾಲ ಆ ಸಾಧ್ವಿಯು ದೇವಾಲಯಕ್ಕೆ ಹೋಗಿ ಪ್ರಾರ್ಥನೆಯು ಮುಗಿದ ತರುವಾಯ, ಬಹಳಹೊತ್ತು ಅಲ್ಲಿ ನಿಲ್ಲಲು ಸಾಧ್ಯವಿಲ್ಲದೆ, ಮನೆಗೆ ಹಿಂದಿರುಗಿದಳು. ಒಡನೆಯೇ ಪ್ರಸವವೇದನೆಯು ಕಾಣಿಸಿಕೊಂಡಿತು. ಮನೆಯಲ್ಲಿ ಮತ್ತಾರೂ ಇಲ್ಲದಿರಲು, ತಾನೇ ಒಂದು ಮಂಚದಮೇಲೆ ಮಲಗಿ, ಯುದ್ಧಗಳಿಂದಲೂ, ಯೋಧಾಗ್ರೇಸರರ ಚಿತ್ರಗಳಿಂದಲೂ ಚಿತ್ರಿತವಾಗಿದ್ದ ಒಂದು ಪುರಾತನವಾದ ದುಪ್ಪಟ್ಟಿಯನ್ನು ಹೊದ್ದುಕೊಂಡು ಮಲಗಿ ಪ್ರಸವವೇದನೆಯನ್ನು ಅನುಭವಿಸುತ್ತಿದ್ದಳು. ಮುಂದೆ ಸ್ವಲ್ಪಹೊತ್ತಿನಲ್ಲೇ ಸುಖಪ್ರಸವವಾಯಿತು. ಅಂದು ೧೭೬೯ನೆಯ ಆಗಸ್ಟ್ ೧೫ನೆಯ ತಾರೀಖು. ಲೆಟಿಷಿಯಳ ಗರ್ಭಸಂಭೂತನಾದ ಈ ನಾಲ್ಕನೆಯ ಕುವರನೇ ಸುಪ್ರಸಿದ್ಧ ಚಕ್ರವರ್ತಿಯಾದ ನೆಪೋಲಿಯನ್ ಬೋನಪಾರ್ಟ್ ಮಹಾಶಯನು. ಆಗ್ಗೆ ಎರಡುತಿಂಗಳಿಗೆ ಮುಂಚೆ ಜನಿಸಿದ್ದರೆ,

ನೆಪೋಲಿಯನ್ನನು ಫ್ರೆಂಚಿನವನಾಗಿರದೆ ಇಟಾಲಿಯನ್ನನಾಗಿರುತ್ತಿದ್ದನು. ಅನುಕೂಲ ದಾಂಪತ್ಯದಿಂದ ಪರಸ್ಪರ ಪ್ರೀತಿಪಾತ್ರರಾಗಿದ್ದ ಆ ದಂಪತಿಗಳಲ್ಲಿ ಈ ನೆಪೋಲಿಯನ್ನನ ತರುವಾಯ ಮತ್ತೆ ಒಂಬತ್ತುಮಂದಿ ಮಕ್ಕಳಾದರು. ಅವರು ಮಕ್ಕಳುಮರಿಗಳೊಂದಿಗೆ ಹೀಗೆ ಕೆಲಕಾಲ ಸುಖಸಂತೋಷಗಳಿಂದ ಕಾಲಯಾಪನೆಮಾಡಿಕೊಂಡಿದ್ದರು.

ಆದರೆ ಕಾಲವು ಒಂದೇಸಮನಾಗಿ ಸುಖಮಯವಾಗಿದ್ದೀತೇ? ಇರಲಾರದಷ್ಟೆ! ಸಂತೋಷಸರಧಿಯಲ್ಲಿ ತೇಲಾಡುತ್ತಿದ್ದ ಲಿಟಿಷಿಯಳ ಸಂಸಾರವೆಂಬ ಹಡಗು ಬಿರುಗಾಳಿಗೆ ಸಿಕ್ಕು ಹೊಯ್ದಾಡತೊಡಗಿತು. ಛಾರ್ಲ್ಸ್ ಬೋನಪಾರ್ಟನು ಮೃತನಾಗಿ ಸಂಸಾರಭಾರವೆಲ್ಲ ಸಂಪೂರ್ಣವಾಗಿ ಲಿಟಿಷಿಯಳ ಮೇಲೆಯೇ ಬಿತ್ತು. ದುರ್ದೈವವಶವಾಗಿ ವೈಧವ್ಯದುಃಖವನ್ನು ಹೊಂದಿದ ಸಾಧ್ವಿಯು, ಬುದ್ಧಿಶಾಲಿನಿಯಾದುದರಿಂದ ಧೈರ್ಯಗೆಡದೆ ಎಂಟುಮಂದಿ ಚಿಕ್ಕಚಿಕ್ಕ ಮಕ್ಕಳ ಪೋಷಣೆಯಲ್ಲೂ ಆಸಕ್ತಳಾಗಿ ಪತಿವಿಯೋಗದುಃಖವನ್ನು ಮರೆಯಲೆತ್ನಿಸುತ್ತಿದ್ದಳು. ಆಕೆಯ ಉದರದಲ್ಲಿ ಜನಿಸಿದ ಹದಿಮೂರುಮಂದಿ ಮಕ್ಕಳಲ್ಲಿ, ಐವರು ಮೃತರಾಗಿ, ಪತಿಯು ಗತಿಸಿದವೇಳೆಯಲ್ಲಿ ಇನ್ನು ಎಂಟುಮಂದಿ ಮಾತ್ರ ಜೀವಂತರಾಗಿದ್ದರು. ಜೋಸೆಫ್, ನೆಪೋಲಿಯನ್, ಲೂಸಿಯನ್, ಲೂಯಿ, ಜೆರೋಮಿ ಎಂಬೀ ಐದುಮಂದಿ ಗಂಡುಮಕ್ಕಳು, ಎಲಿಜ, ಪಾಲಿನ್, ಕರೋಲಿಯನ್ ಎಂಬೀ ಮೂವರು ಹೆಣ್ಣುಮಕ್ಕಳು. ತಂದೆಯು ಚಿಕ್ಕತನದಲ್ಲೇ ಮೃತನಾದರೂ, ಅವರೆಲ್ಲರೂ ಸದ್ಗುಣಸಂಪನ್ನಳಾದ ತಾಯಿಯ ಪೋಷಣೆಗೆ ಒಳಪಟ್ಟು, ಆಕೆಯ ಮಾತಿಗೆ ಎದುರಾಡದೆ, ವಿನಯ ವಿಧೇಯತೆಗಳಿಂದ ನಡೆದು ಆಕೆಗೆ ಸಂತೋಷಪ್ರದರಾಗಿದ್ದರು.

ಈ ಎಲ್ಲರಲ್ಲಿ ಮುಖ್ಯವಾಗಿ ನೆಪೋಲಿಯನನು, ತನ್ನ ತಾಯಿಯ ವಿಷಯದಲ್ಲಿ ಅಧಿಕ ಗೌರವ, ಭಕ್ತಿ ವಿಶ್ವಾಸಗಳನ್ನಿಟ್ಟು ನಡೆದುಕೊಳ್ಳುತ್ತಿದ್ದನು. ತನ್ನ ಪ್ರೌಢಾವಸ್ಥೆಯಲ್ಲಿ ತನಗೆ ಲಭಿಸಿದ ಗೌರವಕ್ಕೆ ಚಿಕ್ಕಂದಿನಲ್ಲಿ ತನ್ನ ತಾಯಿಯು ಕಲಿಸಿದ ದೇಹಪರಿಶ್ರಮ ವಿದ್ಯಾಬುದ್ಧಿಗಳೇ ಮೂಲಾಧಾರವೆಂದೂ, ಆ ಕಾರಣದಿಂದ ತಾನು ಆಕೆಗೆ ಸರ್ವಕಾಲ ಸರ್ವಾವಸ್ಥೆಗಳಲ್ಲೂ ಋಣಿಯಾಗಿದ್ದೇನೆಂದೂ ಹೇಳುತ್ತಿದ್ದನು. ಮಕ್ಕಳಲ್ಲಿ ಬೆಳೆದು

ಬರುವ ಸುಗುಣ ದುರ್ಗುಣಗಳಿಗೂ, ಪ್ರಪಂಚಯಾತ್ರೆಯಲ್ಲಿ ಅವರು ಪಡುವ ಕಷ್ಟಸುಖಗಳಿಗೂ ಮೂಲಕಾರಣವು ತಾಯಿಯೇ ಎಂಬುದು ಆತನ ನಿಶ್ಚಯಾಭಿಪ್ರಾಯವಾಗಿದ್ದಿತು. ಆದುದರಿಂದಲೇ, ತನಗೆ ಫ್ರಾನ್ಸ್‌ದೇಶದ ಸರ್ವಾಧಿಕಾರವು ಪ್ರಾಪ್ತವಾದೊಡನೆಯೇ, ದೇಶದಲ್ಲಿ ಸುಗುಣಮಂಡಿತರಾದ ಮಾತೆಯರ ಸಂಖ್ಯೆಯನ್ನು ಹೆಚ್ಚಿಸುವುದೇ ದೇಶಾಭಿವೃದ್ಧಿಗೆ ಪ್ರಥಮೋಪಾಯವೆಂದು ಯೋಚಿಸಿ, ಸ್ತ್ರೀವಿದ್ಯಾಭ್ಯಾಸವು ಅಧಿಕವಾಗಿ ವ್ಯಾಪಿಸಲು ತಕ್ಕ ಏರ್ಪಾಡುಗಳನ್ನೆಲ್ಲಾ ಮಾಡಿದನು. ಮತ್ತು ತಾನು ತನ್ನ ತಾಯಿಯಿಂದ ಪಡೆದ ಮಹೋಪಕಾರವನ್ನು ಸ್ಮರಿಸಿಕೊಂಡು ಅತ್ಯಂತ ಕೃತಜ್ಞತೆಯಿಂದ,ಆಕೆಗೆ ದ್ರವ್ಯದ ಮೂಲಕವಾಗಿ ಪ್ರಾಪ್ತವಾಗಬಹುದಾದ ಸಕಲವಿಧ ಅನುಕೂಲತೆಗಳನ್ನೂ ಲೇಶಮಾತ್ರವೂ ಲೋಪಗೊಳಿಸದೆ ಒದಗಿಸಿ ಕೊಟ್ಟನು.

ಬಾಲ್ಯದಲ್ಲಿ ನೆಪೋಲಿಯನನು ತನ್ನ ಸೋದರ ಸೋದರಿಯರೊಂದಿಗೆ ವಾಸಮಾಡಿಕೊಂಡಿದ್ದ ಮನೆಯು ಇಂದಿಗೂ ಹಾಳುಬಿದ್ದು ಕಾರ್ಸಿಕಾ ದ್ವೀಪದಲ್ಲಿದೆ. ಅವರು ಆಡಿಕೊಂಡಿದ್ದ ಆಟದ ಬಯಲು, ಅವರ ವಿಹಾರಸ್ಥಳಗಳಾಗಿದ್ದ ತೋಟ ಕಾಲುವೆ ವ್ಯೆದಾನ ಮುಂತಾದುವುಗಳೆಲ್ಲವೂ ಕಾಡುಗಿಡ ಗಂಟೆಗಳಿಂದ ತುಂಬಿ, ಈಗಲೂ ಪ್ರಯಾಣಿಕರಿಗೆ ತೋರಿಸಲ್ಪಡುತ್ತಿವೆ. ಅವರ ಮನೆಯಿದ್ದ ಸ್ಥಳಕ್ಕೆ ಸ್ವಲ್ಪ ದೂರದಲ್ಲೇ ಒಂದು ದೊಡ್ಡ ಬಂಡೆಯೂ ಅದರ ಮಧ್ಯದಲ್ಲಿ ಗು ಹೆ ಯ ಂ ತ ಹ ಒಂದು ಪ್ರದೇಶವೂ ಇವೆ. ನೆಪೋಲಿಯನ್ನನು ತನ್ನ ಚಿಕ್ಕವಯಸ್ಸಿನಲ್ಲಿ ಏಕಾಂಗಿಯಾಗಿ ಈ ಸ್ಥಳಕ್ಕೆ ಬಂದು ಕುಳಿತು ಅಲ್ಲಿ ಆಲೋಚನಾಮಗ್ನನಾಗಿರುತ್ತಿದ್ದನಂತೆ! ಈಗಲೂ ಅದನ್ನು 'ನೆಪೋಲಿಯನ್ ಗುಹೆ' ಎಂದು ತೋರಿಸುವ ಪದ್ಧತಿಯುಂಟು. ಅವನ ಗೆಳೆಯರೂ ಸೋದರ ಸೋದರಿಯರೂ ಸಮೀಪದ ಬಯಲಿನಲ್ಲಿ ಆಡಿಕೊಂಡಿರುತ್ತಿರಲು, ಈ ಅಪೂರ್ವ ಬಾಲಕನು ಏಕಾಂಗಿಯಾಗಿ ತನ್ನ ಆ ಗುಹೆಗೆ ನಡೆದು ಅಲ್ಲಿ ವಿಚಾರಮಗ್ನನಾಗುತ್ತಿದ್ದನೆಂದು ಹೇಳಲ್ಪಟ್ಟಿದೆ. ಅಲ್ಲಿ ಅಂಗತನಾಗಿ ಮಲಗಿ, ಒಂದು ಕಡೆ ವಿಶಾಲವಾದ ಅಂತರಿಕ್ಷ ಪ್ರದೇಶವನ್ನೂ, ಮತ್ತೊಂದೆಡೆಯಲ್ಲಿ ಮಧ್ಯಧರಾಸಮುದ್ರದ ಅಗಾಧ ಜಲರಾಶಿಯನ್ನೂ ನಟ್ಟದೃಷ್ಟಿಯಿಂದ ಗಂಟೆ ಗಂಟೆಗಳವರೆಗೆ ನೋಡುತ್ತಾ ಇದ್ದುಬಿಡುವನು.

ನೆಪೋಲಿಯನ್ನನು ಚಿಕ್ಕಂದಿನಿಂದಲೂ ಸ್ವಾಭಾವಿಕವಾಗಿ ಸರಸಿಯಲ್ಲ. ಮೌನಿಯೂ, ಮಿತಭಾಷಿಯೂ, ಸದಾ ವ್ಯಾಕುಲಚಿತ್ತನೂ, ಮುಂಗೋಪಿಯೂ ಆಗಿದ್ದನು. ಅವನ ಅಭಿಪ್ರಾಯಕ್ಕೆ ವಿರುದ್ಧವಾಗಿ ಯಾರಾದರೂ ಮಾತನಾಡಿದರೆ, ಅವನ್ನು ಎಂದಿಗೂ ಸಹಿಸದೆ ಕೋಪಗೊಳ್ಳುವನು. ಜೊತೆಯುವರೊಂದಿಗೆ ಆಟಪಾಟಗಳಲ್ಲಿ ಬೆರೆಯದೆ ಸದಾ ಏಕಾಂಗಿಯಾಗಿರಲು ಇಚ್ಛೆಗೊಳ್ಳುವನು. ಅವನಲ್ಲಿ ಸಂತೋಷ ಉತ್ಸಾಹಗಳೆಂಬುವೇ ಕಂಡುಬಾರವು. ಅವನ ವಿದ್ಯೆಗಾಗಿಯೂ ಬುದ್ಧಿಸಾಮರ್ಥ್ಯಕ್ಕಾಗಿಯೂ ಅವನ ಸೋದರ ಸೋದರಿಯರೆಲ್ಲರೂ ಅವನನ್ನು ಗೌರವಿಸುತ್ತಿದ್ದರಲ್ಲದೆ, ಪ್ರೇಮಾಭಿಮಾನಗಳಿಂದಲಲ್ಲ. ಅವನ ಮುಂಗೋಪ ಸ್ವಭಾವಕ್ಕೆ ಹೆದರಿ, ಅಣ್ಣನಾದ ಸರಳಸ್ವಭಾವದ ಜೋಸೆಫನು ಅವನ ಇಷ್ಟಾನುಸಾರವಾಗಿಯೇ ನಡೆಯುತ್ತಿದ್ದನು.

ಛಾರ್ಲ್ಸ್ ಬೋನಪಾರ್ಟನು ಜೀವಂತನಾಗಿದ್ದಾಗ, ತನ್ನ ಇತರ ಎಲ್ಲಾ ಮಕ್ಕಳಿಗಿಂತಲೂ, ಅತಿಶಯ ಸೂಕ್ಷ್ಮಮತಿಯೂ, ತೇಜಸ್ವಿಯೂ ಆದ ನೆಪೋಲಿಯನ್ನನನ್ನು ಕಂಡು ಮಹದಾನಂದದಿಂದ ಅವನನ್ನು ತನ್ನ ತೊಡೆಯಮೇಲೆ ಕುಳ್ಳಿರಿಸಿಕೊಂಡು, ಕಾರ್ಸಿಕಾದ್ವೀಪದ ಸ್ವಾತಂತ್ರ್ಯಕಾಂಕ್ಷಿಗಳಾದ ದೇಶಾಭಿಮಾನಿಗಳಿಗೂ, ಫ್ರಾನ್ಸ್‌ದೇಶೀಯರಿಗೂ ಜರುಗಿದ ಯುದ್ಧದ ಭಯಂಕರ ಕಥೆಯನ್ನೆಲ್ಲ ವಿವರಿಸುವನು. ತಾಯಿಯೂ ಆ ಯುದ್ಧಕಾಲದಲ್ಲಿ ತಾನು ಹೇಗೆ ಒಂದು ಸ್ಥಳದಲ್ಲಿ ನಿಲ್ಲಲವಕಾಶವಿಲ್ಲದಂತೆ ತರುಮಲ್ಯಟ್ಟು ಅನ್ನ ನೀರುಗಳಿಲ್ಲದೆ ಕುದುರೆಯಮೇಲೆ ಪ್ರಯಾಣವಾಗಿ ತಿರುಗುತ್ತಿದ್ದಳೆಂಬುದನ್ನೂ ವಿವರಿಸಿ ಹೇಳುವಳು. ಆ ಸಂಗತಿಗಳನ್ನೆಲ್ಲಾ ಕೇಳಿ, ತನ್ನ ಮಾತಾಪಿತೃಗಳಿಗೂ ಸ್ವದೇಶೀಯರಿಗೂ ಪ್ರಾಪ್ತವಾದ ಕಷ್ಟಕ್ಕಾಗಿ ಮೃದು ಹೃದಯವಾದ ಆ ಬಾಲಕನು ಕಣ್ಣೀರುಸುರಿಸಿ, ಫ್ರಾನ್ಸ್‌ದೇಶೀಯರ ದುಷ್ಟ ಸ್ವಭಾವವನ್ನು ಮನಸ್ಸಿನಲ್ಲೇ ನಿಂದಿಸುವನು. ತಮ್ಮವರು ಶತ್ರುಸೈನ್ಯವನ್ನು ಓಡಿಸಿದ ಸಂದರ್ಭದ ವರ್ಣನೆಯು ಬಂದಾಗ ಆ ಚಿಕ್ಕ ಬಾಲಕನಿಗೆ ಉಂಟಾಗುತ್ತಿದ್ದ ಸಂತೋಷಕ್ಕೆ ಮಿತಿಯಿಲ್ಲ. ಕೋಲಾಹಲದಿಂದ ಕೇಕೆಹಾಕಿ ನಗುತ್ತಾ, ತತ್ಕಾಲದಲ್ಲಿ ತಾನು ಅವರನ್ನು ಜಯಿಸಿ ಓಡಿಸುತ್ತಿರುವನೋ ಎಂಬಂತೆ ಅನುಭವಗೊಳ್ಳುವನು. ಚಿಕ್ಕಂದಿನಲ್ಲಿ ಅವನ

ಬಳಿಯಲ್ಲಿ ಆಟಕ್ಕಾಗಿ ೩೦ ಪೌಂಡು ತೂಕದ ಒಂದು ಸಣ್ಣ ಹಿತ್ತಾಳೆಯ ಫಿರಂಗಿ ಇತ್ತಂತೆ! ಅದು ಈಗಲೂ ಕಾರ್ಶಿಕಾದ್ವೀಪದಲ್ಲಿ ಆತನ ಜ್ಞಾಪಕಾರ್ಥವಾಗಿ ಇಡಲ್ಪಟ್ಟಿದೆ. ಅದರಲ್ಲಿ ಗುಂಡುಹಾಕಿ ಹೊಡೆಯುತ್ತಿದ್ದಾಗ ಆಗುತ್ತಿದ್ದ ದೊಡ್ಡ ಧ್ವನಿಯು ಆ ಶೂರ ಬಾಲಕನ ಕಿವಿಗಳಿಗೆ ಮಧುರವಾದ ಸಂಗೀತದ ಧ್ವನಿಯಂತೆ ಪರಮಾನಂದವನ್ನುಂಟುಮಾಡುವುದು. ಅದರ ಸಹಾಯದಿಂದ ತಾನು, ತಮ್ಮ ದೇಶೀಯರಿಗೆ ವಿರೋಧಿಗಳಾಗಿ ಅವರ ಸ್ವಾತಂತ್ರ್ಯಾಪಹಾರಮಾಡಿದ ಆ ಶತ್ರುಗಳನ್ನು ಓಡಿಸಿಬಿಡುತ್ತೇನೆಂದು ಆಗಾಗ ಅಟ್ಟಹಾಸದಿಂದ ಹೇಳಿಕೊಳ್ಳುವನು.

ನೆಪೋಲಿಯನ್ನನು ಐದಾರು ಸಂವತ್ಸರಗಳ ವಯಸ್ಕನಾಗಿದ್ದಾಗಲೇ ಅವನ ವಿದ್ಯಾಭ್ಯಾಸವು ಪ್ರಾರಂಭಿಸಲ್ಪಟ್ಟಿತು. ಅಷ್ಟು ಚಿಕ್ಕ ವಯಸ್ಸಿನಲ್ಲೂ ಸಹ ಆ ಬಾಲಕನು ಸೋಮಾರಿತನವೆಂಬುದಿಲ್ಲದೆ, ತನ್ನ ಜೊತೆಯವರನ್ನೆಲ್ಲ ಹಿಂದೆ ಹಾಕಿ ಉಪಾಧ್ಯಾಯರಿಗೆ ಪರಮಾಶ್ಚರ್ಯವುಂಟಾಗುವಂತೆ ಅಭ್ಯಾಸಮಾಡಿ, ಕೊಟ್ಟ ಪಾಠಗಳನ್ನು ಲೇಶಮಾತ್ರವೂ ತಪ್ಪಿಲ್ಲದೆ ಒಪ್ಪಿಸುವನು. ಕಾರ್ಶಿಕಾದ್ವೀಪವು ಫ್ರೆಂಚರ ಸ್ವಾಧೀನಕ್ಕೆ ಬಂದಮೇಲೆ ಅದರ ಪಾಲನೆಗಾಗಿ ಕೌಂಟ್ ಮಾರ್ಬೋೞ್ ಎಂಬೊಬ್ಬ ದೊಡ್ಡ ಮನುಷ್ಯನನ್ನು ರಾಜ್ಯಾಂಗದವರು ಕಳುಹಿಸಿದರು. ಆತನು, ಚಿಕ್ಕ ವಯಸ್ಸಿನ ನೆಪೋಲಿಯನ್ನನ ಬುದ್ಧಿಕುಶಲತೆ, ಗಾಂಭೀರ್ಯ, ಪ್ರೌಢ ವಿಚಾರಗಳನ್ನೂ ಕುರಿತು ವಿಮರ್ಶಿಸುತ್ತಿದ್ದ ಅವನ ಆಲೋಚನೆಗಳು, ಆಕ್ಷೇಪಣೆ ಸಮಾಧಾನಗಳೊಂದಿಗೆ ಸಮಂಜಸವೆನ್ನಿಸುತ್ತಿದ್ದ ಅವನ ಸಂಭಾಷಣೆ ಮುಂತಾದುವುಗಳನ್ನೆಲ್ಲ ಗಮನಿಸಿ, ಅವನು ಮುಂದೆ ಅಸಾಮಾನ್ಯ ಪ್ರತಿಷ್ಠಾವಂತನಾಗುವನೆಂದು ತಿಳಿದು ಅಂತಹ ಮಗನನ್ನು ಹೆತ್ತ ಮಾತಾಪಿತೃಗಳನ್ನು ಹೃತ್ಪೂರ್ವಕ ಅಭಿನಂದಿಸುತ್ತಿದ್ದನು.

ಕೌಂಟ್ ಮಾರ್ಬೋೞ್ ಅಧಿಕಾರಿಗೆ ನೆಪೋಲಿಯನ್ನನ ಸಹಜ ಯೋಗ್ಯತೆಯು ತಿಳಿದೊಡನೆಯೇ, ಆ ಬಾಲಕನನ್ನು ಯೋಗ್ಯ ಸ್ಥಳದಲ್ಲಿಟ್ಟು, ವಿದ್ಯಾಭ್ಯಾಸ ಮಾಡಿಸಬೇಕೆಂಬ ಯೋಚನೆ ಹುಟ್ಟಿತು. ಆ ಯೋಚನೆಯನ್ನನುಸರಿಸಿ, ಬಾಲಕನು ತನ್ನ ಹತ್ತನೆಯ ವರ್ಷದಲ್ಲೇ ಆ ಊರಿನ ಪಾಠಶಾಲೆಯ ತನ್ನ ವಿದ್ಯಾಭ್ಯಾಸವನ್ನು ಪೂರೈಸಿ, ಪ್ಯಾರಿಸ್ ನಗರದ ಸಮಿಾ

ಪದಲ್ಲಿದ್ದ ಬ್ರಿಯನ್ನಿ ಎಂಬ ಯುದ್ಧ ಪಾಠಶಾಲೆಗೆ ಕಳುಹಿಸಲ್ಪಟ್ಟನು. ಮಾರ್ಗದಲ್ಲಿ ಇಟಲೀ ಫ್ರಾನ್ಸ್ ದೇಶಗಳ ಮುಖ್ಯ ಮುಖ್ಯ ನಗರಗಳನ್ನು ನೋಡಿಕೊಂಡು ನೆಪೋಲಿಯನನು, ಬ್ರಿಯನ್ನಿಯ ಪಾಠಶಾಲೆಯನ್ನು ಸೇರಿ ವ್ಯಾಸಂಗಕ್ಕೆ ಆರಂಭಿಸಿದನು. ಆ ಪಾಠಶಾಲೆಯಲ್ಲಿದ್ದ ಫ್ರಾನ್ಸ್ ದೇಶದ ಧನಾಢ್ಯರಾದ ರಾಜಪುತ್ರರು ಕಾರ್ಸಿಕಾ ದ್ವೀಪದ ನ್ಯಾಯವಾದಿಯ ಮಗನಾದ ಆ ಬಾಲಕನನ್ನು ಕೇವಲ ಅವಹೇಳನ ದೃಷ್ಟಿಯಿಂದ ಕಾಣುತ್ತಿದ್ದರು. ಆದರೆ ಅವನು ಪುರಹಂಕಾರಿಗಳಾದ ಆ ಬಾಲಕರೊಂದಿಗೆ ಸೇರದೆ ತನ್ನ ಕಾಲವನ್ನೆಲ್ಲ ಪಾಠಪ್ರವಚನಾದಿಗಳಲ್ಲೂ, ಏಕಾಂತವಾದ ಆಲೋಚನೆಯಲ್ಲೂ ಕಳೆಯುತ್ತಿದ್ದನು. ಅವನ ಸಾಮಾನ್ಯವಾದ ಉಡಿಗೆ ತೊಡಿಗೆಗಳು, ಯಾರೊಂದಿಗೂ ಬೆರೆಯದ ಏಕಾಂತವಾಸ, ಮುನಬಿಚ್ಚಿ ಮಾತನಾಡದ ಮೌನ ಸ್ವಭಾವ ಮುಂತಾದುವು ಅವನ ಸಹವಾಸಿಗಳಾದ ಬಾಲಕರಿಗೆ ಸರಿಬೀಳದಿದ್ದರೂ, ಅವನ ಮನೋಬಲವೂ, ಗಣಿತಶಾಸ್ತ್ರ, ದೇಶಚರಿತ್ರೆ, ಪ್ರಭುತ್ವ ಪದ್ಧತಿ ಮುಂತಾದುವುಗಳಲ್ಲಿ ಆತನಿಗಿದ್ದ ಪರಿಶ್ರಮವೂ, ಪಾಂಡಿತ್ಯವೂ ಎಲ್ಲರನ್ನೂ ತಲೆ ತಗ್ಗಿಸುವಂತೆ ಮಾಡುತ್ತಿದ್ದುವು. ಮಿಕ್ಕ ಬಾಲಕರು ವಿವಿಧ ಆಟಪಾಟ ವಿನೋದಗಳಲ್ಲಿ ಕಾಲಯಾಪನೆ ಮಾಡುತ್ತಿದ್ದಾಗ ನೆಪೋಲಿಯನನು ಒಂದು ಕ್ಷಣ ಕಾಲವನ್ನೂ ವ್ಯರ್ಥಮಾಡದೆ, ಸಕಲ ಪಾಠಗಳಲ್ಲೂ ಪ್ರೌಢನಾಗಿ ಆ ಪಾಠಶಾಲೆಗೇ ಭೂಷಣಪ್ರಾಯನಾದನು. 'ಪ್ಲೂಟಾರ್ಕ್' ಎಂಬ ಗ್ರಂಥಕಾರನು ರಚಿಸಿದ ಮಹಾಪುರುಷರ ಜೀವನ ಚರಿತ್ರೆಗಳನ್ನು ಓದುವುದರಲ್ಲಿ ಆತನಿಗೆ ಅಪರಿಮಿತ ಉತ್ಸಾಹವಿತ್ತು. ಅವುಗಳನ್ನು ಓದುವಾಗಲೆಲ್ಲ, ಆ ಮಹಾಪುರುಷರ ಜೀವಿತ ಕಳೆಯನ್ನು ತನ್ನಲ್ಲಿ ಆರೋಪಿಸಿಕೊಂಡು ಸಂತಸಗೊಳ್ಳುವನು. ಗ್ರೀಸ್ ರೋಮ್ ಮುಂತಾದ ಚಕ್ರಾಧಿಪತ್ಯಗಳ ಚರಿತ್ರೆಗಳೂ ಸಾಮ್ರಾಜ್ಯಗಳ ಉತ್ಪತ್ತಿಲಯಗಳ ವಿಷಯಕವಾದ ವಿಚಾರಗಳೂ, ವಿವಿಧ ದೇಶಕಾಲಗಳಲ್ಲಿ ಧೈರ್ಯ ಸಾಹಸಾದಿ ಗುಣಗಳನ್ನು ಪ್ರಕಟಿಸಿದ ಮಹನೀಯರ ಚರಿತ್ರಾಂಶಗಳೂ ಸದಾ ಆತನ ಮನಸ್ಸಮುದ್ರದಲ್ಲಿ ಅಲೆಗಳಂತೆ ಚಲಿಸುತ್ತಿರುವುವು. ಆ ಪಾಠಶಾಲಾ ಬಾಲಕರಲ್ಲಿ ಒಬ್ಬೊಬ್ಬನಿಗೂ ಪಾಠಗಳ ಜೊತೆಯಲ್ಲಿ ಸ್ವಲ್ಪ ಭೂಮಿಯನ್ನೂ ಕೊಟ್ಟು ಅಲ್ಲಿ ವ್ಯವಸಾಯಮಾಡಿಕೊಳ್ಳಲು ಅನುಕೂಲಪಡಿಸಿದ್ದರು. ನೆಪೋ

ಲಿಯನ್ನು ತನ್ನ ಭೂಮಿಗೆ ಸುತ್ತಲೂ ಬೇಲಿಯನ್ನು ಕಟ್ಟಿಕೊಂಡು, ಒಳಗೆ ಗಿಡಗಳನ್ನು ನಟ್ಟು ಎಲ್ಲರ ಜಮೀನಿಗಿಂತಲೂ ಉತ್ಕೃಷ್ಟವಾದುದನ್ನಾಗಿ ಇಟ್ಟುಕೊಂಡನು. ಅದರ ಮಧ್ಯದಲ್ಲೊಂದು ಲತಾಗೃಹವನ್ನು ನಿರ್ಮಿಸಿಕೊಂಡು, ಅದರಲ್ಲಿ ಏಕಾಂತವಾಗಿ ಕುಳಿತು, ಆಲೋಚನಾಮಗ್ನನಾಗಿರುವನು.

ನೆಪೋಲಿಯನ್ ಬೋನಪಾರ್ಟನು, ೧೭೭೯ನೆಯ ಸಂ॥ದಿಂದ ೧೭೮೪ ರವರೆಗೂ ಆ ಪಾಠಶಾಲೆಯಲ್ಲಿದ್ದು ಮಧ್ಯೆ ರಜಾದಿನಗಳಲ್ಲಿ ಮಾತ್ರ ಕಾರ್ಸಿಕಾ ದ್ವೀಪಕ್ಕೆ ತಾಯಿ ಮತ್ತು ಸೋದರ ಸೋದರಿಯರಬಳಿಗೆ ಹೋಗುತ್ತಿದ್ದನು. ಆ ತನ್ನ ಜನ್ಮಭೂಮಿಯಲ್ಲಿ ಆತನಿಗಿದ್ದ ಪ್ರೇಮವು ಅಪರಿಮಿತವಾದುದು. ಅದರಪರ್ವತಗಳು, ಕಣಿವೆಗಳು, ಕೆರೆ ಕಟ್ಟೆ ಕಾಲುವೆಗಳು ಮುಂತಾದ ಪ್ರಾಂತಗಳಲ್ಲೆಲ್ಲಾ ಏಕಾಂಗಿಯಾಗಿ ತಿರುಗಿ ಅವುಗಳ ಸೌಂದರ್ಯಕ್ಕಾಗಿ ತನ್ನಲ್ಲಿತಾನೇ ಹಿಗ್ಗುವನು.

ಬ್ರಿಯನ್ನಿ ಪಾಠಶಾಲೆಯಿಂದ ಪ್ಯಾರಿಸ್ ಪಟ್ಟಣದಲ್ಲಿದ್ದ ಪಾಠಶಾಲೆಗೆ ಕಳುಹಿಸಲ್ಪಟ್ಟಾಗ ನೆಪೋಲಿಯನನು ಕೇವಲ ಹದಿನೈದು ಸಂವತ್ಸರಗಳ ವಯಸ್ಕನು. ಪ್ರತಿವರ್ಷವೂ ಆ ಪಾಠಶಾಲೆಯಿಂದ ಮೂವರು ಮಾತ್ರವೇ ಪ್ಯಾರಿಸ್ ಶಾಲೆಗೆ ಕಳುಹಿಸಲ್ಪಡಲು ಅರ್ಹರೆಂದು ಚುನಾಯಿಸುವ ಪದ್ಧತಿಯಿತ್ತು. ೧೭೮೪ನೆಯ ಸಂ॥ದಲ್ಲಿ ಹಾಗೆ ಚುನಾಯಿತರಾದವರಲ್ಲಿ ನೆಪೋಲಿಯನ್ ಒಬ್ಬನು. ಕೇವಲ ೧೫ ವರ್ಷಗಳ ವಯಸ್ಸಿನಲ್ಲೇ ಅಂತಹ ಪ್ರಶಸ್ತಿಯನ್ನು ಪಡೆದ ಅವನನ್ನು ಕಂಡು ಎಲ್ಲರೂ ಆಶ್ಚರ್ಯಪಡುತ್ತಿದ್ದರು. ಆ ಕಾಲದ ಯುದ್ಧಮಂತ್ರಿಯ 'ರಿಕಾರ್ಡಿ'ನಲ್ಲಿ ಆತನ ವಿಷಯವಾಗಿ ಹೀಗೆಂದು ಬರೆಯಲ್ಪಟ್ಟಿದೆ.

'ಮೊಸಿಯರ್ ಡಿ. ಬೋನಪಾರ್ಟ್. ೧೭೬೯ನೆಯ ಆಗಸ್ಟ್ ೧೫ರಲ್ಲಿ ಜನನ. ಎತ್ತರ ೫ಅ. ೬ ಅಂ. ನಾಲ್ಕನೆಯ ಸಂವತ್ಸರವನ್ನು ಮುಗಿಸಿದ್ದಾನೆ. ಒಳ್ಳೇ ದೃಢಗಾತ್ರನಾಗಿದ್ದಾನೆ. ಆರೋಗ್ಯವು ಉತ್ತಮಸ್ಥಿತಿಯಲ್ಲಿದೆ. ಸಾಧುಗುಣ. ಗೌರವ ಕೃತಜ್ಞತೆಗಳುಳ್ಳವನು. ಅಸಾಧಾರಣವಾದ ಉತ್ತಮ ನಡೆವಳಿಕೆ. ಗಣಿತಶಾಸ್ತ್ರದಲ್ಲಿ ವಿಶೇಷ ಅಭಿಲಾಷೆ. ಇತರ ಸಾಮಾನ್ಯ ವಿಷಯಗಳಲ್ಲೂ, ಲ್ಯಾಟಿನ್‌ಭಾಷೆಯಲ್ಲೂ ಚೆನ್ನಾಗಿ ಪರಿಶ್ರಮ

ವುಂಟು. ಲ್ಯಾಟಿನ್‌ನಲ್ಲಿ ನಾಲ್ಕನೆಯ ಕಾಂಡವನ್ನು ಮುಗಿಸಿದ್ದಾನೆ. ಮುಂದೆ ಉತ್ತಮ ನಾವಿಕನಾಗಬಹುದು. ಪ್ಯಾರಿಸ್ ಪಾಠಶಾಲೆಗೆ ಕಳುಹಿಸಲ್ಪಡಲು ಅರ್ಹನಾಗಿದ್ದಾನೆ.'

ಪ್ಯಾರಿಸ್ ಪಾಠಶಾಲೆಯಲ್ಲಿ ಬ್ರಿಯನ್ನಿ ಶಾಲೆಯ ವಿದ್ಯಾರ್ಥಿಗಳಿಗಿಂತಲೂ ಧನಾಧಿಕರೂ ರಾಜವಂಶೀಕರೂ ಆದವರ ಮಕ್ಕಳು ವ್ಯಾಸಂಗಮಾಡುತ್ತಿದ್ದರಾಗಿ, ಅವರಿಗೆ ರಾಜೋಪಚಾರಗಳಿಗೆ ತಕ್ಕ ಸೌಕರ್ಯಗಳೆಲ್ಲವೂ ಒದಗಿಸಲ್ಪಟ್ಟಿದ್ದುವು. ಒಬ್ಬೊಬ್ಬ ವಿದ್ಯಾರ್ಥಿಗೂ, ಅವನ ಕುದುರೆಯ ಮಾಲೀಸು ಮಾಡುವುದಕ್ಕೊಬ್ಬ ಸೇವಕ, ಆಯುಧಗಳನ್ನು ಉಜ್ಜಿ ಮೆರುಗುಗೊಳಿಸುವುದಕ್ಕೊಬ್ಬ, ಪಾದರಕ್ಷೆಗಳನ್ನು ಶುಭ್ರಗೊಳಿಸುವುದಕ್ಕೊಬ್ಬ, ಸೇವೆಗೊಬ್ಬ ಹೀಗೆ ಹಲವು ಮಂದಿ ಸೇವಕರೂ ರುಚಿಕರವಾದ ಉತ್ತಮ ಆಹಾರವೂ ಮೆತ್ತನೆಯ ಹಾಸಿಗೆ ಹೊದ್ದಿಕೆಗಳೂ ಇದ್ದುವು. ನೆಪೋಲಿಯನು, ಇದನ್ನೆಲ್ಲ ನೋಡಿ, ಯುದ್ಧದಲ್ಲಿ ಕಷ್ಟಗಳನ್ನು ಅನುಭವಿಸಲು ಸಿದ್ಧರಾಗಬೇಕಾದ ವಿದ್ಯಾರ್ಥಿಗಳಿಗೆ ಈ ಬಗೆಯ ಸುಖಸಾಧನಗಳೂ ಸುಲಭ ಜೀವನ ಸೌಕರ್ಯಗಳೂ ಅನಾವಶ್ಯಕವೆಂದು ಯೋಚಿಸಿದನು. ಮಾತ್ರವಲ್ಲ, ಪ್ರತಿ ವಿದ್ಯಾರ್ಥಿಯೂ ತನ್ನ ಕುದುರೆಯನ್ನು ತಾನೇ ಮಾಲೀಸು ಮಾಡಿಕೊಳ್ಳಬೇಕೆಂದೂ, ತನ್ನ ಆಯುಧಗಳನ್ನು ತಾನೇ ಶುಭ್ರಪಡಿಸಿಕೊಳ್ಳಬೇಕೆಂದೂ, ಹೀಗೆ ಈಗಿನಿಂದಲೂ ಸ್ವಯಂ ಪರಿಶ್ರಮದಲ್ಲಿ ಪಾಠವಾದರೆ ಮಾತ್ರವೇ ಯುದ್ಧಕಾಲದಲ್ಲಿ ಅವರಲ್ಲಿ ಕಷ್ಟಸಹಿಷ್ಣುತೆಗೆ ತಕ್ಕ ಅನುಭವವಿರುವುದೆಂದೂ ವಾದಿಸಿ ಆ ಪಾಠಶಾಲಾ ಮುಖ್ಯಾಧಿಕಾರಿಗೆ ಒಂದು ಮನವಿಯನ್ನು ಬರೆದನು. ತಾನು ಮೇಲೆ ಹೇಳಿದಂತೆ ತನ್ನ ಆಚರಣೆಯನ್ನಿಟ್ಟುಕೊಂಡಿದ್ದನೆಂದು ಹೇಳಲವಶ್ಯವಿಲ್ಲ.—

೧೭೮೪ನೆಯ ವರ್ಷದ ಚಳಿಗಾಲದಲ್ಲಿ ನೆಪೋಲಿಯನ್ನನು ತನ್ನ ಶಾಲಾ ಬಾಲಕರನ್ನು ಕೂಡಿಕೊಂಡು ಒಂದು ಯುದ್ಧದ ಆಟವನ್ನು ಹೂಡಿದನು. ಹಿಮದಿಂದಲೇ ಕೋಟೆ ಕೊತ್ತಲುಗಳನ್ನು ಕಟ್ಟಿ, ಒಂದು ಭಾಗದವರು ಅದನ್ನು ರಕ್ಷಿಸುವಂತೆಯೂ, ಮತ್ತೊಂದು ಭಾಗದವರು ಅದರಮೇಲೆ ಹಲ್ಲೆಮಾಡಿ ಜಯಿಸುವಂತೆಯೂ ಏರ್ಪಡಿಸಿದನು. ತಾನು ಎರಡು ಪಕ್ಷಗ

ಳಿಗೂ ಸಹಾಯಮಾಡುವನಾಗಿ ನಿಂತನು. ಅವರು ಹಿಮದಿಂದಲೇ ಉಂಡೆ ಗಳನ್ನು ಮಾಡಿಕೊಂಡು, ಆ ಯುದ್ಧವಾಗಿ ಉಪಯೋಗಿಸತೊಡಗಿದರು. ಆ ಪಟ್ಟಣದ ಜನರು ಅತಿಶಯ ಕೌತುಕಗೊಂಡು ಈ ಆಟವನ್ನು ನೋಡ ಲು ಬಂದರು. ಈ ಯುದ್ಧದಾಟದಲ್ಲಿ ಅನೇಕರು ಗಾಯಹೊಂದಿದರು. ಒಬ್ಬ ಸೇನಾನಿಯು ನೆಪೋಲಿಯನನ ಅಪ್ಪಣೆಯನ್ನು ಮೀರಲು, ಕೃದ್ಧ ನಾದ ಆ ಬಾಲ ಸರ್ವ ಸೈನ್ಯಾಧಿಪತಿಯು, ಅವನನ್ನು ನೆಲಕ್ಕೆ ಕೆಡಹಿ ಗಾ ಯಗೊಳಿಸಿದನು. ಮುಂದೆ, ತಾನು ಚಕ್ರವರ್ತಿಯಾದಮೇಲೆ, ಆ ಗಾಯ ಗೊಂಡವನು ಬಂದು, ಬಾಲ್ಯವಯಸ್ಸಿನ ಈ ಪರಿಚಯವನ್ನು ಹೇಳಲು, ನೆಪೋಲಿಯನನು ಸುಪ್ರೀತನಾಗಿ, ಅವನಿಗೆ ವಿಶೇಷ ಹಣಕಾಸುಗಳನ್ನು ಕೊಟ್ಟು ಆದರಿಸಿದನು.

ಒಂದು ಕಾರ್ಯದಲ್ಲಿ ಒಂದು ಬಾರಿ ಪ್ರವೇಶಿಸಿದರೆ, ಅವನಿಗೆ ಅದ ರಲ್ಲಿ ಎಷ್ಟುಮಟ್ಟಿನ ಏಕಾಗ್ರತೆಯಿರುತ್ತಿತ್ತೆಂಬುದಕ್ಕೆ ಅನೇಕ ಉದಾಹರಣೆ ಗಳಿವೆ. ಒಂದು ಸಂದರ್ಭದಲ್ಲಿ ಒಂದು ಲೆಕ್ಕದ ಉತ್ತರವು ಸರಿಬಾರ ದಿರಲು, ಎಪ್ಪತ್ತೆರಡು ಗಂಟೆಗಳಕಾಲ ಮಿಕ್ಕ ಯಾವ ಕೆಲಸಕ್ಕೂ ಮನಸ್ಸು ಕೊಡದೆ, ಅದರಲ್ಲೇ ನಟ್ಟ ಚಿತ್ತವುಳ್ಳವನಾಗಿದ್ದು ಕೊನೆಗೆ ಅದರ ಫಲಿ ತಾಂಶವನ್ನು ಕಂಡುಹಿಡಿದನಂತೆ! ಜೀವಿತದಲ್ಲಿ ಎಷ್ಟು ಕಷ್ಟಗಳು ಬಂ ದರೂ ಚಿತ್ತಚಾಂಚಲ್ಯವಿಲ್ಲದೆ, ಹಿಡಿದ ಕೆಲಸವನ್ನು ಪೂರ್ತಿಮಾಡುವ ವಿಷಯದಲ್ಲಿ ಆತನಿಗಿದ್ದ ಮನೋದಾರ್ಢ್ಯವೇ ಆತನ ಸಕಲವಿಧ ಅಭಿ ವೃದ್ಧಿಗೂ ಮೂಲಕಾರಣವಾಗಿದ್ದಿತು. ನಮ್ಮ ಕಥಾನಾಯಕನು ರಾಜಾಧಿ ರಾಜರ ಗರ್ಭದಲ್ಲಿ ಜನಿಸದಿದ್ದರೂ, ಶ್ರೀಮಂತಪಿತೃಗಳ ಬಳಿ ಚಿನ್ನದ ತೊಟ್ಟಿಲಿನಲ್ಲಿ ತನ್ನ ಬಾಲ್ಯವಯಸ್ಸನ್ನು ಕಳೆಯದಿದ್ದರೂ, ಮೇಲೆ ಹೇಳಿ ದಂತೆ ಏಕಾಗ್ರಚಿತ್ತತೆಯಿಂದಲೂ, ದೃಢಪ್ರತಿಜ್ಞೆಯಿಂದಲೂ ಮಾಡಿದ ಅಖಂಡ ವಿದ್ಯಾಭ್ಯಾಸದಿಂದ ಪ್ರಪಂಚದಲ್ಲೇ ಅದ್ವಿತೀಯನೆಂಬಂತಹ ಕೀರ್ತಿಪ್ರತಿಷ್ಠೆಗಳ ಸಂಪಾದನೆಗೆ ತನ್ನ ಜೀವಿತವನ್ನು ಕ್ರಮವಾಗಿ ಸಿದ್ಧ ಪಡಿಸಿಕೊಳ್ಳುತ್ತಿದ್ದನು.



## ಅಧ್ಯಾಯ ೨ "ಉದ್ಯೋಗ ಪ್ರಾರಂಭ"

ನೆಪೋಲಿಯನ್ ಬೋನಪಾರ್ಟನಿಗೆ ೧೭೮೫ನೆಯ ಸಂ॥ಕ್ಕೆ ಹದಿನಾರು ವರ್ಷ ತುಂಬಿತು. ಆ ಸಂವತ್ಸರದಲ್ಲೇ, ಆ ಯುದ್ಧ ಪಾಠಶಾಲೆಯ ಕೊನೆಯ ಪರೀಕ್ಷೆಯೂ ನಡೆಯಿತು. ಆತನು ಪರೀಕ್ಷಾಪತ್ರಗಳಲ್ಲಿ ಬರೆದಿದ್ದ ರಾಜಾಜ್ಞೆಗಳು, ದುಷ್ಟಪ್ರಭುತ್ವದ ವಿಷಯದಲ್ಲಿ ವಿರೋಧಿಸುವಂತೆ ಜನಗಳನ್ನು ಉದ್ರೇಕಗೊಳಿಸಿ ಬರೆದಿದ್ದ ವ್ಯಾಸಗಳು ಸ್ವರಾಜ್ಯಪಾಲನೆಗೆ ಯೋಗ್ಯವೆನಿಸುವ ಮಂತ್ರಾಲೋಚನೆಯ ಸೂಚನೆಗಳು ಇವುಗಳನ್ನು ನೋಡಲಾಗಿ ಆತನ ವ್ಯಾಸಂಗವು ಎಷ್ಟು ವಿಸ್ತಾರವಾದುದೆಂಬುದೂ ಮನಸ್ಸು ಎಷ್ಟು ಚಿತವಾದುದೆಂಬುದೂ ತಪ್ಪದೆ ಗೋಚರಕ್ಕೆ ಬರುವುದು. ಅವುಗಳನ್ನು ವಿಮರ್ಶಿಸಿದ ಪರೀಕ್ಷಕನು, ನೆಪೋಲಿಯನನ ಹೆಸರಿಗೆ ಎದುರಿನಲ್ಲಿ 'ಹುಟ್ಟನಿಂದಲೂ ಕಾರ್ಸಿಕಾದ್ವೀಪಸ್ಥನು ; ಅದೃಷ್ಟವಿದ್ದರೆ ಪ್ರಪಂಚದಲ್ಲೇ ಅತ್ಯಂತ ಪ್ರಸಿದ್ಧನಾಗುವನು' ಎಂದು ಬರೆದಿದ್ದನು.

ಪರೀಕ್ಷೆಯಲ್ಲಿ ಉತ್ತಮರೀತಿಯಿಂದ ತೇರ್ಗಡೆಯಾದುದರಿಂದ ಸೈನಿಕೋದ್ಯೋಗಕ್ಕಾಗಿ ದೇಹಪರೀಕ್ಷೆನಡೆದು, ಪದಾತಿ ಸೈನ್ಯಭಾಗದಲ್ಲಿ ಎರಡನೆಯ ಲೆಫ್ಟಿನೆಂಟ್ ಎಂಬ ಪದವಿಯು ಆತನಿಗೆ ಕೊಡಲ್ಪಟ್ಟಿತು. ಕೇವಲ ಹದಿನಾರು ವರ್ಷದ ಅಷ್ಟು ಚಿಕ್ಕ ವಯಸ್ಸಿನಲ್ಲೇ ಅಂತಹ ಉನ್ನತೋದ್ಯೋಗವು ಲಭ್ಯವಾದುದು ಆತನಿಗೆ ಪರಮ ಸಂತೋಷವನ್ನುಂಟುಮಾಡಿತು. ಉದ್ಯೋಗವು ದೊರೆತ ತರುವಾಯ ಆತನು ಪ್ಯಾರಿಸ್ ಪಟ್ಟಣದಲ್ಲೇ ಬಹುದಿನಗಳವರೆಗೆ ನಿಲ್ಲಲು ಅವಕಾಶವೊದಗಲಿಲ್ಲ. ಲಯನ್ಸ್ ಪಟ್ಟಣದಲ್ಲಿ ಏನೋ ಗಲಭೆ ನಡೆಯಿತೆಂದು ವರ್ತಮಾನ ಬಂದುದರಿಂದ ಸರ್ಕಾರದ ಆಜ್ಞೆಯನ್ನನುಸರಿಸಿ, ಒಂದು ಸೈನ್ಯಭಾಗದೊಂದಿಗೆ ಅಲ್ಲಿಗೆ ಪ್ರಯಾಣಮಾಡಿದನು. ಅದು ಆತನಿಗೆ ಕೇವಲ ಪರಸ್ಥಳ. ಆ ಪದವಿಯ ಹೆಸರು ಮಾತ್ರ ಘನವಾದುದಲ್ಲದೆ, ಅದಕ್ಕಿದ್ದ ವೇತನವು ಒಬ್ಬ ದೊಡ್ಡ ಮನುಷ್ಯನು ಗೌರವವಾಗಿ ಜೀವಿಸುವುದಕ್ಕೆ ಸಾಕಾಗುವಷ್ಟಿರಲಿಲ್ಲ. ನೆಪೋಲಿಯನನು ಸ್ನೇಹಿತರಿಲ್ಲದೆ, ಸಾಕಾದಷ್ಟು ಧನಸಂಪತ್ತಿಯಿಲ್ಲದೆ, ಆ ಪರಸ್ಥಳದಲ್ಲಿ ಬಹು ಕ್ಲೇಶಕ್ಕೊಳಗಾದನು. ಊರಿನಲ್ಲಿ ವಿಧವೆಯಾದ ತಾಯಿ

ಯು ನಾನಾ ರೀತಿಯಿಂದ ಮಕ್ಕಳನ್ನಿಟ್ಟುಕೊಂಡು ಎಷ್ಟು ಕಷ್ಟಪಡುತ್ತಿರು ವಳೋ ಎಂಬ ಚಿಂತೆಯೂ ಆಗಾಗ ಆತನ ಹೃದಯವನ್ನು ಕೊರೆಯು ತ್ತಿತ್ತು. ಈ ಮಧ್ಯೆ ಆತನಿಗೆ ವಿಶೇಷ ಕಾಹಿಲೆ ಸಂಭವಿಸಿ ಹಾಸಿಗೆ ಬಿಟ್ಟು ಏಳುವುದೇ ಕಷ್ಟವಾಯಿತು. ಆ ಸಂದರ್ಭದಲ್ಲಿ ಜಿನೀವಾ ಪಟ್ಟಣದ ನಿವಾ ಸಿನಿಯಾದ ಒಬ್ಬ ದೊರೆಸಾನಿಯು ಆತನಿಗೆ ಆಗಬೇಕಾಗಿದ್ದ ಔಷಧೋಪ ಚಾರಗಳನ್ನು ಮಾಡಿದಳು. ನೆಪೋಲಿಯನ್‌ಗೆ ಚೆನ್ನಾಗಿ ಗುಣವಾಯಿತು. ಅನೇಕ ಸಂವತ್ಸರಗಳು ಕಳೆದ ತರುವಾಯ, ಆತನು ಚಕ್ರವರ್ತಿ ಪದವಿ ಯನ್ನು ಹೊಂದಿ ಸಿಂಹಾಸನವೇರಿ ಪ್ರಭುತ್ವಮಾಡುತ್ತಿದ್ದಾಗ, ಆ ದೊರೆ ಸಾನಿಯು ಒಂದು ಪತ್ರವನ್ನು ಬರೆದು ಅದರಲ್ಲಿ ಆತನಿಗೆ ದೊರೆತ ಮಹತ್ಪ ದವಿಗಾಗಿ ಆನಂದವನ್ನು ಸೂಚಿಸಿ, ದುರ್ದೈವವಶವಾಗಿ ತನಗೆ ಪ್ರಾಪ್ತ ವಾಗಿದ್ದ ದಾರಿದ್ರ್ಯವನ್ನು ಕುರಿತೂ ವಿಜ್ಞಾಪಿಸಿಕೊಂಡಿದ್ದಳು. ಕೃತಜ್ಞ ನಾದ ನೆಪೋಲಿಯನ್ನನು ಒಡನೆಯೇ ಆಕೆಯನ್ನು ಗುರ್ತಿಸಿ, ಆಕೆಗೆ ಹತ್ತು ಸಾವಿರ ಫ್ರಾಂಕುಗಳನ್ನು ಕಳುಹಿಸಿದ್ದಲ್ಲದೆ, ಮುಂದೆ ನಿನಗೇನು ಬೇಕಾ ಗಿದ್ದರೂ ಸಂಕೋಚವಿಲ್ಲದೆ ಒಡನೆ ತಿಳಿಸಬೇಕೆಂದು ಬರೆದು ಕಳುಹಿಸಿದನು.

ಲಯನ್ಸ್ ಪಟ್ಟಣದ ವಿಶ್ವವಿದ್ಯಾನಿಲಯದವರು 'ಪ್ರಜಾ ಸೌಖ್ಯಕರ ಗಳಾದ ವಿಚಾರಗಳಾವುವು' ಎಂಬುದನ್ನು ಉತ್ತಮ ರೀತಿಯಿಂದ ಬರೆದು ಕಳುಹಿಸಿದ ಒಂದು ವ್ಯಾಸಕ್ಕೆ ಬಹುಮಾನ ಕೊಡಲ್ಪಡುವುದೆಂದು ಒಂದು ಸ್ಪರ್ಧೆಯನ್ನು ಏರ್ಪಡಿಸಿರಲು, ಸೈನ್ಯದಲ್ಲಿ ಅಧಿಕಾರಿಯಾಗಿದ್ದರೂ ಸದಾ ವಿದ್ಯಾವ್ಯಸನಿಯಾಗಿದ್ದ ನೆಪೋಲಿಯನ್ನನು, ಆ ವ್ಯಾಸವನ್ನು ಬರೆದು ಕಳು ಹಿಸಿ ಬಹುಮಾನ ಪಡೆದನು.

೧೭೮೯ನೆಯ ಸಂ||ದ ಸುಮಾರಿನಲ್ಲಿ ಫ್ರಾನ್ಸ್‌ದೇಶದಲ್ಲಿ ಅಲ್ಲ ಕಲ್ಲೋಲವೆದ್ದಿತು. ಜನರಲ್ಲಿ ಸಮಾಧಾನವು ನಿರ್ಮೂಲವಾಯಿತು. ರಾಯ ಲಿಸ್ಟ್ಸರೆಂಬ ಪ್ರಭುಪಕ್ಷ ಮತ್ತು ರಿಪಬ್ಲಿಕ್ಸ್ ಎಂಬ ಪ್ರಜಾಪಕ್ಷ ಹೀಗೆ ಎರಡು ಪಕ್ಷಗಳೇರ್ಪಟ್ಟು ಪರಸ್ಪರರು ಅಧಿಕಾರಕ್ಕಾಗಿ ಹೊಡೆದಾಡ ಹತ್ತಿ ದರು. ಪ್ರಜಾಪಕ್ಷದವರು, ಅನ್ಯಾಯವಾಗಿ ಜನಗಳಮೇಲೆ ಹೇರಿದ ಕಂ ದಾಯ ಕೌಳಿಗೆಗಳನ್ನು ತೆಗೆಯಬೇಕೆಂದೂ ಪ್ರಜಾಸೌಕರ್ಯಗಳನ್ನು ಹೆಚ್ಚು ಮಾಡಬೇಕೆಂದೂ ವಾದಿಸಿ ಪ್ರಭುಪಕ್ಷದವರ ಕೈಯಿಂದ ಅಧಿಕಾರ ಸೂತ್ರ

ಗಳನ್ನು ಕಿತ್ತುಕೊಳ್ಳಲು ಹವಣಿಸಿದರು. ರಾಜನ ಪಕ್ಷದವರು ನ್ಯಾಯ ಮಾರ್ಗವನ್ನು ಬಿಟ್ಟು ಪ್ರಜಾಪಕ್ಷವನ್ನು ಸದೆಬಡಿಯತೊಡಗಲು ಉಭಯ ರಿಗೂ ಭಯಂಕರ ಕಾಳಗಗಳಾಗತೊಡಗಿದುವು. ಪ್ರಜಾಪಕ್ಷದವರ ಕೈಮೇ ಲಾಗಿ-ರಾಜ ಕುಟುಂಬದವರೂ, ಅವರ ಅನುಯಾಯಿಗಳಲ್ಲಿ ಹಲವರೂ ತಮ್ಮ ತಲೆಗಳನ್ನು ತೆತ್ತರು. ಎಲ್ಲೆಲ್ಲೂ ಭಯಂಕರ ಹಾವಳಿ; ಅನೇಕರು ದೇಶತ್ಯಾಗಮಾಡಿದರು. ನೆಪೋಲಿಯನನು ತನ್ನ ದೇಶಕ್ಕೆ ಪ್ರಾಪ್ತವಾದ ಈ ದುರವಸ್ಥೆಯನ್ನು ಕಂಡು ಮನಮರುಗಿ, ರಾಜ್ಯದ ಆಡಳಿತಗಳಲ್ಲಿ ವಿಶೇಷ ತಿದ್ದುಪಾಡುಗಳಾಗಬೇಕೆಂದು ಬಯಸಿದನು. ಇತರರು ಸುಖವಿಲಾಸಗ ಳಲ್ಲಿ ಮಗ್ನರಾಗಿ ತಿಂದು ಕುಡಿದು ಮತ್ತರಾಗಿ ಇರುತ್ತಿದ್ದ ವೇಳೆಗಳಲ್ಲಿ ನೆಪೋಲಿಯನನು ಗ್ರಂಥ ವ್ಯಾಸಂಗದಲ್ಲೂ, ದೇಶದಲ್ಲಿನ ಗಲಭೆಗಳನ್ನು ನಿರ್ಮೂಲಿಸಿ ಪ್ರಜಾಸೌಖ್ಯವನ್ನು ಸ್ಥಾಪಿಸುವ ಮಾರ್ಗವಾವುದು ಎಂಬು ದನ್ನು ಕುರಿತ ಅಗಾಧ ಯೋಚನೆಯಲ್ಲೂ ಮಗ್ನನಾಗಿರುವನು. ಒಂದಾ ನೊಂದು ಸಂದರ್ಭದಲ್ಲಿ ಆಕ್ಸೋನಿಪಟ್ಟಣದ ಒಂದು ಭವನದಲ್ಲಿ ಜರುಗು ತ್ತಿದ್ದ ಒಂದು ದೊಡ್ಡ ಸಭೆಯಲ್ಲಿ, ನೆಪೋಲಿಯನನು ರಾಜ್ಯ ಕ್ಷೇಮವು ಏರ್ಪಡಬೇಕಾದರೆ, ಪ್ರಭುತ್ವವು ಯಾವ ಮಾರ್ಗಗಳನ್ನು ಅನುಸರಿಸಿ ರಾಜ್ಯಭಾರವನು ನಡೆಯಿಸಬೇಕು ಎಂಬ ವಿಚಾರವನ್ನು ಕುರಿತು ನಿರ್ಣಯವಾಗಿ ಒಂದು ಪ್ರೌಢ ಭಾಷಣಮಾಡಿದನು. ಕೇವಲ ಇಪ್ಪತ್ತು ವರುಷ ಪ್ರಾಯದ ಆ ಚಿಕ್ಕ ಸೈನ್ಯಾಧಿಕಾರಿಯ ವಾಗ್ವೈಖರಿಯನ್ನೂ, ಅಮೋಘ ವಿಚಾರಗಳನ್ನೂ, ಆತನ ಧೈರ್ಯ ಸಾಹಸಗಳನ್ನೂ, ಪಾಂಡಿ ತ್ಯವನ್ನೂ ಕಂಡು ಎಲ್ಲರೂ ಬೆರಗಾಗಿ ಹೋದರು.

ಆಕ್ಸೋನಿ ಪಟ್ಟಣದಲ್ಲಿ ಎದ್ದ ಗಲಭೆಯನ್ನೂ ಅಣಗಿಸಿದ ತರುವಾಯ ನೆಪೋಲಿಯನನು ಕೆಲವುಕಾಲ ವಿರಾಮ ಪಡೆದು ಕಾರ್ಸಿಕಾದ್ವೀಪಕ್ಕೆ ಹೋದ ನು. ಅಲ್ಲಿದ್ದಾಗ ಆತನು, ಆ ದ್ವೀಪವಾಸಿಗಳಾಗಿದ್ದ ಧೀರವೀರರ ಚರಿತ್ರೆಗಳ ನ್ನು ಬರೆಯಬೇಕೆಂದು ಇಚ್ಛಿಸಿ ಆ ಕಾರ್ಯದಲ್ಲಿ ಮಗ್ನನಾದನು. ಅಲ್ಲದೆ, ಆ ಕಾಲದಲ್ಲಿ ಯೂರೋಪುಖಂಡದಲ್ಲೇ ವ್ಯಾಪಿಸಿದ್ದ ರಾಜಕೀಯಾಂದೋಳನ ದವಿಚಾರವನ್ನೂ, ಫ್ರಾನ್ಸ್ ರಾಜಧಾನಿಯಾದ ಪ್ಯಾರಿಸ್ ಪಟ್ಟಣದಲ್ಲಿ ಪ್ರತಿ ದಿನವೂ ನಡೆಯುತ್ತಿದ್ದ ಕ್ರೂರಕೃತ್ಯಗಳು, ಭಯಂಕರ ಹತ್ಯೆಗಳು ಮುಂತಾ

ದುವನ್ನು ಕುರಿತು ಚರ್ಚಿಸಲು ಒಂದು ಸಂಘವನ್ನು ಸ್ಥಾಪಿಸಿದನು. ಆ ಸಂಘದಲ್ಲಿ ನ್ಯಾಯ ಪಕ್ಷಪಾತಿಯಾದ ಆತನು, ಪ್ರಜಾವರ್ಗದಲ್ಲಿ ಶಾಂತತೆಯು ಯಾವ ಮಾರ್ಗಗಳಿಂದ ಸ್ಥಾಪಿಸಲ್ಪಡಲು ಸಾಧ್ಯ ಎಂಬ ವಿಚಾರವಾಗಿಕೊಡುತ್ತಿದ್ದ ಭಾಷಣಗಳು ಸಕಲರಿಗೂ ಚಿತ್ತಾಕರ್ಷಕಗಳಾಗಿದ್ದುವು. ಒಂದುದಿನ ಆತನ ವಿರೋಧಿಯಾದ ಸಾಲ್ಸೆಟ್ ಎಂಬುವನು, ನೆಪೋಲಿಯನ್‌ನು ರಾಜದ್ರೋಹಿಯೆಂದು ಪ್ರಭುತ್ವದವರಿಗೆ ತಿಳಿಸಿದನು. ಆ ಕಾರಣದಿಂದ ಆತನನ್ನು ನಿರ್ಬಂಧಗೊಳಿಸಿ ಪ್ಯಾರಿಸ್ ಪಟ್ಟಣಕ್ಕೆ ಕೊಂಡೊಯ್ದು, ವಿಚಾರಣೆಮಾಡಿ, ನಿರ್ದೋಷಿಯೆಂದು ಬಿಡುಗಡೆ ಮಾಡಿದರು. ಹೀಗೆ ತನಗೆ ಮಹದಪಕಾರ ಮಾಡಿದ್ದರೂ, ಆ ಮಹಾನುಭಾವನು ಮುಂದೊಂದು ವೇಳೆ ಪ್ರಾಣಾಪಾಯಕ್ಕೆ ಗುರಿಯಾಗಿದ್ದ ಸಾಲ್ಸೆಟಿಯನ್ನು ಆ ಅಪಾಯದಿಂದ ಪಾರುಮಾಡಿ ಪ್ರಾಣವನ್ನು ಉಳಿಸಿಕೊಳ್ಳೆಂದು ಸುರಕ್ಷಿತಸ್ಥಳಕ್ಕೆ ಕಳುಹಿಸಿ, ಕಾಪಾಡಿ, ತನ್ನ ಮಹಸೀಯ ಗುಣವನ್ನು ವ್ಯಕ್ತಗೊಳಿಸಿದನು.

ಫ್ರಾನ್ಸಿನಲ್ಲಿ ದಿನದಿನಕ್ಕೆ ಹೆಚ್ಚುತ್ತಿದ್ದ ರಾಜ್ಯಕ್ರಾಂತಿಯು ಬರುತ್ತ ಬರುತ್ತ ಭಯಂಕರ ಸ್ವರೂಪವನ್ನು ಹೊಂದಿತು. ನೆಪೋಲಿಯನ್‌ನು ಜನರ ಮನೋವೃತ್ತಿಯು ಅಷ್ಟು ಮಟ್ಟಿಗೆ ಕ್ಷುಬ್ಧಗೊಂಡಿರುವಾಗ ವಿದ್ಯಾವಿಹೀನರೂ, ಧರ್ಮದೂರರೂ ಆದ ಆ ಜನರಿಗೆ ಸಂಪೂರ್ಣ ಸ್ವಾತಂತ್ರ್ಯವು ದೊರೆತರೆ ಅದು ಮಹದನರ್ಥಕ್ಕೆ ಹೇತುವಾಗುವುದೆಂದೂ, ಅವರಿಗೆ ಅಮೆರಿಕೆಯಲ್ಲಿರುವಂತಹ ಕಾನೂನುಗಳಿಂದ ಬದ್ಧವಾದ ಪ್ರಜಾ ಸ್ವಾತಂತ್ರ್ಯವೇ ಯೋಗ್ಯವಾದುದೆಂದೂ ಎಣಿಸಿದ್ದನು. ಧನವಂತನೇ ಬಲವಂತನು ಎಂಬ ನೀತಿಯು ನಾಶವಾಗಿ ಆ ಸ್ಥಾನದಲ್ಲಿ ಗುಣವಂತನೇ- ನೀತಿವಂತನೇ ಬಲವಂತನು ಎಂಬ ನೀತಿಯು ಸ್ಥಾಪಿಸಲ್ಪಡಬೇಕು ಎಂಬುದು ಆತನ ಅಂತರ್ಯ ಅಪೇಕ್ಷೆಯಾಗಿದ್ದಿತು. ಆದರೆ ಆಗಿನ ಕಾಲಸ್ಥಿತಿಯು ವಿಪರೀತವಾಗಿತ್ತು. ಫ್ರಾನ್ಸಿನಲ್ಲಿ ಅರಾಜಿಕತೆಯು ಹೇಗೆ ಆಧಿಪತ್ಯ ಮಾಡುತ್ತಿದ್ದಿತೋ, ಹಾಗೆಯೇ ಕಾರ್ಸಿಕಾ ದ್ವೀಪದಲ್ಲೂ ಅಶಾಂತತೆಯು ವ್ಯಾಪಿಸಿತು. ಅಗಾಧ ದುಷ್ಪರಿಣಾಮಗಳಿಗೆ ಆಕರವಾದ ಆ ಅಶಾಂತತೆಗಾಗಿ ಬೇಸತ್ತು, ಆ ದ್ವೀಪದ ಗವರ್ನರ್ ಆಗಿದ್ದ ಪಾಲಿ ಯೆಂಬುವನು, ಆ ದ್ವೀಪವನ್ನು ಆಂಗ್ಲೇಯರಿಗೆ ವಹಿಸಿಕೊಟ್ಟು ಬಿಡಬೇಕೆಂದು ಇಚ್ಛಿಸಿದ್ದನು. ತನ್ನ

ಜನ್ಮಸ್ಥಳವಾದ ಆ ದ್ವೀಪವು ಪರಾಧೀನಕ್ಕೆ ಹೋಗುವುದು ನನ್ನ ಕಥಾ ನಾಯಕನಿಗೆ ಇಷ್ಟವಿಲ್ಲದಿದ್ದರೂ, ಮುಂದೆ ಕೆಲವು ದಿನಗಳಲ್ಲಾಗಿ ಅದು ಪರಾಧೀನವಾಗುವುದು ತಪ್ಪಲಿಲ್ಲ. ಪಾಲಿಯು ಅದನ್ನು ಒಪ್ಪಿಸಿಕೊಟ್ಟು ಪ್ಯಾರಿಸ್ ನಗರದಲ್ಲಿ ಬಂದು ವಾಸಿಸತೊಡಗಿದನು.

ಕಾರ್ಶಿಕಾ ದ್ವೀಪವು ಇಂಗ್ಲೀಷರ ಸ್ವಾಧೀನಕ್ಕೆ ಹೋದುದು ನೆಪ್ಪೋಲಿಯನನಿಗೂ ಆತನ ತಾಯಿ ಮುಂತಾದವರಿಗೂ ಇಷ್ಟವಿರಲಿಲ್ಲ ವೆಂಬುದು ತಿಳಿದಿದೆಯಲ್ಲವೆ? ಅವರನ್ನು ಹೇಗಾದರೂ ಒಪ್ಪಿಸಿದಲ್ಲದೆ, ಆ ದ್ವೀಪದಲ್ಲಿ ಶಾಂತತೆಯು ನೆಲೆಗೊಳ್ಳಲಾರದೆಂದೆಣಿಸಿ ಪಯೋಲಿಯು, ಲೆಟಿಶಿಯಾ ಬಳಿಗೆ ಬಂದು, 'ಪ್ರಭುತ್ವವನ್ನು ಎದುರಿಸಿ ಪ್ರಯೋಜನವಿಲ್ಲ. ಮೊಂಡತನ ಮಾಡಿದರೆ, ನಿನಗೂ ನಿನ್ನ ಕುಟುಂಬಕ್ಕೂ ವಿಶೇಷ ಕಷ್ಟನಷ್ಟಗಳು ಪ್ರಾಪ್ತ ವಾಗುವುವು' ಎಂದು ಹೇಳಿದನು. ಆದರೆ ಆ ಮಾತಿಗೆ ಭಯಪಟ್ಟು ಆಕೆ ಯು ತನ್ನ ಆತ್ಮಗೌರವವನ್ನೂ ಮನಸ್ಸಾಕ್ಷಿಯನ್ನೂ ಮಾರಿಕೊಳ್ಳಲು ಒಪ್ಪಲಿಲ್ಲ. 'ನನಗೆ ಗೊತ್ತಿರುವುದು-ಗೌರವ ಮತ್ತು ಕರ್ತವ್ಯ ಎಂಬಿ ವೆರಡೇ! ನಾನು ಅವುಗಳಿಗಲ್ಲದೆ ದಂಭದರ್ಪಗಳಿಗೆಂದಿಗೂ ಶಿರಬಾಗಲಾರೆನು' ಎಂದು ಹೇಳಿಬಿಟ್ಟಳು. ತಕ್ಷಣವೇ, ಆ ಕುಟುಂಬದವರನ್ನು ಆ ದ್ವೀಪ ದಿಂದಲೇ ತರುಮುಗೊಟ್ಟಬೇಕೆಂದು ಆ ಬಗ್ಗೆ ಪ್ರಭುತ್ವದವರಿಂದ ಒಂದು ಆಜ್ಞಾಪತ್ರವು ಹುಟ್ಟಿತು. ಆ ದ್ವೀಪಸ್ಥರಾದ ಸಾವಿರಾರು ಜನರು ಕತ್ತಿ ಗಂಡುಗೊಡಲಿ ದೊಣ್ಣೆ ಮುಂತಾದುವುಗಳನ್ನು ಎತ್ತಿಕೊಂಡು ಅವರ ಮನೆ ಯಮೇಲೆ ಏರಿಬಂದರು. ಆ ಅಪಾಯ ಸಂದರ್ಭದಲ್ಲಿ ಏನುಮಾಡುವು ದಕ್ಕೂ ತೋರದೆ, ಆ ದುರ್ದೈವಿಗಳು ಕೈಗೆಸಿಕ್ಕ ವಸ್ತ್ರ ವಡವೆಗಳನ್ನು ಎತ್ತಿಕೊಂಡು ಮನೆಬಿಟ್ಟು ಓಡಿದರು. ತರುವಾಯ ಬಹು ಕಷ್ಟಪಟ್ಟು ಸಮುದ್ರತೀರವನ್ನು ಸೇರಿ, ಅಲ್ಲಿದ್ದ ಒಂದು ದೋಣಿಯಲ್ಲಿ ಕುಳಿತು, ಭಯಂ ಕರವಾದ ಅಲೆಗಳಿಂದ ಅಲ್ಲೋಲ ಕಲ್ಲೋಲವಾಗಿದ್ದ ಸಮುದ್ರದಲ್ಲಿ ಪ್ರಯಾಣವಾಗಿಬಿಟ್ಟರು. ದೈವಾನುಗ್ರಹದಿಂದ, ಆ ಕ್ಷುದ್ರದೋಣಿಯೇ ಅವರನ್ನು ಸುರಕ್ಷಿತವಾಗಿ ಕೊಂಡೊಯ್ದು ಮಾರ್ಸೇಲ್ಸ್ ಎಂಬ ಪಟ್ಟಣವ ನ್ನು ಸೇರಿಸಿತು.

ಕಾರ್ಶಿಕಾ ದ್ವೀಪವಾಸಿಗಳು ನೆಪೋಲಿಯನನ ಮಾತು ಕೇಳದೆ ಮೇ

ಲ್ಯಾಂಡಂತೆ ಪರಾಧೀನತೆಗೆ ಒಳಪಟ್ಟಿರಷ್ಟೆ! ಆದರೆ ಎರಡು ವರ್ಷಗಳೊಳಗಾಗಿ, ಆ ಪರಕೀಯರ ವೇಷಭಾಷೆ ನಡೆನುಡಿಗಳು ಸರಿಬೀಳದೆ ತಿರುಗಿಬಿದ್ದು ಆ ಪರದೇಶೀಯರನ್ನು ಓಡಿಸಿಬಿಟ್ಟು, ಪುನಃ ಫ್ರಾನ್ಸಿನ ಅಧಿಕಾರವನ್ನೇ ಒಪ್ಪಿಕೊಂಡು ಎಂದಿನಂತೆ ಇರತೊಡಗಿದರು. ಪಯೋಲಿಯು ಚಿಕ್ಕ ವಯಸ್ಸಿನ ಆ ನೆಪೋಲಿಯನ್ನನ ಬುದ್ಧಿವಾದವನ್ನು ಕೇಳದೆ ಹೋದೆನಲ್ಲಾ ಎಂದು ಪಶ್ಚಾತ್ತಾಪ ಪಟ್ಟನು.

ಫ್ರಾನ್ಸ್‌ದೇಶದಲ್ಲಿ ಪ್ರಾರಂಭವಾದ ಈ ಭಯಂಕರವಾದ ಆಂದೋಳನದ ವೃತ್ತಾಂತವನ್ನು ಕೇಳಿ, ಯೂರೋಪುಖಂಡದ ಇತರ ರಾಷ್ಟ್ರಗಳ ರಾಜರೂ ನಡುಗಿಹೋದರು. ಅವರಲ್ಲನೇಕರು ತಾವೆಲ್ಲರು ಒಂದಾಗಿ ಈ ಅರಾಜಕ ಪ್ರಭುತ್ವವನ್ನು ಇನ್ನೂ ಮೊಳಕೆಯಲ್ಲೇ ನಾಶಪಡಿಸದಿದ್ದರೆ, ಮುಂದೆ ಬಹು ಪ್ರಮಾದವುಂಟಾಗದಿರದೆಂದು ಯೋಚಿಸಿ ಒಳಸಂಚು ನಡೆಸಿದರು. ಫ್ರಾನ್ಸಿನ ದಕ್ಷಿಣಭಾಗದ ಸಮುದ್ರ ತೀರದಲ್ಲಿದ್ದ ಟುಲಾನ್ (Toulon) ಎಂಬ ಬಂದರು ಅವರಿಗೆ ಪ್ರಧಾನಸ್ಥಾನವಾಯಿತು. ಅದರಲ್ಲಿ ಪೂರ್ವದ ರಾಜಪಕ್ಷೀಯರೇ ವಿಶೇಷ ಸಂಖ್ಯೆಯಿಂದ ವಾಸಿಸುತ್ತಿದ್ದರು. ಟುಲಾನ್ ಪಟ್ಟಣವು ಉತ್ತಮವಾದ ಬಂದರು ಮಾತ್ರವಲ್ಲ- ನಾವಿಕಾದಳದ ಉಗ್ರಾಣಸ್ಥಾನವೂ, ಮದ್ದುಗುಂಡುಗಳ ಸಂಗ್ರಹಾಲಯವೂ ಆಗಿದ್ದಿತು. ಐವತ್ತು ಯುದ್ಧದ ಹಡಗುಗಳು ಆ ಬಂದರಿನಲ್ಲಿ ಲಂಗರುಹಾಕಿ ಇರುವುವು. ಇಷ್ಟು ಸುಸಜ್ಜಿತವಾದ ಪಟ್ಟಣವನ್ನೂ, ಅದರ ಕೋಟೆಯನ್ನೂ, ಅದರಲ್ಲಿದ್ದ ಆಯುಧಾಗಾರಗಳನ್ನೂ, ಮದ್ದು ಗುಂಡು ನಾವೆಗಳು ಹೀಗೆ ಎಲ್ಲವನ್ನೂ ಆ ರಾಜಪಕ್ಷೀಯರು, ಅಲ್ಲೇ ಸಮುದ್ರದ ದಂಡೆಯಲ್ಲಿ ಬೀಡು ಬಿಟ್ಟುಕೊಂಡಿದ್ದ ಇಂಗ್ಲೀಷ್ ಮತ್ತು ಸ್ಪೈಯಿನ್ ನಾವಿಕಾದಳಗಳಿಗೆ ಒಪ್ಪಿಸಿಕೊಟ್ಟು ಅವರು ಫ್ರಾನ್ಸಿನ ಅರಾಜಕ ಪ್ರಭುತ್ವವನ್ನು ನಾಶಗೊಳಿಸಬೇಕೆಂದು ಅಪೇಕ್ಷಿಸಿದರು. ಇಷ್ಟು ಯುದ್ಧ ಸಾಮಗ್ರಿಯೂ ಸುಸಜ್ಜಿತನಾವೆಗಳೂ ದೊರೆತೊಡನೆಯೇ ೫೦೦೦ ಇಂಗ್ಲೀಷರ ಮತ್ತು ೮೦೦೦ ಸ್ಪಾನಿಯಾರ್ಡರ ಸೈನ್ಯವು ನಾವೆಗಳಲ್ಲಿ ಪ್ರಯಾಣವಾಗಿ ಬಂದು ಟುಲಾನ್ ಪಟ್ಟಣದಲ್ಲಿಳಿದು ಕೋಟೆಯನ್ನು ಭದ್ರಪಡಿಸಿಕೊಂಡು ಯುದ್ಧಕ್ಕೆ ಸಿದ್ಧವಾಗುತ್ತಿದ್ದಿತು.

ಈ ವೃತ್ತಾಂತವು ಪ್ಯಾರಿಸ್ ರಾಜಧಾನಿಗೆ ತಿಳಿದೊಡನೆಯೇ ಅವರು ೪೦೦೦೦ ಸೈನ್ಯವನ್ನು ಜನರಲ್‌ಕಾರ್ಟ್ ಎಂಬುವನ ಅಧೀನದಲ್ಲಿ ಕೊಟ್ಟು ಟೌಲನ್‌ನಗರವನ್ನು ಕೈವಶಪಡಿಸಿಕೊಳ್ಳಬೇಕೆಂದು ಕಳುಹಿಸಿದರು. ಆತನು ತನ್ನ ಸೈನ್ಯವನ್ನು ಎರಡು ಭಾಗಮಾಡಿ, ಆ ಪಟ್ಟಣಕ್ಕೆ ಮುತ್ತಿಗೆಹಾಕಿ ಮೂರುತಿಂಗಳಕಾಲ ಕುಳಿತನಾದರೂ ಏನೂ ಪ್ರಯೋಜನವಾಗಲಿಲ್ಲ. ಸೈನಿಕರು ತೂಕಡಿಸುತ್ತಾ ಕುಳಿತರು. ಈ ಆಲಸ್ಯಭಾವವು ಪ್ರಭುತ್ವದವರಿಗೆ ತಿಳಿದೊಡನೆಯೇ ಅವರು, ನೆಪೋಲಿಯನ್ನನ್ನೇ ಪುನಃ ಕರೆಯ ಕಳುಹಿ ಬ್ರಿಗೇಡಿಯರ್‌ಜನರಲ್ ಎಂಬ ಪದವಿಯನ್ನು ಆತನಿಗೆ ಕೊಟ್ಟು ಯುದ್ಧರಂಗಕ್ಕೆ ಕಳುಹಿಸಿದರು. ಒಡನೆ ಆ ಮಹಾಸೇನಾನಿಯು ಒಂದು ನಿಮಿಷ ಕಾಲವನ್ನೂ ವ್ಯರ್ಥವಾಗಿ ಕಳೆಯದೆ ಯುದ್ಧಕ್ಷೇತ್ರಕ್ಕೆ ಪ್ರಯಾಣಮಾಡಿ, ಅಲ್ಲಿಯ ಅವ್ಯವಸ್ಥೆಯನ್ನು ಕಂಡು ಮರುಗಿ, ಎಲ್ಲವನ್ನೂ ತನ್ನ ಇಚ್ಛಾನುಸಾರ ಸರಿಪಡಿಸತೊಡಗಿದನು. ಶತ್ರುಗಳು ಆ ಪಟ್ಟಣದ ಕೋಟೆ ಮತ್ತು ಯುದ್ಧನಾವೆಗಳು ಈ ಎರಡುಕಡೆಯಲ್ಲೂ ಇದ್ದರು. ಏಕಕಾಲದಲ್ಲಿ ಆ ಎರಡು ಭಾಗದ ಸೈನ್ಯದಮೇಲೂ ಯುದ್ಧಮಾಡುವುದು ಕಷ್ಟವೆಂದೂ ಕೋಟೆಯನ್ನು ಮಾತ್ರ ಸ್ವಾಧೀನಪಡಿಸಿಕೊಂಡರೆ, ತರುವಾಯ ಶತ್ರುಸೈನ್ಯವು ಸ್ಥಾನಭ್ರಷ್ಟತೆಯಿಂದ ಸುಲಭವಾಗಿ ಜಯಿಸಲ್ಪಡಬಹುದೆಂದೂ ಯೋಚಿಸಿ, ಬಹುಶ್ರಮಪಟ್ಟು ೨೦೦ ಫಿರಂಗಿಗಳನ್ನು ತರಿಸಿದನು. ಕೋಟೆಗೆ ಅಭಿಮುಖವಾಗಿ ದಿಬ್ಬಗಳನ್ನು ಕಟ್ಟಿಸಿ ಅವುಗಳಮೇಲೆ ಫಿರಂಗಿಗಳನ್ನು ಇಡಿಸಿ, ಅಲ್ಲಿಂದ ಗುರಿಯಿಟ್ಟು ಹೊಡೆಯಿಸಿದರೆ, ಗೊತ್ತಾದ ಸ್ಥಳಕ್ಕೆ ಗುಂಡುಹೋಗಿ ತಗಲುವುದೋ ಎಂಬುದನ್ನು ಪರೀಕ್ಷಿಸಿ ನಿರ್ಧರಿಸಿಕೊಂಡನು. ದಿಬ್ಬವನ್ನು ಕಟ್ಟಿಸುವಾಗಲೂ, ಫಿರಂಗಿಗಳನ್ನು ಏರಿಸುವಾಗಲೂ, ಶತ್ರುಸೈನ್ಯದಿಂದ ಗುಂಡುಗಳು ಮಳೆಯೋ ಎಂಬಂತೆ ಬಂದು ಸುರಿಯುತ್ತಿದ್ದುವಾದರೂ, ಲೇಶಮಾತ್ರವೂ ಪ್ರಾಣಭಯವೆಂಬುದಿಲ್ಲದೆ ನಿರ್ಭಯವಾಗಿ ಕುದುರೆಯೇರಿ ತಿರುಗುತ್ತಾ, ಸೈನಿಕರಿಗೆ ಮಾರ್ಗದರ್ಶಿಯಾಗಿ, ಆ ಕಾರ್ಯವನ್ನು ಜಾಗ್ರತೆಯಾಗಿ ಸಿದ್ಧಗೊಳಿಸಿದನು. ತರುವಾಯ ೧೭೯೩ನೆಯ ಡಿಶಂಬರು ೧೭ನೆಯದಿನ ಮಧ್ಯರಾತ್ರಿಯಲ್ಲಿ ಕೋಟೆಯಲ್ಲಿನ ಶತ್ರುಸೈನ್ಯದಮೇಲೆ ಗುಂಡಿನ ಸುರಿಮಳೆಯನ್ನು ಸುರಿಸುವಂತೆ ತನ್ನ ಸೈನ್ಯಕ್ಕೆ ಅಪ್ಪ

ಶವಮಾಡಿದನು. ಆ ರಾತ್ರಿ ಮೃತ್ಯುವೇ ರೂಪುಗೊಂಡು ಅಲ್ಲಿಗೆ ಬಂದಂತಿದ್ದಿತು. ಸುಯ್ಯೆಂದು ಬೀಸುತ್ತಿದ್ದ ಚಳಿಗಾಳಿಯೂ, ಅಗ್ನಿವರ್ಷದಂತೆ ಸುರಿಯುತ್ತಿದ್ದ ಗುಂಡುಗಳೂ ಆ ಯುದ್ಧಭೂಮಿಯನ್ನು ರುದ್ರಭೂಮಿಯನ್ನಾಗಿಸಿದ್ದುವು. ಕೆಲವು ಗಂಟೆಗಳೊಳಗಾಗಿಯೇ ನೆಪೋಲಿಯನ್ನನ ಸೈನ್ಯದಿಂದ ೮೦೦೦ ದೊಡ್ಡ ದೊಡ್ಡ ಫಿರಂಗಿ ಗುಂಡುಗಳು ಹಾರಿಸಲ್ಪಟ್ಟು ಅಗ್ನಿಗೋಳಗಳಾಗಿ ಕೋಟೆಯನ್ನು ಧ್ವಂಸಗೊಳಿಸಿದವು. ದೊಡ್ಡ ದೊಡ್ಡ ಕಟ್ಟಡಗಳೆಲ್ಲಾ ನೆಲಸಮವಾದುವು. ಆ ರಾತ್ರಿಯ ಅಂಧಕಾರದಲ್ಲಿ, ಮಳೆಬಿರುಗಾಳಿಗಳಲ್ಲಿ, ಫಿರಂಗಿಗಳ ಭಯಂಕರ ಧ್ವನಿ, - ಸುರಿಯುತ್ತಿದ್ದ ಅಗ್ನಿವರ್ಷಗಳಲ್ಲಿ ನೆಪೋಲಿಯನ್ನನು ತನ್ನ ಸೈನಿಕರಿಗೆ ಅಗ್ರಗಾಮಿಯಾಗಿ, ನಿರ್ಭಯದಿಂದ ಇಂಗ್ಲಿಷ್ ಫಿರಂಗಿಗಳ ಮುಖಭಾಗದಲ್ಲೇ, ಪ್ರಯಾಣವಾಗಿ ಕೋಟೆಯ ದ್ವಾರಗಳಬಳಿಗೆ ಹೋಗುತ್ತಿದ್ದನು. ಸೈನಿಕರೋ ಕೊಯ್ಲಿಗೆ ಬಂದ ಪೈರುಗಳಂತೆ ಕತ್ತರಿಸಿ ಬೀಳುವರು. ಕಂದಕಗಳೆಲ್ಲವೂ ಸತ್ತವರಿಂದಲೂ ಸಾಯುಲಿರುವವರಿಂದಲೂ ತುಂಬಿಹೋದುವು. ಜಯಾಪಜಯಗಳು ಸಂದೇಹವಾಗಿದ್ದುವು. ಕೊನೆಗೆ ರಕ್ತಧಾರೆಯಿಂದ ನೆನೆದುಹೋಗಿದ್ದ ತನ್ನ ಸೈನಿಕರನ್ನೊಡಗೊಂಡು ಧೀರ ನೆಪೋಲಿಯನ್ನನು ಬುರುಜುಗಳ ದ್ವಾರಗಳಿಂದ ಒಳಹೊಕ್ಕು ಕೋಟೆಯನ್ನು ಸ್ವಾಧೀನಪಡಿಸಿಕೊಂಡು, ಅಲ್ಲಿ ತಮ್ಮ ಝೂಂಡಾವನ್ನು ಏರಿಸಿದನು. ಕೋಟೆಯೊಳಗಿದ್ದ ಶತ್ರುಸೈನ್ಯದವರೆಲ್ಲಾ ನಿಶ್ಶೇಷವಾಗಿ ಸಂಹರಿಸಲ್ಪಟ್ಟರು. ಆಗ ಆ ಧೀರನು ಹಸನ್ಮುಖದಿಂದ ಸಮೀಪದಲ್ಲಿದ್ದ ಸರ್ವಸೇನಾಧಿಪನಾದ ಡ್ಯೂಗೊಮ್ಮಿಯರ್ ಎಂಬಾತನನ್ನು ಕುರಿತು - 'ಇನ್ನು ನೀವು ಹೋಗಿ ಸುಖವಾಗಿ ನಿದ್ರಿಸಬಹುದು. ಟೂಲನ್ನನ್ನು ಸ್ವಾಧೀನಪಡಿಸಿಕೊಂಡೆವು' ಎಂದು ನುಡಿದನು. ಅಂದಿನ ಆ ಅಗ್ನಿವರ್ಷ, ಜನಗಳ ರೋದನ, ರಕ್ತಪ್ರವಾಹದೊಂದಿಗೆ ಕೂಡಿದ ಆ ಭಯಂಕರ ದೃಶ್ಯ ಇವು ನೆಪೋಲಿಯನ್ನನು ತನ್ನ ಜೀವಿತಕಾಲದಲ್ಲಿ ಮಾಡಿದ ಇತರ ಯಾವ ಯುದ್ಧದಲ್ಲೂ ಕಂಡುಬಂದುದಿಲ್ಲವೆಂದು ಸ್ಕಾಟ್ ಎಂಬೊಬ್ಬ ಐತಿಹಾಸಿಕನು ಹೇಳಿದ್ದಾನೆ.

ಕೋಟೆಯು ಸ್ವಾಧೀನವಾದಮೇಲೆ ಶತ್ರುಗಳಕೈಗೆ ಸಿಕ್ಕ ಆ ರಾಜಪಕ್ಷೀಯರ ದುರ್ಗತಿಯನ್ನು ವರ್ಣಿಸಲು ಶಕ್ಯವಿಲ್ಲ. ವೈರಿಗಳಾದ ಫ್ರೆಂಚ್

ಸೈನ್ಯಕ್ಕೆ ಮಿಕ್ಕ ಮದ್ದು ಗುಂಡು ಸಿಕ್ಕಬಾರದೆಂದು ಇಂಗ್ಲಿಷ್ ಸೈನ್ಯದವರು ಎಲ್ಲವನ್ನೂ ಒಂದೆಡೆಯಲ್ಲಿ ಸೇರಿಸಿ ಅದಕ್ಕೆ ಬೆಂಕಿಯನ್ನು ತೋರಿಸಲು, ಅದು ಭಯಂಕರ ಶಬ್ದದಿಂದ ಸ್ಫೋಟವಾಗಿ ಸಹಸ್ರಾರು ಜನಗಳನ್ನು ಭಸ್ಮಗೊಳಿಸಿತು. ಇಂಗ್ಲಿಷ್ ಸೈನ್ಯದವರು ಕೋಟೆಯನ್ನು ಬಿಟ್ಟು ಹೊರಟುಹೋಗುವಾಗ ಯುದ್ಧನಾವೆಗಳನ್ನೆಲ್ಲಾ ಒಂದುಗೂಡಿಸಿ, ಅವುಗಳ ಮಧ್ಯದಲ್ಲಿ ಮದ್ದು ಗುಂಡುಗಳಿಂದ ತುಂಬಿದ ಒಂದು ಹಡಗನ್ನು ನಡೆಯಿಸಿ ಅದಕ್ಕೆ ಬೆಂಕಿಯಿಟ್ಟರು. ಒಡನೆ ಆ ಎಲ್ಲಾ ಹಡಗುಗಳೂ ಹೊತ್ತಿಕೊಂಡು ರಾತ್ರಿಯನ್ನು ಹಗಲೆನ್ನಿಸುವಂತೆ ಉರಿದುಹೋದುವು. ಕೋಟೆಯನ್ನು ಸ್ವಾಧೀನಪಡಿಸಿಕೊಂಡ ಫ್ರೆಂಚ್ ಸೈನ್ಯವು ರಾಜಪಕ್ಷೀಯರನೇಕರನ್ನು ದೇಶದ್ರೋಹಿಗಳೆಂದು ಫಿರಂಗಿಯ ಬಾಯಿಗೆ ಕಟ್ಟಿಸಿ ಕೊಂದರು. ಅವರ ಮನೆಮಾರು ಆಸ್ತಿ ವಸ್ತ್ರ ಒಡವೆಗಳು ನಾಶವಾಗಿ ಹೋದವು. ಸ್ತ್ರೀಯರ ಮಾನ ಮರ್ಯಾದೆಗಳು ಭ್ರಷ್ಟವಾದುವು. ಇಂತಹ ಭಯಂಕರ ಪರಿಸ್ಥಿತಿಯಲ್ಲೂ ನೆಪೋಲಿಯನ್ನನು ತನಗೆ ಸಹಜವಾದ ದಯೆ-ಮಮತೆಗಳಿಂದ ಅನಾವಶ್ಯಕವಾಗಿ ಉಂಟಾಗುತ್ತಿದ್ದ ಜನಹತ್ಯೆಯನ್ನು ತಪ್ಪಿಸುವುದಕ್ಕಾಗಿ ಎಷ್ಟೋ ಪ್ರಯತ್ನ ಮಾಡಿದನು. ತನ್ನ ಯತ್ನಕ್ಕೂ ಮೀರಿದ ಕಾರ್ಯಗಳ ವಿಷಯದಲ್ಲಿ - 'ನಾನು ಆ ಅಮಾನುಷ ಕೃತ್ಯಗಳನ್ನು ನೋಡಿ, ಪ್ರಪಂಚದ ಅಂತ್ಯದೆಶೆಯು ಸಮೀಪಿಸುತ್ತಿದೆಯೆಂದುಕೊಂಡೆನು' ಎಂದು ನುಡಿದಿದ್ದಾನೆ.

ಟುಲಾನ್ ಮುತ್ತಿಗೆಯು ಮುಗಿದ ತರುವಾಯ ನೆಪೋಲಿಯನ್ನನು, ಜನರಲ್ ಡ್ಯೂಗೊಮ್ಮಿಯರ್ ಒಂದಿಗೆ ಮಾರ್ಸೆಲ್ಸ್ ಪಟ್ಟಣಕ್ಕೆ ಹೋದನು. ಅಲ್ಲಿ ಒಬ್ಬಾತನು, ಆತನ ಸ್ತ್ರೀ ವರ್ಚಸ್ಸನ್ನು ನೋಡಿ,-'ಈ ಚಿಕ್ಕ ಅಧಿಕಾರಿಯನ್ನು ಎಲ್ಲಿ ಸಂಪಾದಿಸಿದಿರಿ' ಎಂದು ಜನರಲ್ ದೊರೆಯನ್ನು ಕೇಳಿದನು. ಅದಕ್ಕಾತನು-'ಈ ಉದ್ಯೋಗಸ್ಥನ ಹೆಸರು ನೆಪೋಲಿಯನ್ ಬೋನಪಾರ್ಟ್ ಎಂದು. ಟುಲಾನ್ ಮುತ್ತಿಗೆಯಲ್ಲಿ ಈತನನ್ನು ಸಂಪಾದಿಸಿದೆನು. ಆ ಯುದ್ಧದ ಜಯಕ್ಕೆ ಈತನೇ ಮುಖ್ಯ ಕಾರಣನು. ಒಂದಾನೊಂದು ದಿನ ಈ ಚಿಕ್ಕವನು ನಮ್ಮಿಬ್ಬರಿಗಿಂತಲೂ ದೊಡ್ಡವನಾಗುವುದನ್ನು ನೋಡಬಹುದು' ಎಂದು ಪ್ರತ್ಯುತ್ತರಕೊಟ್ಟನು. ಉದ್ಯೋಗ ಪ್ರಾರಂಭದ ದಿನಗಳಲ್ಲೇ ನೆಪೋಲಿಯನ್ನನ ಪ್ರತಿಭೆಯು ಅಷ್ಟುಮಟ್ಟಿನದಾಗಿದ್ದಿತು.

## ಅಧ್ಯಾಯ ೩ "ಅನಭಿಷಿಕ್ತ ರಾಜ್ಯಾಧಿಪತ್ಯ"

ಟೂಲೋ ಯುದ್ಧದಲ್ಲಿ ಪ್ರಾಪ್ತವಾದ ಜಯವು ನೆಪೋಲಿಯನ್ನನ ಮುಂದಿನ ಅಭಿವೃದ್ಧಿಗಳಿಗೆಲ್ಲ ಮೂಲಾಧಾರವಾಯಿತು. ಪ್ಯಾರಿಸ್ ರಾಜಧಾನಿಯ ನಿವಾಸಿಗಳು, ಆತನ ಯುದ್ಧಕಲಾನೈಪುಣ್ಯ, ಕುಶಾಗ್ರಬುದ್ಧಿ, ಅತುಲ ಪರಾಕ್ರಮ, ಅಚಲಧೈರ್ಯ, ಕಷ್ಟಸಹಿಷ್ಣುತಾ, ಉದ್ಯೋಗತತ್ಪರತೆ ಮುಂತಾದ ಸದ್ಗುಣಗಳನ್ನು ಕಂಡು, ಬಹುವಾಗಿ ಮೆಚ್ಚಿಕೊಂಡರು. ಫ್ರಾನ್ಸಿನ ದಕ್ಷಿಣಭಾಗದ ತೀರಪ್ರದೇಶವನ್ನು ಶತ್ರುಗಳ ಹಾವಳಿಯಿಂದ ರಕ್ಷಿಸುವುದಕ್ಕಾಗಿ ಅದನ್ನು ಕೋಟೆ ಕೊತ್ತಲುಗಳಿಂದ ಭದ್ರಪಡಿಸುವುದೂ ಅಲ್ಲಲ್ಲಿ ಬಂದರುಗಳನ್ನು ಏರ್ಪಡಿಸಿ ಯುದ್ಧನಾವೆ ಮುಂತಾದುವುಗಳನ್ನಿಟ್ಟು ಸಿದ್ಧಪಡಿಸುವುದೂ ಆವಶ್ಯಕವಾಗಿದ್ದಿತು. ಪ್ರಭುತ್ವದ ಆಜ್ಞೆಯಿಂದ ನೆಪೋಲಿಯನನು ಆ ಕಾರ್ಯನಿರ್ವಾಹಕ್ಕೆ ನಿಯಮಿತನಾಗಿ, ರಾತ್ರಿಯೆನ್ನದೆ ಹಗಲೆನ್ನದೆ, ದೇಹದರಕ್ತವನ್ನು ಗಡ್ಡೆ ಕಟ್ಟಿಸುವಂತಹ ಚಳಿಯ ಬಾಧೆಯನ್ನೂ ಲಕ್ಷ್ಯ ಮಾಡದೆ ಆತನು ಆ ಭಾಗದಲ್ಲಿ ಅಲ್ಲಲ್ಲಿದ್ದ ಸಮುದ್ರಭಾಗಗಳು, ಚಿಕ್ಕದೊಡ್ಡ ಬೆಟ್ಟಗಳು, ಬಂದರುಗಳಾಗಲು ಯೋಗ್ಯವಾದ ಸ್ಥಳಗಳು ಮುಂತಾದುವುಗಳನ್ನು ಕಂಡು ಹಿಡಿಯಲು ಅವಿಶ್ರಾಂತ ಕಷ್ಟಪಟ್ಟು ಆ ಪ್ರಾಂತವನ್ನೆಲ್ಲ ಪರಿಶೋಧಿಸಿದನು. ಎಲ್ಲಿ ಎಂತಹ ಕದಾನ್ನ ದೊರೆತರೂ ತಿಂದು, ಎಲ್ಲಿಂದರಲ್ಲಿ ಒಂದೆರಡು ಗಂಟೆಗಳ ಕಾಲ ಮೈಮೇಲಿನ ಮೇಲ್ಹೊದಿಕೆಯನ್ನೇ ಸುತ್ತಿಕೊಂಡು ಮಲಗಿ ನಿದ್ರಿಸಿ, ಎಚ್ಚೆತ್ತ ಒಡನೆಯೇ ಪುನಃ ಕಾರ್ಯವನ್ನು ಕೈಕೊಳ್ಳುತ್ತಾ ಹೀಗೆ ಇತರ ಅಧಿಕಾರಿಗಳು ವರ್ಷಾನುಗಟ್ಟಲೆಯಾಗಿ ಮಾಡುವಂತಹ ಕಾರ್ಯವನ್ನು ಎರಡು ಮೂರು ವಾರಗಳಲ್ಲೇ ಸರ್ವ ಸಮರ್ಪಕವಾಗಿ ಮುಗಿಸಿ, ತರುವಾಯ ನೈಸ್ ಎಂಬ ಪಟ್ಟಣದ ಸಮೀಪದಲ್ಲಿದ್ದ ಫ್ರೆಂಚ್ ಸೈನ್ಯವನ್ನು ಸೇರಿಕೊಂಡನು.

ಕೇವಲ ಇಪ್ಪತ್ನಾಲ್ಕು ವಯಸ್ಸಿನ ಮಧ್ಯಪ್ರಾಯದ ಆ ವೀರನು, ಆಹಾರದಲ್ಲಾಗಲೀ, ವಿಹಾರದಲ್ಲಾಗಲೀ ಲೇಶಮಾತ್ರವೂ ಆಡಂಬರವಿಲ್ಲದೆ, ಉತ್ತಮವಾದ ವಸ್ತ್ರಗಳಿಗಾಗಲಿ ಬೂಟುಗಳಿಗಾಗಲಿ ಸುರಸುಂದರಿಯರಂತೆ ಪ್ರಕಾಶಿಸುತ್ತಿದ್ದ ಬೆರಗುಗಾತಿಯರಾದ ಸ್ತ್ರೀಯರ ಚೆಲುವಿಕೆ ಒಲುಪು

ಒಯ್ಯಾರಗಳಿಗಾಗಲಿ ಮರುಳಾಗದೆ, ಸುಖಾಪೇಕ್ಷಾರಹಿತನಾಗಿ, ಸಾಮಾನ್ಯ
ವಾದ ಆಹಾರ ಬಟ್ಟೆಬರೆಗಳಿಂದಲೇ ತೃಪ್ತನಾಗಿ, ಸದಾ ಕಾರ್ಯತತ್ಪರನಾಗಿ
ರುತ್ತಿದ್ದನು. ಅವನು ನೈಸ್ ಪಟ್ಟಣದ ಬಳಿಯ ಸೈನ್ಯವನ್ನು ಸೇರಿಕೊಂಡಾ
ಗ, ಆ ಸೈನ್ಯವು ಆಸ್ಟ್ರಿಯಾ ಸಾರ್ಡಿನಿಯಾ ರಾಜರ ಸೈನ್ಯಗಳವರಿಂದ ಮು
ತ್ತಲ್ಪಟ್ಟು, ಬಿಡಿಸಿಕೊಳ್ಳುವ ಮಾರ್ಗವರಿಯದೆ, ದಿಕ್ಕುತೋರದೆ ಕುಳಿತಿತ್ತು.
ನೆಪೋಲಿಯನನು ಆ ಪರಿಸ್ಥಿತಿಯನ್ನು ಕಂಡು, ವಿಶ್ರಾಂತಿಗಾಗಲೀ, ಒಂದೆರ
ಡು ಗಂಟೆಗಳನ್ನು ವಿನಿಯೋಗಿಸದೆ, ಉಭಯ ಸೈನ್ಯಗಳ ಪರಿಮಿತಿ, ಅವರ
ವರ ಸ್ಥಾನಗಳು, ರಕ್ಷಕಸ್ಥಾನಗಳು, ಯುದ್ಧ ಸಾಮಗ್ರಿಗಳು ಮುಂತಾದುವುಗ
ಳನ್ನು ವಿಚಾರಿಸಿಕೊಂಡು, ಎಲ್ಲೆಲ್ಲಿ ನದಿಗಳು, ಬೆಟ್ಟಗಳು, ಮೈದಾನಗಳು
ಇವೆಯೆಂಬುದನ್ನು ಪಠವನ್ನು ನೋಡಿ ನಿರ್ಧರಿಸಿಕೊಂಡು, ಒಡನೆ ಯುದ್ಧ
ಸಭೆಯೊಂದನ್ನು ಸೇರಿಸಿ, ತಮ್ಮ ಸೈನ್ಯವು ಮೂರುಭಾಗವಾಗಿ ಶತ್ರುಸೈನ್ಯ
ವನ್ನು ಎದುರಿಸಬೇಕೆಂದು ಸಲಹೆಯಿತ್ತು, ಎಲ್ಲರನ್ನೂ ಒಪ್ಪಿಸಿದನು.
ಕಮ್ಯಾಂಡರ್ ಇನ್‌ಚೀಫ್ ಮುಂತಾಗಿ ಆ ಚಿಕ್ಕ ವಯಸ್ಸಿನ ಅಧಿಕಾರಿಯ
ಯುಕ್ತಿಸಾಮರ್ಥ್ಯಗಳಿಗಾಗಿ ತಲೆದೂಗಿ ಆತನ ಸಲಹೆಯಂತೆಯೇ ನಡೆಯ
ಲು ಸಮ್ಮತಿಸಿದರು. ಒಂದೇಕಡೆಯಲ್ಲಿ ಕುಳಿತು, ತೂಕಡಿಸಿ ಬೇಸತ್ತಿದ್ದ
ಸೈನಿಕರು ತೇಜಸ್ವಿಯಾದ ಆ ಅಧಿಕಾರಿಯನ್ನೂ ಆತನ ಚಟುವಟಿಕೆಯ
ನ್ನೂ ಕಂಡು ಅತ್ಯುತ್ಸಾಹದಿಂದ, ಆತನು ಏನು ಹೇಳಿದರೆ ಆ ಕಾರ್ಯ
ಮಾಡಲು ಸಿದ್ಧರಾದರು. ಅವರ ಉತ್ಸಾಹದ ಕೋಲಾಹಲಕ್ಕೇ ಆಸ್ಟ್ರಿ
ಯಾ ಮುಂತಾದ ಶತ್ರುಸೈನ್ಯಗಳು ಭಯಗೊಂಡು ಚಲಿಸತೊಡಗಿದುವು.
ಫ್ರೆಂಚ್ ಸೈನ್ಯವು ಮೇಲ್ಕಂಡ ಸಲಹೆಯಂತೆ ಮೂರುಭಾಗವಾಗಿ ಶತ್ರುಸೈ
ನ್ಯದಮೇಲೆ ಹೊರಟ ಒಡನೆಯೇ, ಆ ವಿಜೃಂಭಣೆಗೇ ಭಯಗೊಂಡು ಅವು
ಪಲಾಯನವಾದವು. ಬಹು ಸುಲಭವಾಗಿಯೇ ಆದ ಆ ಜಯಪ್ರಾಪ್ತಿ
ಗಾಗಿ, ಫ್ರೆಂಚ್ ಸೈನ್ಯದ ಅಧಿಕಾರಿಗಳು ಹಿಗ್ಗಿ, ಸಂತೋಷ ಕೂಟ ಆಟಪಾ
ಟಗಳಲ್ಲಿ ಮಗ್ನರಾಗಿರ ತೊಡಗಿದ್ದಾಗ, ನೆಪೋಲಿಯನನು, ಆ ಹೊಸ ಪ್ರಾಂ
ತಗಳನ್ನು ಪರಿಚಯಮಾಡಿಕೊಳ್ಳುವುದರಲ್ಲೂ ಸೈನ್ಯಗಳಿಗೆ ಬೇಕಾದ ವಸ್ತು
ಸಾಮಗ್ರಿಗಳನ್ನು ಸಿದ್ಧಗೊಳಿಸುವ ಕಾರ್ಯದಲ್ಲೂ ಮಗ್ನನಾಗಿದ್ದನು.

ಅತಿಶಯ ಶ್ರದ್ಧಾವಂತನಾಗಿ, ನೆಪೋಲಿಯನನು ಕಾರ್ಯತತ್ಪರನಾಗಿದ್ದನಾದರೂ, ಪ್ರಭುತ್ವದವರು ಒಂದಾನೊಂದು ಕ್ಷುದ್ರಕಾರಣವನ್ನು ಮಹತ್ತನ್ನಾಗಿ ಕೈಕೊಂಡು ಆತನನ್ನು ಸೆರೆಹಿಡಿಸಿ, ಹದಿನೈದು ದಿನಗಳು ಸೆರೆಯಲ್ಲಿಟ್ಟರು. ತರುವಾಯ ತಪ್ಪು ಆತನದಲ್ಲವೆಂದು ತೀರ್ಮಾನವಾಗಲು ಅಶ್ವದಳದ ಬ್ರಿಗೇಡಿಯರ್‌ಜನರಲ್ ಅಧಿಕಾರದಿಂದ ತಗ್ಗಿಸಿ ಪದಾತಿ ಸೈನ್ಯದ ಅಧಿಕಾರಕ್ಕೆ ವರ್ಗಾಯಿಸಿದರು. ಆ ಅಪಮಾನವನ್ನು ಸಹಿಸಲಾರದೆ ಆ ಮಾನಧನನು, ತನ್ನ ಉದ್ಯೋಗಕ್ಕೆ ರಾಜೀನಾಮೆಯನ್ನು ಕೊಟ್ಟು, ಮಾರ್ಸೇಲ್ಸ್ ಪಟ್ಟಣದಲ್ಲಿದ್ದುಕೊಂಡು, ಆಗಿನ ದೇಶಪರಿಸ್ಥಿತಿಗಳನ್ನು ಗಮನಿಸುತ್ತಾ ಇದ್ದನು. ಬರುತ್ತ ಬರುತ್ತ ಕೈಯಲ್ಲಿದ್ದ ದ್ರವ್ಯವೆಲ್ಲ ಖರ್ಚಾಗಿ ಹೋಗಿ ಬಹುತಾಪತ್ರಯಕ್ಕಿಟ್ಟಿತು. ಅತ್ತ ತಾಯಿ ತಂಗಿಯರು ಜೀವನಕ್ಕಿಲ್ಲದೆ ಬಹು ಕಷ್ಟಕ್ಕೊಳಗಾಗಿದ್ದರು. ಮಹಾ ಧೀರನಾಗಿದ್ದರೂ, ಆತನಿಗೆ ದಾರಿದ್ರ್ಯವ್ಯಾಧಿಯಿಂದ ಮುಂತೋರದಂತಾಯಿತು. ಉದ್ಯೋಗ ಸಂಪಾದನೆಗಾಗಿ ಟರ್ಕೀದೇಶಕ್ಕಾದರೂ ಹೋಗೋಣವೇ ಎಂಬ ಯೋಚನೆ ಬಂತು. ಏನು ಮಾಡಲೂ ತೋರದೆ, ತಾನು ಆ ಸಂದರ್ಭದಲ್ಲಿ ಸಮೀಪದಲ್ಲೇ ಪ್ರವಹಿಸುತ್ತಿದ್ದ ಶೀನ್ ನದಿಯಲ್ಲಿ ಬಿದ್ದು ಆತ್ಮಹತ್ಯಮಾಡಿಕೊಳ್ಳಬೇಕೆಂಬ ಚಿಂತೆಯಲ್ಲಿದ್ದೆನೆಂದೂ, ಅಷ್ಟರಲ್ಲಿ, ಡೆಮಶಿನ್ ಎಂಬೊಬ್ಬ ಮನುಷ್ಯನು ಅಕಸ್ಮಾತ್ತಾಗಿ ಸಂಧಿಸಿ, ತನ್ನ ಆಗಿನ ಸ್ಥಿತಿಯನ್ನು ವಿಚಾರಿಸಿ, ಆರುಸಾವಿರ ಫ್ರಾಂಕುಗಳಿಂದ ತುಂಬಿದ ಒಂದು ಚೀಲವನ್ನು ತನ್ನ ಕೈಗಿತ್ತು ಪ್ರಾಣರಕ್ಷಣೆಮಾಡಿದನೆಂದೂ, ತರುವಾಯ ಹದಿನೈದು ವರ್ಷಗಳಾದಮೇಲೆ ತನಗೆ ಚಕ್ರವರ್ತಿ ಪದವಿಯು ದೊರೆತಾಗ, ಆತನನ್ನು ಕರೆಸಿ ವರ್ಷವೊಂದಕ್ಕೆ ಆರುಸಾವಿರ ಡಾಲರುಗಳ ಸಂಬಳವಿದ್ದ ರಾಜೋದ್ಯಾನದ ಮೇಲ್ವಿಚಾರಣೆಯ ಅಧಿಕಾರವನ್ನು ಆತನಿಗೆ ಕೊಟ್ಟೆನೆಂದೂ, ಸೆಂಟ್‌ಹೆಲೀನಾದಲ್ಲಿ ಕೈದಿಯಾಗಿದ್ದಾಗ ಹೇಳಿಕೊಂಡನು.

ನೆಪೋಲಿಯನನು ಉದ್ಯೋಗದಿಂದ ನಿವೃತ್ತನಾದಂದಿನಿಂದ ಆಸ್ಟ್ರಿಯನ್ ಸೈನ್ಯದಿಂದ ಇಟಲಿ ಪ್ರಾಂತದಲ್ಲಿದ್ದ ಫ್ರೆಂಚ್ ಸೈನ್ಯಕ್ಕೆ ಬಹು ಕಿರುಕುಳಗಳು ಪ್ರಾಪ್ತವಾಗ ತೊಡಗಿದ್ದುವು. ಅವುಗಳ ಪರಿಹಾರಕ್ಕೆ ಉಪಾಯವೇನೆಂದು ಯಾರಿಗೂ ತೋರಿದುದಿಲ್ಲ. ಡೈರೆಕ್ಟರರು ತತ್ತರಗೊಳ್ಳಸಾಗಿ

ದರು. ಕೊನೆಗೆ ನೆಪೋಲಿಯನನಿಗೆ ಶರಣು ಬಾರದಿದ್ದರೆ ಬೇರೆ ಮಾರ್ಗ
ವಿಲ್ಲವೆಂದು ತೋರಲು, ಆ ಸಂದರ್ಭದಲ್ಲಿ ಮಾರ್ಗದರ್ಶಕನಾಗೆಂದು ಪ್ಯಾ
ರಿಸ್ ನಗರದಲ್ಲಿದ್ದ ಆತನನ್ನು ಪ್ರಾರ್ಥಿಸಿದರು. ಪ್ರಜ್ಞಾನಿಧಿಯಾದ ಆತ
ನು, ತಾನು ಇದ್ದ ಸ್ಥಳದಿಂದಲೇ, ಸೈನ್ಯಗಳನ್ನು ಹೀಗೆ ಹೀಗೆ ವಿಭಾಗಿಸಿ
ಇಂಥಿಂಥಾ ಸ್ಥಳಗಳಲ್ಲಿ ಶತ್ರುಗಳನ್ನು ಹೀಗೆ ಹೀಗೆ ಎದುರಿಸಬೇಕು ಎಂದು
ಮುಂತಾಗಿ ತಿಳಿವಳಿಕೆಗಳನ್ನು ಬರೆದು ಕಳುಹಿಸಿದನು. ಆತನ ಸಲಹೆಗಳಂ
ತೆಯೇ ಆಚರಿಸಲು ಫ್ರೆಂಚ್‌ಸೈನವು ಶತ್ರುಸೈನ್ಯವನ್ನು ಅವಲೀಲೆಯಿಂದ
ಜಯಿಸಿತು. ಈ ಆಶ್ಚರ್ಯವನ್ನೂ, ಆತನ ಪ್ರಜ್ಞಾಸಾಮರ್ಥ್ಯವನ್ನೂ
ಕಂಡು, ಮಹಾಮಹಾ ಸೈನ್ಯಾಧಿಪತಿಗಳೆಲ್ಲರೂ ಪರಮಾಶ್ಚರ್ಯ ಮಗ್ನರಾ
ದರು.

ಫ್ರೆಂಚ್ ಸೈನ್ಯವು ಆಸ್ಟ್ರಿಯನ್ ಸೈನ್ಯದಮೇಲೆ ಜಯಸಂಪಾದನೆ ಮಾ
ಡಿದ ಕಾಲದಲ್ಲಿ ನೆಪೋಲಿಯನನು ಪ್ಯಾರಿಸ್ ಪಟ್ಟಣದ ವಾಚನಾಲಯದಲ್ಲಿ
ಗ್ರಂಥಾವಲೋಕನದಲ್ಲಿ ಮಗ್ನನಾಗಿದ್ದನು. ಆ ಕಾಲದಲ್ಲೇ ನೂತನ ಸರ
ಕಾರದವರು, ಹೊಸ ರಾಜ್ಯ ಘಟನೆಯೊಂದನ್ನು ಸಿದ್ಧಗೊಳಿಸಿದರು. ರಾಷ್ಟ್ರ
ಕಾರ್ಯನಿರ್ವಾಹಕ್ಕಾಗಿ ಐದುಮಂದಿ ಡೈರೆಕ್ಟರರು ನಿಯಮಿತರಾಗಿ, ಅವರಿಗೆ
ಸಹಾಯಕವಾಗಿರಲು ಶಿಷ್ಟಮಂಡಲ, ತರುಣಮಂಡಲ ಎಂಬೆರಡು ಸಂಸ್ಥೆ
ಗಳು ನಿರ್ಮಿತವಾದುವು. ಶಿಷ್ಟಮಂಡಲದಲ್ಲಿ ನಾಲ್ವತ್ತು ವರ್ಷಕ್ಕೆ ಮೇ
ಲ್ಪಟ್ಟ-ವಿವಾಹಿತರಾಗಿದ್ದ ೨೫೦ ಮಂದಿ ಸಭಾಸದರಿರಬೇಕೆಂದೂ, ತರುಣ
ಮಂಡಲದಲ್ಲಿ ಮೂವತ್ತು ವಯಸ್ಸಿಗೆ ಕಡಮೆಯಿಲ್ಲದ ೫೦೦ ಮಂದಿ ಇರಬೇ
ಕೆಂದೂ ಏರ್ಪಾಡಾಯಿತು. ಈ ವ್ಯವಸ್ಥೆಯು ಏಕೋ ಜನಸಮ್ಮತಿಯನ್ನು
ಪಡೆಯದಿರಲು ಕಲ್ಲೋಲವೆದ್ದಿತು. ೪೦೦೦೦ ಸಶಸ್ತ್ರ ಸೈನ್ಯವು ಸಿದ್ಧವಾಗಿ
ಪ್ಯಾರಿಸ್ ಪಟ್ಟಣದಮೇಲೆ ಸಾಗಿನಡೆದು, ಅಧಿಕಾರಿವರ್ಗದವರನ್ನು ಧ್ವಂಸ
ಗೊಳಿಸಲು ಅನುವಾಯಿತು. ಡೈರೆಕ್ಟರರೂ, ಸಹಾಯಕ ಮಂಡಲಗಳವರೂ
ಹತಾಶರಾದರು. ಅವರ ಬಳಿ ಆಗ ಇದ್ದುದು ಕೇವಲ ೫೦೦೦ ಸೈನ್ಯಮಾತ್ರ.
ಅಷ್ಟು ಸ್ವಲ್ಪ ಬಲದಿಂದ, ನಾಲ್ವತ್ತು ಸಾವಿರದ ಬಂಡುಗಾರರ ದಂಡನ್ನು
ಅಡಗಿಸುವ ಮಾರ್ಗತೋರದೆ, ತಮ್ಮ ಅಂತ್ಯಕಾಲವು ಸಮೀಪಿಸಿತೆಂದುಕೊಂ
ಡರು. ಆಗ ಇದ್ದ ಸೈನ್ಯಾಧಿಕಾರಿಗೆ ಬದಲು ಮತ್ತೊಬ್ಬನನ್ನು ನಿಯಮಿ

ಸಿದರು. ಅವನೂ ಆ ಕಾರ್ಯವು ಅಸಾಧ್ಯವೆಂದು ಹಿಂದಿರುಗಿದನು. ಆಗ ಒಬ್ಬನೊಬ್ಬ ವೃದ್ಧ ಸೈನ್ಯಾಧಿಪನು, ಈ ಸಂದರ್ಭದಲ್ಲಿ ನೆಪೋಲಿಯನ್ ಬೋನಪಾರ್ಟನೇ ಈ ಅಪಾಯವನ್ನು ತಪ್ಪಿಸಲು ಶಕ್ತನು ಎಂದು ಸಲಹೆಯಿತ್ತನು. ಆ ವೇಳೆಯಲ್ಲಿ ಅಲ್ಲಿ ನೆರೆದಿದ್ದವರೊಳಗೇ ಆತನೂ ಇದ್ದನು. ಆತನನ್ನು ಗುರ್ತಿಸಿ, ಈ ಕಾರ್ಯವು ನಿನ್ನಿಂದ ಸಾಧ್ಯವೇ ಎಂದು ಡೈರೆಕ್ಟರರು ಕೇಳಲು,-'ಸಾಧ್ಯ, ನಿಶ್ಚಯವಾಗಿ ಸಾಧ್ಯ' ಎಂದು ಆ ಧೀರನು ದೃಢವಾಣಿಯಿಂದ ನುಡಿದನು. ಕೇವಲ ಹದಿನೆಂಟು ವರ್ಷದ ಹುಡುಗನಂತೆ ತೋರುತ್ತಿದ್ದ ಆತನು ಆ ಕೆಲಸ ಮಾಡಬಲ್ಲನೇ ಎಂದು ಎಲ್ಲರೂ ಸಂದೇಹಿಸಿದ್ದರು. ಕೊನೆಗೆ ಆ ಕಾರ್ಯವು ನೆಪೋಲಿಯನನಿಗೇ ವಹಿಸಲ್ಪಟ್ಟಿತು. ಆತನು ಒಡನೆ ಕಾರ್ಯತತ್ಪರನಾಗಿ, ತೋಪುಖಾನೆಯನ್ನು ಏರ್ಪಡಿಸಿ ಒಂದು ಕ್ಷಣವೂ ವಿರಾಮವಿಲ್ಲದಂತೆ ಫಿರಂಗಿ ಮುಂತಾದುವುಗಳನ್ನು ತರಿಸಿ ದಕ್ಷತೆಯಿಂದ ಸಕಲವನ್ನೂ ಸಿದ್ಧಗೊಳಿಸಿಟ್ಟನು. ಬೆಳಗಾದರೆ ತಮ್ಮ ಗತಿಯೇನಾಗುವುದೋ ಎಂದು ಡೈರೆಕ್ಟರರು ಮೃತ್ಯುವನ್ನೆದುರುನೋಡುತ್ತಾ ಸಭೆಮನೆಯಲ್ಲಿ ಕುಳಿತಿರಲು, ದಂಗೆಗಾರರು ದಶಸಹಸ್ರ ಸಂಖ್ಯೆಯಿಂದ ಅವರನ್ನು ಸುತ್ತುಗಟ್ಟಿಕೊಂಡಿರಲು, ನೆಪೋಲಿಯನನು ಅವರಮೇಲೆ ಗುಂಡಿನ ಮಳೆಯನ್ನು ಸುರಿಸತೊಡಗಿದನು. ಆಕಸ್ಮಾತ್ತಾಗಿ ತಮ್ಮ ಮೇಲೆ ಸುರಿಯತೊಡಗಿದ ಅಗ್ನಿವರ್ಷದಿಂದ ಭಯಗೊಂಡು ದಂಗೆಗಾರರು ಚದರಿ ಎಲ್ಲಿಯುವರಲ್ಲೇ ಪಲಾಯನವಾದರು. ನೆಪೋಲಿಯನನಿಗೆ ಒಂದು ರಾತ್ರೆಯಲ್ಲೇ ವಿಜಯಸಂಪಾದನೆಯಾಗಿ, ಆತನ ಯುಕ್ತಿ ಚಾತುರ್ಯ ಧೈರ್ಯ ಸ್ಥೈರ್ಯಗಳನ್ನು ಪ್ಯಾರಿಸ್‌ನಗರವೇ ಕೀರ್ತಿಸತೊಡಗಿತು. ಸುಪ್ರೀತರಾದ ಡೈರೆಕ್ಟರರು, ಒಡನೆ ಆತನಿಗೆ ಸೈನ್ಯಾಧಿಪತ್ಯವನ್ನೂ ಪ್ಯಾರಿಸ್ ನಗರದ ಸಂರಕ್ಷಣಾಭಾರವನ್ನೂ ವಹಿಸಿದರು.

ದಂಗೆಗಾರರ ಹಾವಳಿ ಮತ್ತು ಅವರನ್ನಡಗಿಸಲು ಯತ್ನಿಸುತ್ತಿದ್ದ ಸೈನಿಕರ ಕೆಲಸ ಕಾರ್ಯಗಳು ಇವುಗಳಿಂದ ಪ್ಯಾರಿಸ್ ಪಟ್ಟಣದ ವಾಸವು ಪ್ರಜೆಗಳಿಗೆ ನರಕವಾಸವಾಗಿ ಪರಿಣಮಿಸಿತು. ಬಡಜನಗಳ ಗೋಳು ಮುಗಿಲುಮುಟ್ಟಿತು. ನಮ್ಮ ಕಥಾನಾಯಕನಿಗೆ ನಗರ ಪರಿಪಾಲನಾಧಿಕಾರವು ದೊರೆತೊಡನೆಯೇ ಆತನು, ಬಡಜನಗಳು ಪಡುತ್ತಿದ್ದ ಅಸಹ್ಯ ಕಷ್ಟಗಳ

ಗಾಗಿ ಮರುಗಿ ಅವರಿಗೆ ತಾನೇ ಅನ್ನ ನೀರುಗಳೊದಗಲು ಅನುಕೂಲಗೊ ಳಿಸಿ, ನಿಲ್ಲಲು ನೆರಳಿಲ್ಲದೆ ತಪಿಸುತ್ತಿದ್ದವರಿಗೆ ಮನೆಮಠಗಳನ್ನೊದಗಿಸಿ, ಚಳಿ ಯಿಂದ ಹಲ್ಗಿರಿದು ಪ್ರಾಣಬಿಡುತ್ತಿದ್ದ ಸಾವಿರಾರು ಮಂದಿಗೆ ವಸ್ತ್ರಾದಿಗಳ ನ್ನೊದಗಿಸಿ, ಸಕಲರ ಕೃತಜ್ಞತೆಗೂ ಪಾತ್ರನಾದನು. ನೆಪೋಲಿಯನ ದಯಾಗುಣ, ಆತನ ಮೃದುಭಾಷಣ, ಧೈರ್ಯ ಸ್ಥೈರ್ಯಗಳು, ಔದಾ ರ್ಯ, ಪರೋಪಕಾರಬುದ್ಧಿ, ತೀಕ್ಷ್ಣಮತಿ, ನಿರಲಸಿಕೆ ಮುಂತಾದ ಸುಗುಣ ಗಳ ಹೊಗಳಿಕೆಯು ಪ್ಯಾರಿಸ್ ಪಟ್ಟಣದಲ್ಲಿ ಪ್ರತಿಮನೆಯ ಮಾತಾಯಿತು.

ಸುಗುಣನಿಧಿಯೂ, ಸೌಂದರ್ಯಶಾಲಿಯೂ ಧೈರ್ಯೌದಾರ್ಯಗುಣ ವಿಶಿಷ್ಟನೂ, ತೇಜಸ್ವಿಯೂ ಆದ ನೆಪೋಲಿಯನ ಪಾಣಿಗ್ರಹಣಮಾಡಿ, ಆತನೊಡನೆ ಅಂಗಸಂಗವನ್ನು ಹೊಂದಬೇಕೆಂದು ಪ್ಯಾರಿಸ್ ನಗರದ ಸುಂ ದರಿಯರಲ್ಲಿ ಅನೇಕರು ಹಂಬಲಿಸಿದ್ದರು. ಆದರೆ ಜಿತೇಂದ್ರಿಯನೂ ನಾರೀ ಜನ ಸಹೋದರನೂ ಆದ ಆತನು ಯಾರ ಸೌಂದರ್ಯಕ್ಕೂ ಬೆಡಗು ಬಿನ್ನಾ ಣಗಳಿಗೂ ಮರುಳಾಗಲಿಲ್ಲ. ಆತನು ಪ್ಯಾರಿಸ್ ನಗರಾಧಿಪತಿಯ ಪದವಿ ಯಲ್ಲಿದ್ದಾಗ ಒಂದು ದಿನ ಒಂದು ಸಂದರ್ಭ ಒದಗಿತು. ದಂಗೆಯನ್ನು ಅಣಗಿಸುವ ಕಾಲದಲ್ಲಿ ಪಟ್ಟಣಿಗರ ಆಯುಧಗಳನ್ನೆಲ್ಲ ಅವರಿಂದ ಕಸಿದು ನಗರಾಧಿಪತಿಯು ತನ್ನ ಸ್ವಾಧೀನದಲ್ಲಿರಿಸಿಕೊಂಡಿದ್ದನು. ದಂಗೆಯಣಗಿದ ತರುವಾಯ ಕೆಲವು ದಿನಗಳು ಕಳೆದು ನಗರದಲ್ಲಿ ಶಾಂತತೆಯುಂಟಾಗಿರಲಾ ಗಿ, ಒಂದುದಿನ ಒಬ್ಬ ಚಿಕ್ಕವಯಸ್ಸಿನ ಬಾಲಕನು, ನೆಪೋಲಿಯನ ಬಳಿಗೆ ಬಂದು, ತನ್ನ ತಂದೆಯ ಕತ್ತಿಯನ್ನು ತನಗೆ ಕೊಡಿಸಬೇಕೆಂದು ಆತನನ್ನು ಬೇಡಿದನು. ನೆಪೋಲಿಯನು ಆ ಬಾಲಕನ ಮುಖವರ್ಚಸ್ಸು, ನಯನು ಡಿಗಳು, ವಿಧೇಯತೆ, ಹಸನ್ಮುಖ, ಮೃದುವಾಕ್ಯ, ಗಾಂಭೀರ್ಯ ಮುಂತಾ ದುವುಗಳಿಗಾಗಿ ಮೆಚ್ಚಿಕೊಂಡು, 'ಬಾಹರ್‌ನೆಸ್' ಎಂದು ಹೆಸರು ಕೆತ್ತಿದ್ದ ಆ ಬಾಲಕನ ತಂದೆಯ ಕತ್ತಿಯನ್ನು ತರಿಸಿ ಅವನಿಗೆ ಸ್ವಹಸ್ತಗಳಿಂದ ಒಪ್ಪಿ ಸಿದನು. ಅದನ್ನು ಪಡೆದ ಆ ಬಾಲಕನು ಅದನ್ನೆತ್ತಿ ತನ್ನ ಎದೆಗೆ ಅಪ್ಪಿಕೊಂ ಡು ಮುತ್ತಿಟ್ಟು, ನೆಪೋಲಿಯನಿಗೆ ಕೃತಜ್ಞತಾಪೂರ್ವಕ ವಂದನೆಗಳನ್ನ ರ್ಪಿಸಿ ಹೊರಟುಹೋದನು. ಆ ಬಾಲಕನ ಸದ್ಗುಣಗಳು ನೆಪೋಲಿಯನನ್ನು ಮುಗ್ಧನನ್ನಾಗಿ ಮಾಡಿದುವು. ಅವನಲ್ಲಿ ಅಷ್ಟುಮಟ್ಟಿನ ಸುಗುಣಸಂಪದವು

ನೆಲೆಗೊಳ್ಳಲು ಅವನ ತಾಯಿಯೇ ಕಾರಣಗಳಾಗಿರಬೇಕೆಂದು ಊಹಿಸಿ ಆಕೆಯನ್ನೂ ಮನಸಾವಂದಿಸಿದನು. ನಗರಾಧಿಪತಿಯು ತನ್ನ ಮಗನ ವಿಷಯದಲ್ಲಿ ಪ್ರಕಟಗೊಳಿಸಿದ ದಯ ಔದಾರ್ಯಾದಿಗಳು ಆ ಬಾಲಕನ ಮಾತೆಗೆ ಪರಮ ಸಂತೋಷವನ್ನುಂಟುಮಾಡಲು, ಆತನನ್ನು ಪ್ರತ್ಯಕ್ಷ ಸಂದರ್ಶಿಸಿ, ತನ್ನ ಕೃತಜ್ಞತೆಯನ್ನು ಪ್ರಕಟಗೊಳಿಸಬೇಕೆಂದು ಆಕೆಯು ಮಗನೊಂದಿಗೆ ಬಂದು ನೆಪೋಲಿಯನನನ್ನು ಕಂಡು ವಂದಿಸಿದಳು. ಆ ಊರಿನ ನಾಗರಿಕರು ಸರ್ವಸಾಮಾನ್ಯವಾಗಿ ಸೇರುತ್ತಿದ್ದ ಸಂತೋಷಕೂಟಗಳಲ್ಲಿ ಅನೇಕವೇಳೆ ಆಕೆಯನ್ನು ಆವರೆಗೆ ನೋಡಿದ್ದನಾದರೂ, ನೆಪೋಲಿಯನನು ಅಂದು ಆಕೆಯನ್ನು ಮಮತಾ ಪೂರ್ಣದೃಷ್ಟಿಯಿಂದ ನೋಡಿ, ಪ್ರೇಮದಿಂದ ಸಂಭಾಷಿಸಿದನು. ತರುವಾಯ ಗುಣಲುಬ್ಧನಾದ ಆತನು ಆಕೆಯನ್ನು ಅಭಿನಂದಿಸಲು ಆಕೆಯ ಮನೆಗೆ ಹೋದನು. ಹೀಗೆ ಅವರಿಬ್ಬರೂ ಪರಸ್ಪರರ ಗುಣನಡತೆಗಳು, ವಿನಯ ಗಾಂಭೀರ್ಯಗಳು, ಸೌಂದರ್ಯಸೌಕುಮಾರ್ಯಗಳು ಮುಂತಾದುವುಗಳಿಂದ ಆಕರ್ಷಿತರಾದರು. ಜೋಸೆಫಯಿನ್ ಎಂಬಾನಾರೀಮಣಿಯು, ಮೇಲೆಹೇಳಿದ ಬಾಹರ್‌ನೆಸ್ ಎಂಬ ಶ್ರೀಮಂತನ ವಿಧವೆಯಾಗಿದ್ದಳು. ಆದರೂ ಆಗಿನ ದೇಶಪದ್ಧತಿಯಂತೆ, ಅವರು ವಿವಾಹಿತರಾಗಲು ಯಾವ ಪ್ರತಿಬಂಧಕವೂ ಇರಲಿಲ್ಲ. ಅಲ್ಲದೆ, ಚರ್ಚ್ ಮಠ ಮುಂತಾದ ಧರ್ಮಸಂಸ್ಥೆಗಳೆಲ್ಲವೂ ನಿರ್ಮೂಲವಾಗಿ ಜನಗಳು ಕೇವಲ ಪಶುವೃತ್ತಿಯಿಂದ ನಡೆಯುತ್ತಿದ್ದ ಆ ವಿಪ್ಲವದ ಕಾಲದಲ್ಲಿ ವಿವಾಹವೆಂಬುವಕ್ಕೆ ಒಂದು ಧಾರ್ಮಿಕ ನಿಬಂಧನೆಯಾಗಲೀ, ಆ ವಿಷಯದಲ್ಲಿ ಒಂದು ಪವಿತ್ರಭಾವನೆಯಾಗಲೀ ಯಾರಿಗೂ ಇರಲಿಲ್ಲ. ಇಬ್ಬರು ತಿಳಿದವರ ಎದುರಿಗೆ, ಆ ನಗರದ ಸಾರ್ವಜನಿಕ ಮಂದಿರದಲ್ಲಿಟ್ಟಿದ್ದ ಒಂದು ಪುಸ್ತಕದಲ್ಲಿ ವಧೂವರರಿಬ್ಬರೂ ತಮ್ಮ ಕೈಬರಹಗಳನ್ನಿಟ್ಟು, ಉಂಗುರಗಳನ್ನು ಬದಲಿಸಿಕೊಂಡರೆ ತೀರಿತು. ಅದೇ ವಿವಾಹಾಂಗವಾದ ಸಕಲ ಕರ್ಮಗಳೂ ಎಂಬ ಭಾವನೆಯಿದ್ದಿತು. ಗುಣಲುಬ್ಧರಾಗಿ ಪರಸ್ಪರಾಕರ್ಷಿತರಾದ ನೆಪೋಲಿಯನ್ ಮತ್ತು ಜೋಸಫಯಿನ್ ಈ ಇಬ್ಬರೂ ಆ ಪದ್ಧತಿಯನ್ನನುಸರಿಸಿಯೇ ವಿವಾಹಿತರಾಗಿ ಒಂದಾದರು. ವಿವಾಹಕಾಲದಲ್ಲಿ ಜೋಸಫಯಿನ್ ನೆಪೋಲಿಯನಿಗಿಂತಲೂ ಎರಡುವರ್ಷಕ್ಕೆ ದೊಡ್ಡವಳು. ನೆಪೋ

ಲಿಯರ್ನನು ಆಗ ಇಪ್ಪತ್ತಾರುವರ್ಷಗಳ ಪ್ರಾಯಸ್ಥನು. ಆದರೂ, ಇಬ್ಬರೂ ದಿವ್ಯಾರೋಗ್ಯಭಾಗ್ಯದಿಂದಲೂ, ಚಿರಯೌವನಸಂಪತ್ತಿಯಿಂದಲೂ, ಪರಸ್ಪರ ಪ್ರೇಮಾನುರಾಗಗಳಿಂದಲೂ ಕೂಡಿದ್ದರು. ಆ ದೇಶದ ನಾಸ್ತಿಕರಾದ ಇತರರನೇಕರು ವಿವಾಹವೆಂಬುದನ್ನು ಯಾವ ದೃಷ್ಟಿಯಿಂದಲಾದರೂ ಕಾಣುತ್ತಿರಲಿ - ನೆಪೋಲಿಯರ್ನನು ಮಾತ್ರ ಅದನ್ನು ಕೇವಲ ಪವಿತ್ರಭಾವನೆಯಿಂದಲೇ ಕಾಣುತ್ತ, ತಾನು ಚಕ್ರವರ್ತಿಯಾದಮೇಲೆ, ಮತ್ತೊಂದಾವರ್ತಿ ಧಾರ್ಮಿಕನಿಬಂಧನೆಗಳಿಗನುಸರಿಸಿ, ತಮ್ಮ ವಿವಾಹವನ್ನು ಸಂಸ್ಕರಿಸಿಕೊಂಡನು.

ವಿವಾಹವಾದ ತರುವಾಯ ಆತನು ಬಹುಕಾಲ ತನ್ನ ಪತ್ನಿಯೊಂದಿಗೆ ಸುಖೋಪಭೋಗ ಮಾಡಿಕೊಂಡು ನಗರದಲ್ಲಿ ವಾಸಿಸಿರಲು ಅವಕಾಶ ದೊರೆಯಲಿಲ್ಲ. ಫ್ರಾನ್ಸ್‌ದೇಶದಲ್ಲಿ ಜರುಗಿರುವ ಈ ಪ್ರಜಾವಿಪ್ಲವವು, ಸಿಂಹಾಸನಾರೂಢರಾದ ಯೂರೋಪಿನ ಇತರ ರಾಜರನ್ನೆಲ್ಲ ನಡುಗಿಸಿಬಿಟ್ಟಿತು. ಫ್ರಾನ್ಸ್‌ದೇಶದ ರಾಜನಂತೆಯೇ ಪ್ರಜೆಗಳು ತಮ್ಮನ್ನೂ ಎಂದು ಬೀದಿಗೆಳೆದು ಶಿರಚ್ಛೇದಮಾಡಿ ತಮ್ಮ ಆಧಿಪತ್ಯವನ್ನೂ ಕೊನೆಗಾಣಿಸುವರೋ ಎಂದು ಎಲ್ಲರೂ ತಳಮಳಗೊಳ್ಳಸಾಗಿದರು. ಇಂಗ್ಲೆಂಡಿನ ಗಣಿಯ ಕೂಲಿಕಾರರೂ ಐರ್ಲೆಂಡಿನ ನಿವಾಸಿಗಳೂ ಎಲ್ಲೆಲ್ಲೂ ಸ್ವಾತಂತ್ರ್ಯ - ಸಮತ್ವ ಎಂಬ ಕೂಗುಗಳಿಂದ ವಾತಾವರಣವನ್ನು ತುಂಬಿಬಿಟ್ಟರು. ಫ್ರಾನ್ಸಿನ ಈ ಪ್ರಜಾವಿಪ್ಲವಕಾರರನ್ನು ಈಗಲೇ ಅಣಗಿಸಿ ಭೂಗತಮಾಡಿ, ಸಿಂಹಾಸನ ಪ್ರತಿಷ್ಠಿತರಾದ ತಮ್ಮ ಆಧಿಪತ್ಯವನ್ನು ಸ್ಥಾಪಿಸಕೊಳ್ಳದಿದ್ದರೆ, ಮುಂದೆ ಬಹು ಪ್ರಮಾದವುಂಟಾಗುವುದೆಂದು ಎಲ್ಲರೂ ಚಿಂತಿಸತೊಡಗಿದರು. ಇಂಗ್ಲೆಂಡಿನವರು ಈ ಅವಾಂತರಗಳಿಂದ ಭಯವಿಹ್ವಲರಾಗಿ ತಮ್ಮ ಯುದ್ಧದ ಹಡಗುಗಳನ್ನು ಫ್ರಾನ್ಸಿನ ದಂಡೆಯಲ್ಲಿ ನಿಲ್ಲಿಸಿ, ಆ ದೇಶದ ರಾಜಪಕ್ಷೀಯರಿಗೆ ಆಯುಧಾದಿಗಳನ್ನು ಒದಗಿಸಿಕೊಟ್ಟು ಯುದ್ಧಮಾಡಲು ಸಿದ್ಧವಾಯಿತು. ಆಸ್ಟ್ರಿಯಾ ಚಕ್ರವರ್ತಿಯು ಇಟಲಿಯ ತನ್ನ ಸಾಮಂತರಾಜರನ್ನೂ, ಸಾರ್ಡಿನಿಯಾ, ನೇಪಲ್ಸ್, ಸಿಸಿಲಿಮುಂತಾದ ಪ್ರಾಂತಾಧಿಪರನ್ನೂ ಸೇರಿಸಿಕೊಂಡು ಫ್ರಾನ್ಸಿನ ಉತ್ತರಭಾಗದಲ್ಲಿ ಹಲ್ಲೆಮಾಡಲು ಏರ್ಪಡಿಸಿಕೊಂಡನು. ಈ ರಾಜಪಕ್ಷೀಯರ ಸೈನ್ಯವು ೮೦೦೦೦ದ ವರೆಗೆ ಇದ್ದು, ಸಕಲ

ಯುದ್ಧಸಾಮಗ್ರಿಗಳಿಂದಲೂ ಸುಸಜ್ಜಿತವಾಗಿದ್ದಿತು. ಫ್ರಾನ್ಸಿನ ಪ್ರಜಾಪ
ತ್ತಾಧಿಕಾರದ ಸೈನ್ಯವಾದರೋ ೩೦೦೦೦ಕ್ಕೆ ಮೀರಿರಲಿಲ್ಲ. ಅವರಲ್ಲಿ ಯು
ದ್ಧಸಾಮಗ್ರಿಗಳೂ ವಿಶೇಷವಾಗಿರಲಿಲ್ಲ. ಆದರೆ ಸರ್ವಸೈನ್ಯಾಧಿಪತ್ಯವು
ಈ ಬಾರಿ ನೆಪೋಲಿಯನ್‌ಗೆ ವಹಿಸಲ್ಪಟ್ಟಿತು. ಆ ಚಿಕ್ಕಸೈನ್ಯವನ್ನಿಟ್ಟು
ಕೊಂಡು, ಅಪೂರ್ಣಸಾಮಗ್ರಿಗಳೊಂದಿಗೆ ಹೊರಟು ಆತನು ಕೇವಲ ಆತ್ಮ
ಸಂರಕ್ಷಣಾರ್ಥವಾಗಿ, ಶತ್ರುಗಳ ಮಹತ್ಸೈನ್ಯದೊಂದಿಗೆ ಕಾದಬೇಕಾಗಿದ್ದಿ
ತು. ಆತನ ಚಿಕ್ಕವಯಸ್ಸು, ಗಡ್ಡಮೀಸೆಗಳೂ ಚೆನ್ನಾಗಿ ಬಾರದಿದ್ದ ಎಳೆ
ಪ್ರಾಯ, ಸುಂದರಸ್ತ್ರೀಯಂತೆ ಇದ್ದ ಆತನ ಮುಖವರ್ಚಸ್ಸು ಮುಂತಾದು
ವು, ಆತನು ಅಂತಹ ಭಯಂಕರ ಸೈನ್ಯವೆದುರಿಗೆ, ಫ್ರಾನ್ಸಿನ ಸೈನ್ಯವನ್ನು
ನಡೆಯಿಸಬಲ್ಲನೇ ಎಂದು ಎಲ್ಲರಿಗೂ ಸಂದೇಹವನ್ನುಂಟುಮಾಡಿತು. ಆದ
ರೆ ತಾನೇನೋ, ನಿಶ್ಚಲಹೃದಯನಾಗಿ ಮುಂದಡಿಯಿಟ್ಟು ತನ್ನಾಸೈನ್ಯದೊಂ
ದಿಗೆ ನಡೆದನು. ಅವನ ಸೈನಿಕರಾದರೂ, ತಮ್ಮಾಧಣಿಯಲ್ಲಿ ಅಸಮಾನ
ಭಕ್ತಿ ಶ್ರದ್ಧೆಗಳುಳ್ಳವರಾಗಿ, ಪ್ರಾಣದಮೇಲೆ ಆಸೆಯಿಲ್ಲದೆ, ಆತನು ಎಲ್ಲಿಗೆ
ನಡೆಸಿದರೆ ಅಲ್ಲಿಗೆ ಪ್ರತಿಘಾತನಾಡದೆ ಹೋಗಲು ಸಿದ್ಧರಾಗಿದ್ದರು.

ಯುದ್ಧವಿದ್ಯಾವಿಚಕ್ಷಣನಾದ ನೆಪೋಲಿಯನನು, ಮೊದಲು ಒಂದಾ
ಗಿ ನೆರೆದಿರುವ ತನ್ನಾಶತ್ರು ಸೈನ್ಯವನ್ನು ಇಬ್ಭಾಗಗೊಳಿಸಬೇಕೆಂದು ಸಂ
ಕಲ್ಪಿಸಿದನು. ತನ್ನ ಸೈನಿಕರಿಗೆ, ಹೊಟ್ಟೆತುಂಬುವಷ್ಟು ಆಹಾರವೂ, ಆ
ಚಳಿಯನ್ನೆದುರಿಸಲು ಬೆಚ್ಚನೆಯ ಬಟ್ಟೆಗಳೂ ಸಹ ಇಲ್ಲದಿದ್ದರೂ, ಅವರ
ನ್ನು ಹುರುಪುಗೊಳಿಸಲು, ವೀರ್ಯಯುಕ್ತಪದಗಳಿಂದಲೂ ಉತ್ತೇಜಿತವಾ
ಕ್ಯಗಳಿಂದಲೂ ಕೂಡಿದ ಒಂದು ಜಾಹೀರುನಾಮೆಯನ್ನು ಪ್ರಕಟಗೊಳಿಸಿದ
ನು. ಸೈನಿಕರು ಹುರುಪುಗೊಂಡು ಮರಣಭೀತಿಯಿಲ್ಲದೆ, ತಮ್ಮಾಸೇನಾನಿ
ಯನ್ನು ಅನುಸರಿಸಿ ಹೊರಟರು. ನೆಪೋಲಿಯನನು ಸರ್ವದಾ ಕುದುರೆಯ
ಬೆನ್ನಮೇಲೆಯೇ ಇದ್ದು ಸೈನ್ಯದ ಸಕಲಭಾಗಗಳಲ್ಲೂ ಸಂಚರಿಸಿ, ಎಲ್ಲರಿಗೂ
ಧೈರ್ಯಹೇಳುತ್ತಾ, ಸಮಯನೋಡಿ ಶತ್ರುಸೈನ್ಯದಮೇಲೆ ಕಾದಿ ಅವರನ್ನು
ಹಣ್ಣುಮಾಡುತ್ತಾ ಸಾಗಿದ್ದನು. ನೆಪೋಲಿಯನನ ಈ ಸಾಹಸವು, ಆಸ್ಟ್ರಿ
ಯಾ ಚಕ್ರವರ್ತಿಯನ್ನು ಎದೆಗೆಡಿಸಿತು. ಆತನ ಸೈನ್ಯವು ಮೊಂಟೆನೋ
ಎಂಬಲ್ಲಿ ಯುದ್ಧಮಾಡಿ ತರುವಾಯ ಡೀಸೋ ಎಂಬ ಯುದ್ಧದಲ್ಲಿ ಸಂಪೂ

ರ್ಣವಾಗಿ ಪರಾಜಯಹೊಂದಿತು. ತರುವಾಯ ಸಾರ್ಡಿನಿಯಾ ರಾಜನ ಸೈ
ನ್ಯವು ಮೈಲ್ಸಿಮೋ ಎಂಬಲ್ಲಿ ಪಾದಾಕ್ರಾಂತವಾಯಿತು. ಅವರ ಮುಖ್ಯ
ಮುಖ್ಯ ಕೋಟೆಗಳೆಲ್ಲವೂ ನೆಪೋಲಿಯನ್ನನ ಕೈವಶವಾದುವು. ಹಾಗೆಯೇ
ಫಾರ್ಮಾ, ಫಿಡ್ಮ್ಯಾಂಟ್, ಎಮಿಲಿಯಾ ಎಂಬ ಪ್ರಾಂತಗಳನ್ನೂ ಸ್ವಾಧೀ
ನಗೊಳಿಸಿಕೊಂಡು ಆಸ್ಟ್ರಿಯನ್ನರಿಗೆ ಮುಖ್ಯಸ್ಥಾನವಾಗಿದ್ದ ಲೋಂಬಾರ್ಡಿ
ಗೆಹೊರಟನು. ದಾರಿಯುದ್ದಕ್ಕೂ ಕಂಡಕಂಡಲ್ಲಿ ಆಸ್ಟ್ರಿಯನ್ನರ ಸೈನ್ಯವನ್ನು
ಪರಾಭವಗೊಳಿಸಿ ಓಡಿಸುತ್ತಾ, ಅವರನ್ನು ಇಟಲಿಯ ಸರಹದ್ದಿ
ನಿಂದಾಚೆಗೆ ಹೊರಡಿಸಿ, ಮತ್ತೂ ಮುಂದೊತ್ತರಿಸಿ ಟಾಯರೋಲ್ ಎಂಬ
ಪ್ರಾಂತದ ಮುಖ್ಯಸ್ಥಳವಾದ ಮಿಲಾನನ್ನು ಆಕ್ರಮಿಸಿದನು. ತಮ್ಮಮೇ
ಲೆ ಆಸ್ಟ್ರಿಯಾದವರ ಆಡಳಿತವು ತಪ್ಪಿದುದಕ್ಕಾಗಿ ಇಟಲಿಯ ಜನತೆಯು
ಪರಮಾನಂದಗೊಂಡು ನೆಪೋಲಿಯನ್ನನನ್ನು ಸ್ವಾತಂತ್ರ್ಯದಾಯಕನೆಂದು
ಹಾಡಿ ಹರಸಿ ಕಪ್ಪಕಾಣಿಕೆಗಳನ್ನೊಪ್ಪಿಸಿ ಗೌರವಿಸಿತು. ನಿಸ್ಪೃಹಿಯಾದ
ನೆಪೋಲಿಯನ್ನನು ಅದರಲ್ಲಿ ಒಂದು ಚಿಕ್ಕಾಸನ್ನೂ ತನ್ನ ಸ್ವಂತಕ್ಕಾಗಿ ಸ್ವೀ
ಕರಿಸದೆ, ಎಲ್ಲವನ್ನೂ ಫ್ರಾನ್ಸಿಗೇ ಕಳುಹಿಸಿದನು. ಸೈನಿಕರಿಗೆ ಬೇಕಾದ
ಷ್ಟು ಆಹಾರ ಪಾನೀಯಗಳೂ ಉಡುಪುಗಳೂ ದೊರೆತುವು. ಎಲ್ಲರೂ
ಪರಮಸಂತೋಷದಿಂದ ತಮ್ಮ ಸೈನ್ಯಾಧಿಪನನ್ನು ಮೆಚ್ಚಿಕೊಂಡರು.

ನೆಪೋಲಿಯನ್ನನು, ಕೇವಲ ಸೈನ್ಯದೊಂದಿಗೆ ದೇಶದಮೇಲೆ ನಡೆದು
ಯುದ್ಧಮಾಡಿ ಜಯಸಂಪಾದನೆ ಮಾಡಬೇಕೆಂದು ಮಾತ್ರ ಇಚ್ಛಿಸಿದ್ದವನಲ್ಲ
ವಾದುದರಿಂದ-ತಾನು ಜಯಿಸಿದ ಪ್ರಾಂತಗಳಲ್ಲೆಲ್ಲ ರಾಜ್ಯಭಾರದಲ್ಲೂ ಅನೇ
ಕ ತಿದ್ದುಪಾಟಗಳನ್ನುಂಟುಮಾಡಿ ಪ್ರಜಾಸೌಖ್ಯವನ್ನು ಗಮನಿಸುತ್ತಿದ್ದ
ನು. ಸೈನ್ಯವನ್ನು ಏರ್ಪಡಿಸುವುದು, ಯುದ್ಧವಿಚಾರ ಶಿಕ್ಷಣಕೊಡುವುದು,
ಶತ್ರುಗಳ ಗಮನಾಗಮನಗಳನ್ನು ಯೋಚಿಸಿ ಅದಕ್ಕನುಸಾರವಾಗಿ ಸೈನ್ಯವ
ನ್ನು ನಡಿಸುವುದು, ಅವರ ಆಹಾರ ವಸ್ತ್ರಾದಿಗಳನ್ನು ಕುರಿತು ಯೋಚಿಸುವು
ದು, ಗ್ರಂಥವ್ಯಾಸಂಗ, ರಾಜ್ಯಭಾರದಲ್ಲಿ ತಿದ್ದುಪಾಟುಗಳು ಮುಂತಾದ ಹಲ
ವು ವಿಚಾರಗಳನ್ನು ಹೇಗೆ ಗಮನಿಸಲು ಸಾಧ್ಯ ಎಂದು ಒಂದು ಬಾರಿ ಆತನ
ನ್ನು ಒಬ್ಬರು ಪ್ರಶ್ನಿಸಲು-ಆತನು-'ನನ್ನ ತಲೆಯಲ್ಲಿ (ಮೆದುಳಿನಲ್ಲಿ) ಬೇರೆ
ಬೇರೆ ಖಾನೆಗಳಲ್ಲಿದ್ದಂತೆ, ಒಂದೊಂದು ವಿಷಯವೂ ಪ್ರತ್ಯೇಕ ಪ್ರತ್ಯೇಕ

ಭಾಗಗಳಲ್ಲಿ ಅಡಕವಾಗಿದೆ. ಬೇಕಾದ ಒಂದು ವಿಷಯವನ್ನು ಮಾತ್ರವೇ ವಿಚಾರಕ್ಕೆ ತೆಗೆದುಕೊಂಡು ಮಿಕ್ಕದ್ದನ್ನೆಲ್ಲಾ ಮುಚ್ಚಿರುವೆನು. ಆದುದರಿಂದ ಯಾವ ಗಲಭೆಗೂ ಆಸ್ಪದವಿಲ್ಲದಂತೆ, ಅನೇಕ ಕಾರ್ಯಗಳನ್ನು ಕುರಿತು ವಿಚಾರಿಸಲು ಅವಕಾಶವಿದೆ. ಯಾವ ವಿಚಾರವೂ ಬೇಡವಾದಾಗ ಎಲ್ಲವನ್ನೂ ಮುಚ್ಚಿಬಿಟ್ಟು ನಿಶ್ಚಿಂತವಾಗಿ ನಿದ್ರಿಸುವೆನು 'ಎಂದು ಆತನು ಹೇಳುವನು. ಶತ್ರುಸೈನ್ಯವು ಸುತ್ತಲೂ ಆವರಿಸಿ, ತನ್ನ ಸೈನ್ಯದೊಂದಿಗೆ ಭಯಂಕರ ಯುದ್ಧಮಾಡುತ್ತಿದ್ದಾಗಲೂ, ಆ ಮಹಾನುಭಾವನು ಕಲಾಭಿಜ್ಞರನ್ನು ಕರೆಯಿಸಿಕೊಂಡು ಅವರೊಂದಿಗೆ ಹಲವು ಶಾಸ್ತ್ರ ವಿಚಾರಗಳಲ್ಲಿ ಮಗ್ನನಾಗಿರುತ್ತಿದ್ದನಂತೆ. ಆತನ ಸಂಯಮ ಮನಸ್ಕತೆಯು ಎಷ್ಟುಮಟ್ಟಿನದಿರಬಹುದು!

ತನ್ನ ಸೈನ್ಯವು ಈವರೆಗೆ ಒಂದೆರಡು ಸ್ಥಳಗಳಲ್ಲಿ ಜಯಿಸಲ್ಪಟ್ಟಿದ್ದಿತಾದರೂ, ಆಸ್ಟ್ರಿಯಾ ಚಕ್ರವರ್ತಿಯು ಇನ್ನೂ ಹತಾಶನಾಗಿರಲಿಲ್ಲ. ಮುಂದೆ ಪುನಃ ಎರಡು ಮೂರು ಸ್ಥಳಗಳಲ್ಲಿ ನೆಪೋಲಿಯನನಿಗೆ ಯುದ್ಧಕೊಟ್ಟನು. ಆದರೇನು, ಮೂರೇ ದಿನದ ಯುದ್ಧದಲ್ಲಿ ಅರ್ಧಲಕ್ಷದವರೆಗೆ ಸೈನ್ಯವನ್ನು ಕಳೆದುಕೊಂಡು, ಮೂವರು ಸುಪ್ರಸಿದ್ಧರೂ ರಣಪಂಡಿತರೂ ಆದ ತನ್ನ ಸೇನಾಪತಿಗಳು ಪರಾಭವ ಹೊಂದಿದಮೇಲೆ, ಇನ್ನು ಆ ವೀರಶಿರೋಮಣಿಯೊಂದಿಗೆ ಕಾದುವುದು ಅಸಾಧ್ಯವೆಂದು ಮನಗಂಡು ಕ್ಯಾಪೋ ಫೋರ್ಮಿಯಾ ಎಂಬಲ್ಲಿ ೧೭೯೭ನೇ ಅಕ್ಟೋಬರು ೧೭ರಲ್ಲಿ ಒಂದು ಒಡಂಬಡಿಕೆಮಾಡಿಕೊಂಡನು. ಇಟಲಿಯಲ್ಲಿ ಕಾಲಿಟ್ಟು ಒಂದು ವರ್ಷದಲ್ಲಿ ನೆಪೋಲಿಯನನು ಮೂವತ್ತೇಳು ಯುದ್ಧಗಳಲ್ಲಿ ಜಯಸಂಪಾದನೆಮಾಡಿ, ಅಖಿಲ ಯುದ್ಧಕಲಾಭಿಜ್ಞರಿಗೂ ಪರಮಾಶ್ಚರ್ಯವನ್ನುಂಟುಮಾಡಿಬಿಟ್ಟನು. ತರುವಾಯ ಕೆಲಕಾಲ, ಇಟಲಿಯ ಮಾಂಟಬೆಲೋ ಎಂಬೊಂದು ರಮ್ಯಸ್ಥಳಕ್ಕೆ ಹೋಗಿ ವಿಶ್ರಾಂತಿಗೊಂಡನು. ಅಲ್ಲೂ ವ್ಯರ್ಥ ಕಾಲಕ್ಷೇಪಮಾಡದೆ, ಇಟಲಿಯ ರಾಜಕಾರ್ಯಗಳನ್ನು ವಿಚಾರಿಸುತ್ತಾ, ಅದನ್ನೊಂದು ಪ್ರತ್ಯೇಕ ರಾಷ್ಟ್ರವಾಗಿ ನಿರ್ಮಿಸಿ, ಅದಕ್ಕೆ ಆವಶ್ಯಕವೆನ್ನಿಸಿದ ಸಕಲ ಕಾರ್ಯಗಳನ್ನೂ ಮಾಡಿದನು. ಯೂರೋಪುಖಂಡದ ರಾಜಾಧಿರಾಜರೆಲ್ಲರೂ ಅವನಿದ್ದ ಸ್ಥಳಕ್ಕೆ ಬಂದು ದರ್ಶನ ತೆಗೆದುಕೊಂಡರು.

'ಅಮಾನುಷವೋ' ಎಂದು ತೋರಬಹುದಾದ, ಇಷ್ಟು ಮಾತ್ರ ಕಾರ್ಯವನ್ನು ಅಲ್ಪವಯಸ್ಕನಾದ ನಮ್ಮ ಕಥಾನಾಯಕನು, ಸಾಧಿಸಿದನಾದರೂ, ಆ ಮಹಾನುಭಾವನು ತನ್ನ ಮನಸ್ಸಿನಲ್ಲಿ ಅಹಂಕಾರಕ್ಕೆ ಸ್ಥಳಕೊಡದೆ,-'ಇವೆಲ್ಲವೂ ದೈವಲೀಲೆಯು. ಯಾವುದೋ ಅವ್ಯಕ್ತವಾದೊಂದು ಶಕ್ತಿ ವಿಶೇಷವು ಈ ಕಾರ್ಯವನ್ನು ನನ್ನಿಂದ ಮಾಡಿಸುತ್ತಿದೆ, ಅನುಕೂಲವಾದ ಪರಿಸ್ಥಿತಿಯನ್ನು ನನಗೆ ಒದಗಿಸುತ್ತಿದೆ. ಅದರಿಂದ ಉತ್ತೇಜಿತನಾಗಿ ನಾನು ಆ ಮಾರ್ಗವನ್ನೇ ಅನುಸರಿಸಿ ಹೋಗುತ್ತೇನೆ. ಸಾವಿಗೂ ನಾನು ಅಂಜುವುದಿಲ್ಲ. ಅದು ಬಂದಾಗ್ಯೂ ಧೈರ್ಯದಿಂದ ಅದಕ್ಕೆ ಎದುರಾಗುವೆನು' ಎಂದು ಹೇಳುವನು. ಕೆಲಕಾಲ ಇಟಲಿಯಲ್ಲಿ ವಾಸಿಸಿದಮೇಲೆ ಆತನು ಪ್ಯಾರಿಸ್ಸಿನ ಕಡೆಗೆ ಪ್ರಯಾಣಮಾಡಿದನು. ಡೈರೆಕ್ಟರರು, ಅಭೂತಪೂರ್ವ ಯಶಶ್ರೀಯನ್ನು ಗಳಿಸಿ ಬರುತ್ತಿದ್ದ ತಮ್ಮ ವೀರಶಿರೋಮಣಿಯನ್ನು ಅತಿಶಯ ವೈಭವದಿಂದ ಎದುರುಗೊಂಡರು. ಆತನ ಸುಗುಣ ಸಂಪತ್ತನ್ನೂ ಧೈರ್ಯ ವೀರ್ಯಗಳನ್ನೂ ಯುದ್ಧ ಕಲಾಭಿಜ್ಞತೆಯನ್ನೂ ಕುರಿತು ವಿಶೇಷವಾಗಿ ಹೊಗಳಿದರು. ಬಾರಾಸ್ ಎಂಬೊಬ್ಬ ಡೈರೆಕ್ಟರನು— 'ಪ್ರಕೃತಿ ದೇವತೆಯು ತನ್ನ ಸರ್ವಶಕ್ತಿಯನ್ನೂ ಉಪಯೋಗಿಸಿ ಈ ಮಹಾನುಭಾವನನ್ನು ಸೃಷ್ಟಿಸಿರುವಳು' ಎಂದು ಆತನನ್ನು ಅಭಿನಂದಿಸಿದನು. ಸರ್ವರೂ ಇಷ್ಟು ಬಗೆಯಿಂದ ಆತನನ್ನು ಹೊಗಳಿ ಗೌರವಿಸಿದರಾದರೂ ಆ ಸುಗುಣನಿಧಿಯು, ಆ ಕೀರ್ತಿಯೆಲ್ಲವೂ ಅಧಿಕಾಧಿಕ ಕಷ್ಟಸಹನೆಮಾಡಿ ಜಯವನ್ನು ದೊರಕಿಸಿದ ಶೂರ ಸೈನಿಕರಿಗಲ್ಲದೆ ತನಗೆ ಸೇರತಕ್ಕದ್ದಲ್ಲವೆಂದು ನುಡಿದನು.

ಈವರೆಗೆ ಆತನಿಗೆ ಪ್ರಾಪ್ತವಾದ ದಿಗ್ವಿಜಯದಿಂದ ಆತನು ಫ್ರಾನ್ಸ್ ದೇಶೀಯರ ಆರಾಧ್ಯಮೂರ್ತಿಯಾಗಿ ಪರಿಣಮಿಸಿದನು. ಇದನ್ನು ಕಂಡು ಡೈರೆಕ್ಟರರು ಅಸೂಯೆಪಡಸಾಗಿದರು. ಕಾಲಾನುಕಾಲದಲ್ಲಿ ಅವನೇ ಪ್ರಬಲನಾಗಿ ತಮ್ಮನ್ನು ಮೂಲೆಗೊತ್ತಬಹುದೆಂದು ಎಣಿಸಿ ಅವನನ್ನು ತಮ್ಮ ಅಧೀನದಲ್ಲಿಟ್ಟುಕೊಳ್ಳಬೇಕೆಂದು ಇಚ್ಛಿಸಿದರು. ಆದರೆ ಜಗದ್ವಿಖ್ಯಾತನಾದ ಆತನು ಅವರ ಆಜ್ಞೆಗೆ ಒಳಪಟ್ಟು ನಡೆಯಲು ಸಮ್ಮತಿಸಲಿಲ್ಲ. ಆತನ ಮನಸ್ಸು ಇನ್ನೂ ಹಲವು ದೇಶಗಳನ್ನು ಜಯಿಸಬೇಕೆಂದೂ ಇಂಗ್ಲೆಂಡ್

ರಷ್ಯಾ ಈ ಎರಡು ದೇಶಗಳು ಸ್ವಾಧೀನವಾದರೆ ಆದ್ಯಂತ ಯೂರೋಪ್ಖಂ ಡವೇ ಫ್ರಾನ್ಸಿನ ಆಧಿಪತ್ಯಕ್ಕೆ ಒಳಪಟ್ಟಂತಾಗುವುದೆಂದೂ ಚಿಂತಿಸಿ, ಡೈರೆಕ್ಟರರ ಸಮ್ಮತಿಯನ್ನು ಪಡೆದು ೪೦೦ ಯುದ್ಧದ ಹಡಗುಗಳನ್ನೂ, ೨೦೦೦ ಫಿರಂಗಿಗಳನ್ನೂ ೪೦೦೦೦ ಸೈನ್ಯವನ್ನೂ ತೆಗೆದುಕೊಂಡು, ಈಜಿಪ್ಟುದೇಶ ದಮಾರ್ಗವಾಗಿ ಪ್ರಯಾಣಮಾಡಿದನು. ಭೂಮಧ್ಯಸಮುದ್ರದಲ್ಲಿನ ಮಾಲ್ಟಾ ಎಂಬ ದ್ವೀಪವೂ, ಅಲೆಗ್ಸಾಂಡ್ರಿಯಾ ಎಂಬ ಬಂದರೂ ಸುಲಭವಾಗಿಯೇ ವಶವಾದುವು ಆಫ್ರಿಕಾಖಂಡವನ್ನು ಪ್ರವೇಶಿಸಿ, ಬಹುಕಷ್ಟದಿಂದ ಸೈನಿಕರೊಂದಿಗೆ ಮರಳುಗಾಡಿನ ಪ್ರಯಾಣವನ್ನು ಸಾಗಿಸಿ, ಈಜಿಪ್ಟಿನ ರಾಜಧಾನಿಯಾದ ಕೈರೋನಗರವನ್ನು ಸ್ವಾಧೀನಗೊಳಿಸಿಕೊಂಡು, ತನ್ನ ಧ್ಯೇಯಕ್ಕನುಸಾರವಾಗಿ ಅಲ್ಲಿ ರಾಜ್ಯಕಾರ್ಯಭಾರವನ್ನು ಏರ್ಪಡಿಸಿ ದೇಶದಲ್ಲಿ ಸುಖಶಾಂತಿಗಳನ್ನು ಸ್ಥಾಪಿಸಿದನು. ಪರದೇಶೀಯರ ಪಾಲನೆಯು ಸ್ವಾಭಾವಿಕವಾಗಿಯೇ ಆ ದೇಶೀಯರಿಗೆ ಸರಿಬೀಳದೆ ಅವರೊಂದುಬಾರಿ ದಂಗೆಯೆದ್ದು ಫ್ರೆಂಚ್‌ಸೈನ್ಯವನ್ನು ಎದುರಿಸಿದರು. ಆದರೆ, ವೀರವರ ನೆಪೋಲಿಯನ್ನನ ಎದುರಿಗೆ ಅವರ ಆಟವು ಸಾಗಲಿಲ್ಲ. ಆತನು ದಕ್ಷತೆಯಿಂದ ಅದನ್ನು ಅಡಗಿಸಿ, ಎಂದಿನಂತೆ ಅವರನ್ನು ತನ್ನ ಆಜ್ಞೆಗೆ ಒಳಪಡಿಸಿಕೊಂಡನು.

ನಮ್ಮ ಕಥಾನಾಯಕನು ಸ್ವಶಕ್ತಿಯಿಂದ ರಾಜ್ಯ ಸಂಪಾದನೆ ಮಾಡಿಕೊಂಡು ಆಫ್ರಿಕಾಖಂಡದಲ್ಲಿ ಸುಖವಾಗಿದ್ದ ಕಾಲದಲ್ಲಿ ಇತ್ತ ಫ್ರಾನ್ಸಿನಲ್ಲಿ ಪುನಃ ಕಷ್ಟನಷ್ಟಗಳು ಪ್ರಬಲಿಸಿದುವು. ಇಟಲಿಯು ಪುನಃ ಕೈತಪ್ಪಿಹೋಯಿತು. ಸೈನ್ಯವನ್ನು ಸ್ವಾಧೀನಕ್ಕೆ ತೆಗೆದುಕೊಂಡು ಅವರನ್ನು ಶತ್ರುದಳದಮೇಲೆ ನಡೆಯಿಸಲು ಶಕ್ತನಾದ ಸೈನ್ಯಾಧಿಪತಿಯಾಗಲೀ, ನೆಪೋಲಿಯನ್ನನಂತೆ ಜನಾನುರಾಗವನ್ನು ಸಂಪಾದಿಸಿಕೊಂಡಿದ್ದ ಪ್ರಜಾನಾಯಕನಾಗಲೀ ಯಾರೂ ಇರಲಿಲ್ಲ. ಜನಗಳಲ್ಲಿ ಅಸಹನೆಯು ದಿನದಿನಕ್ಕೆ ಹೆಚ್ಚುತ್ತಾ ಹೋಯಿತು. ಶತ್ರುಗಳಿಂದ ಯಾವಹೊತ್ತಿಗೆ ಏನಪಾಯ ಸಂಭವಿಸುವುದೋ ಎಂದು ಎಲ್ಲರೂ ಬೆದರಿದರು. ಡೈರೆಕ್ಟರರು ಯಾವ ಬಗೆಯಿಂದಲೂ, ಪ್ರಜಾನೆಮ್ಮದಿಯನ್ನುಂಟುಮಾಡಲು ಶಕ್ತರಾಗದಷ್ಟು ದುರ್ಬಲರಾಗಿದ್ದರು. ಈ ಸಂಗತಿಗಳೆಲ್ಲವೂ ವೃತ್ತಪತ್ರಿಕೆಗಳ ಮೂಲಕ ಈಜಿಪ್ಟಿನಲ್ಲಿದ್ದ ನೆಪೋಲಿಯನ್ನನಿಗೆ ತಿಳಿದುವು. ಸ್ವದೇಶಕ್ಕೆ ಬಂದೊದಗಿದ್ದ ದುಸ್ಥಿ

ತಿಯನ್ನು ಕಂಡು ಆತನು ಒಡನೆ ಕೆಲವು ಜನರೊಂದಿಗೆ ಪ್ರಯಾಣಮಾಡಿ ಪ್ಯಾರಿಸ್ ರಾಜಧಾನಿಯನ್ನು ತಲುಪಿದನು. ವೀರಾಗ್ರಣಿ ನೆಪೋಲಿಯನ್ನನು ಪುನಃ ಸ್ವದೇಶಕ್ಕೆ ಬಂದನೆಂಬ ವಾರ್ತೆಯನ್ನು ಕೇಳಿ ಸಕಲರೂ, ಇನ್ನು ತಮ್ಮ ಮಾನಪ್ರಾಣಗಳಿಗೆ ಭಯವಿಲ್ಲವೆಂದುಕೊಂಡು ಧೈರ್ಯಗೊಂಡರು.

ನೆಪೋಲಿಯನ್ನನು ರಾಜಧಾನಿಯನ್ನು ಸೇರಿದೊಡನೆಯೇ, ಸಾವಧಾನ ದಿಂದ ಪ್ರಕೃತದ ರಾಜಕಾರ್ಯಗಳೇನೆಂದು ಗಮನಿಸತೊಡಗಿದನು. ರಾಜನೀತಿಜ್ಞರೊಂದಿಗೆ ಬೆರೆತು, ದೇಶದಲ್ಲಿ ಸುಸ್ಥಿತಿಯನ್ನು ಸ್ಥಾಪಿಸುವ ಮಾರ್ಗಗಳನ್ನು ಕುರಿತು ಆಲೋಚಿಸಿದನು. ರಾಜಪಕ್ಷ ಪ್ರಜಾಪಕ್ಷದವ ರಿಬ್ಬರೂ ಅವನ ಬಳಿ ಸಲಹೆಗೆ ಬರುತ್ತಿದ್ದರು. ನೆಪೋಲಿಯನ್ನನು ಎಲ್ಲ ರಿಗೂ ಆಪ್ತನಾಗಿ, ಸಲಹೆಗಳನ್ನು ಕೊಡುತ್ತಾ ಬಂದನು. ಮೆಲ್ಲಮೆಲ್ಲನೆ ರಾಜ್ಯ ಸೂತ್ರಗಳು ಆತನ ಕೈಯೊಳಕ್ಕೇ ಬಂದುಬಿದ್ದುವು. ದಿನದಿನಕ್ಕೆ ಡೈರೆಕ್ಟರುಗಳು ತಾವು ಅನಾಮಧೇಯರಾಗುತ್ತಿದ್ದೇವೆಂದು ತಿಳಿದು, ಆ ಪೈಕಿ ಮೂವರು ತಮ್ಮ ಉದ್ಯೋಗಗಳಿಗೆ ರಾಜೀನಾಮೆ ಕೊಟ್ಟು ಬಿಡುಗಡೆ ಹೊಂ ದಿದರು. ನೆಪೋಲಿಯನ್ನನು ನಯಭಯಗಳಿಂದಲೂ, ಯುಕ್ತಿ ಚಾತುರ್ಯ ಗಳಿಂದಲೂ ವರ್ತಿಸಿ ಅನೇಕ ಅಧಿಕಾರಿಗಳನ್ನು ತನ್ನ ಕಡೆ ಸೆಳೆದುಕೊಂ ಡನು. ರಾಷ್ಟ್ರದ ತರುಣ ಪಂಗಡಕ್ಕೆ ಆತನ ತಮ್ಮನೇ ಅಧ್ಯಕ್ಷನಾಗಿದ್ದುದ ರಿಂದ ಅದು ಆತನ ಆಜ್ಞಾಧೀನವಾಗಿಯೇ ಇದ್ದಿತು. ಡೈರೆಕ್ಟರರ ಕಾರ್ಯ ಸ್ಥಾನವೇ ರದ್ದುಪಡಿಸಲ್ಪಟ್ಟು, ಆಸ್ಥಾನದಲ್ಲಿ ಮೂವರು ಕೌನ್ಸಲರೆಂಬ ಪ್ರತಿನಿಧಿಗಳ ಒಂದು ಸಂಸ್ಥೆಯು ನಿರ್ಮಿತವಾಯಿತು. ಆ ಸಂಸ್ಥೆಗೆ ನೆಪೋ ಲಿಯನ್ನನೇ ನಾಯಕನಾಗಿ, ನೂತನ ರಾಜ್ಯಘಟನೆಯ ಮಸೂದೆಯೊಂದನ್ನು ಸಿದ್ಧಗೊಳಿಸಿದನು. ಅದನ್ನನುಸರಿಸಿ ಫ್ರಾನ್ಸ್‌ದೇಶದ ಐವತ್ತು ಲಕ್ಷ ಪ್ರಜೆ ಗಳಿಗೂ ಮತಾಧಿಕಾರವುಂಟಾಯಿತು. ರಾಜ್ಯ ಪರಿಪಾಲನೆಗಾಗಿ ನಾಲ್ಕು ಮುಖ್ಯಾಂಶಗಳು ರಚನೆಯಾದುವು. ಹೊಸಹೊಸ ಕಾನೂನುಗಳ ರಚನೆ ಗಾಗಿ ಸಲಹೆ ಕೊಡುವ ಕಾನ್ಸಿಲ್ ಆಫ್ ಸ್ಟೇಟ್ ಎಂಬುದೊಂದು, ಅದರ ಬಗ್ಗೆ ಚರ್ಚೆನಡಿಸಿ ಯುಕ್ತಾಯುಕ್ತ ವಿಮರ್ಶೆಮಾಡುವ ಟ್ರಿಬ್ಯುನೇಟ್ ಎಂಬುದೊಂದು, ಆ ಕಾನೂನುಗಳ ವಿಷಯದಲ್ಲಿ ಸಮ್ಮತಿ ಅಸಮ್ಮತಿಗಳನ್ನು ವ್ಯಕ್ತಪಡಿಸುವ ಲೆಜಿಸ್ಲೇಚರ್ ಎಂಬ ಮೂರನೆಯ ಶಾಖೆ; ಆ ಕಾನೂನಿನ

ವಿಷಯದಲ್ಲಿ ಆಚರಣೆಗಾಗಿ ತೀರ್ಮಾನವನ್ನು ನಿರ್ಣಯಿಸುವ ಸೀನೆಟ್ ಎಂಬುದೊಂದು, ಈ ನಾಲ್ಕು ಶಾಖೆಗಳ ಕಾರ್ಯವೂ ತೋರಿಕೆಗೆ ಬೇರೆ ಬೇರೆಯಾಗಿದ್ದರೂ, ಮೊದಲನೆಯ ಕೌನ್ಸಲನ ಅಭಿಪ್ರಾಯ ವನ್ನನುಸರಿಸಿಯೇ ನಡೆಯುವಂತಿದ್ದಿತು. ನೆಪೋಲಿಯನೇ ಮೊದಲನೆಯ ಕಾನ್ಸಲನಾಗಿದ್ದುದರಿಂದ ಆತನೇ 'ಅನಭಿಷಿಕ್ತರಾಜನೋ' ಎಂಬಂತೆ ಸಕಲ ಅಧಿಕಾರಗಳನ್ನು ನಡೆಯಿಸುತ್ತಿದ್ದನು.



## ಅಧ್ಯಾಯ ೪ "ಬಂಧನದಲ್ಲಿ"

ಫ್ರಾನ್ಸ್‌ದೇಶದ ಪರಿಪಾಲನಾ ಸೂತ್ರಗಳು ಹೀಗೆ ಕೈವಶವಾದೊಡ ನೆಯೇ ಆತನು ಅನೇಕ ಪ್ರಜಾಹಿತಕಾರ್ಯಗಳನ್ನು ಕೈಕೊಂಡನು. ಮೊದಲನೆಯದಾಗಿ ನೌಕಾಬಲವನ್ನು ವೃದ್ಧಿಗೊಳಿಸಿದನು. ರಾಜ್ಯದಲ್ಲಿ ವ್ಯವಸಾಯಕ್ಕೆ ಬೇಕಾದ ಕಾಲುವೆಕಟ್ಟೆಗಳ ಸೌಕರ್ಯಗಳನ್ನು ಹೆಚ್ಚಿಸಿ, ವಾಣಿಜ್ಯಾಭಿವೃದ್ಧಿಗೆ ಬೇಕಾದ ಅನುಕೂಲತೆಗಳನ್ನು ಒದಗಿಸಿದನು. ಹಲವು ಮಂದಿ ವಿದ್ವಾಂಸರ ಸಲಹೆಗಳನ್ನು ಪಡೆದು, ಮಕ್ಕಳ ಉಚಿತ ವಿದ್ಯಾಭ್ಯಾಸಕ್ಕೆಂದು ಹಲವು ವಿದ್ಯಾಲಯಗಳನ್ನು ಸ್ಥಾಪಿಸಿದನು. ದೇಶದ ತುಂಬ ಔಷಧಾಲಯಗಳನ್ನಿಡಿಸಿದನು. ವಿಸ್ತಾರವಾದ ರಸ್ತೆಗಳನ್ನು ದೇಶದ ಎಲ್ಲಾ ಭಾಗದಲ್ಲೂ ರಚಿಸಿ ಪ್ರಯಾಣ ಸೌಕರ್ಯವನ್ನೊದಗಿಸಿದನು. ತನ್ನ ವಾಸಸ್ಥಾನವಾಗಿದ್ದ ಟ್ಯೂಲರೀಜ ಎಂಬ ಅರಮನೆಯನ್ನು ಹೆಚ್ಚು ಶೃಂಗಾರಗೊಳಿಸಿ, ಸೀನದಿಗೊಂದು ರಮಣೀಯವಾದ ಸೇತುವೆಯನ್ನು ಕಟ್ಟಿಸಿದನು. ಪ್ಯಾರಿಸ್ ರಾಜಧಾನಿಯ ಸೌಂದರ್ಯವು ಆತನ ಕಾಲದಲ್ಲಿ ದಶಾಧಿಕವಾಗಿ ಹೆಚ್ಚಿತು. ಆತನು ಕೈಕೊಂಡ ಈ ಲೋಕಸೇವಾಕಾರ್ಯಗಳು, ಆತನಿಗೆ ವಿಶೇಷ ಜನಪ್ರೀತಿಯನ್ನು ಗಳಿಸಿಕೊಟ್ಟುವು. ಆತನು ಪ್ರಜಾಪಾಲನೆಯ ಕಾರ್ಯವನ್ನು ವಹಿಸುವ ರಾಜರ ಕರ್ತವ್ಯವೇನೆಂಬುದನ್ನು ಕುರಿತು ಹೇಳಿರುವ ಮಾತುಗಳು ಮನನ ಯೋಗ್ಯವಾಗಿವೆ - 'ರಾಜನು ಜನ

ಸೇವೆಯನ್ನು ಗೌರವದಿಂದ ಮಾಡಬೇಕು. ಜನಮನರಂಜನೆಯು ಅವರ ಹಿತಸಾಧನೆಯಿಂದಲೇ ಪ್ರಾಪ್ತವಾಗುವುದಲ್ಲದೆ ಮತ್ತಾವುದರಿಂದಲೂ ಅವರನ್ನು ಸಂತುಷ್ಟಿಗೊಳಿಸಲು ಸಾಧ್ಯವಿಲ್ಲ. ಮುಖಸ್ತುತಿಯಿಂದ ಅವರನ್ನು ಮೆಚ್ಚಿಸಲೆತ್ನಿಸುವುದು ಅಪಾಯಕರವು. ಅವರಿಗೆ ಬೇಕು ಬೇಕಾದುದನ್ನೆಲ್ಲ ಕೊಟ್ಟು ತೃಪ್ತಿಪಡಿಸಬೇಕೆಂಬುದೂ ಸಾಧ್ಯವಿಲ್ಲ. ಅವರನ್ನು ಅಸಂತುಷ್ಟರನ್ನಾಗಿಸುವುದು ಮತ್ತೂ ಕೇಡು. ಅವರ ಅಸಂತುಷ್ಟಿಯು ದ್ವೇಷವಾಗಿ ಪರಿಣಮಿಸುವುದು. ಆದುದರಿಂದ ರಾಜನು, ಪ್ರಜಾಹಿತ ಸಾಧನೆಯನ್ನೇ ತ್ರಿಕರಣಪೂರ್ವಕವಾಗಿ ಗಮನಿಸಿ, ನಿಸ್ಪೃಹನಾಗಿ ಜನಸೇವೆಗೆ ಸಿದ್ಧನಾಗಬೇಕು.' ಆಹಾ, ಇವು ಎಂತಹ ಉದಾತ್ತ ತತ್ವಗಳು.! ಈ ಧ್ಯೇಯವನ್ನನುಸರಿಸಿ ರಾಜ್ಯಭಾರವು ನಡೆವಂತಾದರೆ ದೇಶದಲ್ಲಿ ಅಶಾಂತತೆಯು ಏಕುಂಟಾದೀತು ?

ನೆಪೋಲಿಯನನು ಯುದ್ಧಜೀವಿಯೇ ಆದರೂ ಬೇಕೆಂದು ಕಾಲ್ಕೆರೆದು ಯುದ್ಧಕ್ಕೆ ತೊಡಗುವ ಸ್ವಭಾವದವನಲ್ಲ : ಅವನಿಗೆ ಬೇಕಾದುದು ದೇಶವು ಶಾಂತವಾಗಿರಬೇಕೆಂಬುದು. ಮೇಲ್ಕಂಡಂತೆ ಫ್ರಾನ್ಸ್‌ದೇಶದಲ್ಲೇನೋ ಒಂದು ಬಗೆಯಿಂದ ಶಾಂತತೆಯು ಏರ್ಪಟ್ಟಂತಾಯಿತು. ಆದರೆ ಅಷ್ಟರಿಂದಲೇ ಆತನಿಗೆ ತೃಪ್ತಿಯುಂಟಾಗಲಿಲ್ಲ. ಅಂತರ ರಾಷ್ಟ್ರೀಯ ಶಾಂತತೆಯಿಲ್ಲದೆ, ತನ್ನ ದೇಶದಲ್ಲಿ ಮಾತ್ರ ಉಂಟಾದ ಶಾಂತತೆಯು ಬಹುಕಾಲ ಉಳಿಯಲಾರದೆಂದು ತೋರಲು, ಇಂಗ್ಲೆಂಡ್, ಸ್ಪೇನ್, ಪ್ರಷ್ಯಾ, ರಷ್ಯಾ, ಆಸ್ಟ್ರಿಯಾ-ಮೊದಲಾದ ದೇಶಗಳೊಂದಿಗೆ ಸಂಧಾನನಡೆಸಿದನು. ಇಂಗ್ಲೆಂಡ್ ಮತ್ತು ಆಸ್ಟ್ರಿಯಾದವರು ಮಾತ್ರ ಆತನ ಸಲಹೆಗಳಿಗೆ ಒಪ್ಪಲಿಲ್ಲ. ಮಿಕ್ಕವರೊಂದಿಗೆ ವಿವಿಧಯುಕ್ತಿ ಪ್ರತ್ಯುಕ್ತಿಗಳಿಂದ ಸಂಧಿಯೇರ್ಪಟ್ಟಂತಾಗಲು, ನೆಪೋಲಿಯನನು, ಆಸ್ಟ್ರಿಯಾದೇಶದಮೇಲೆ ಯುದ್ಧಕ್ಕಾಗಿ ಸೈನ್ಯವನ್ನು ಸಿದ್ಧಗೊಳಿಸಿದನು. ಅಪಾರವಾದ ಸೈನ್ಯಸಾಮಗ್ರಿಯೂ, ಐವತ್ತುಸಾವಿರಕ್ಕೆ ಮೇಲ್ಪಟ್ಟ ಸಂಖ್ಯೆಯ ಸೈನಿಕರೂ ಕಡಿದಾದ ಆಲ್ಪ್ಸ್‌ಪರ್ವತದ ಗಿರಿಕಂದರಗಳಲ್ಲಿ ಮಹಾ ಅಪಾಯಕರಗಳಾದ ಮಾರ್ಗಗಳಲ್ಲಿ ಪ್ರಯಾಣಮಾಡಿ ಆಸ್ಟ್ರಿಯಾದೇಶವನ್ನು ತಲುಪಿದರು. ನೆಪೋಲಿಯನನು ಆಸ್ಟ್ರಿಯನರಿಗೆ ಪರಮಾಶ್ಚರ್ಯವುಂಟಾಗುವಂತೆ ದುರ್ಗಮ ಆಲ್ಪ್ಸ್‌ಪರ್ವತದ ಮಾರ್ಗವಾಗಿ

ಯೇ ಬಂದು, ಪರ್ವತದಿಂದ ಉರುಳುವ ದೊಡ್ಡ ಬಂಡೆಯಂತೆ ಅವರ ಸೈನ್ಯ ದಮೇಲೆ ಬಿದ್ದನು. ಸೆಂಟ್‌ಬಾರ್ಡ್ ಎಂಬೊಂದು ಭದ್ರವಾದ ಕೋಟೆಯು ಆಸ್ಟ್ರಿಯರ ಕೈತಪ್ಪಿಹೋಯಿತು. ನೆಪೋಲಿಯನ ಪ್ರಚಂಡಪರಾಕ್ರಮ ವನ್ನು ಕಂಡು ಆಸ್ಟ್ರಿಯನ್ ಸೈನ್ಯವು ಮುಗ್ಧವಾಯಿತು. ಮುಂದೆ ೧೮೦೦ ನೆಯ ಜೂನ್ ೧೪ರಲ್ಲಿ ಉಭಯ ಸೈನ್ಯಗಳೂ ಮ್ಯಾರೆಂಗೋ ಎಂಬಲ್ಲಿ ಪರ ಸ್ಪರ ಅಭಿಮುಖವಾದುವು. ಅಗ್ನಿವರ್ಷವು ಸುರಿಮಳೆಯಂತೆ ಸುರಿದು ಉಭಯ ಸೈನ್ಯದಲ್ಲೂ ಭಯಂಕರ ನಷ್ಟವಾಯಿತು. ಪ್ರಾರಂಭಕ್ಕೆ ಫ್ರೆಂಚ್ ಸೈನ್ಯಕ್ಕೆ ಅಪಜಯವಾದಂತೆ ತೋರಿದರೂ ನೆಪೋಲಿಯನು ಧೈರ್ಯಗೆ ಡದೆ, ಉಪಾಯದಿಂದ ಯುದ್ಧರಂಗದಿಂದ ಓಡಿದವರನ್ನೆಲ್ಲಾ ಬೇರೊಂದೆಡೆ ಯಲ್ಲಿ ಕಲೆಹಾಕಿ, ಗೆದ್ದೆವೆಂದು ವಿಶ್ರಮಿಸಿಕೊಂಡಿದ್ದ ಆಸ್ಟ್ರಿಯನ್ನರಮೇಲೆ ಸಿಡಿಲಿನಂತೆ ಬಂದೆರಗಿ ಒಮ್ಮೆಗೇ ಅವರನ್ನು ಸಂಪೂರ್ಣವಾಗಿ ಸೋಲಿಸಿಬಿ ಟ್ಟನು. ಈ ಯುದ್ಧದಿಂದ ಲಿಗ್ಯೂರಿಯಾ ಪಿಡ್‌ಮಾಂಟ್ ಮತ್ತು ಲೋಂ ಬಾರ್ಡಿ ಎಂಬೀಪ್ರಾಂತಗಳ ಎಲ್ಲಾ ಕೋಟೆಗಳೂ, ಮೆನ್ಸಿಜನದಿಯವರೆಗಿನ ಎಲ್ಲಾ ಭಾಗಗಳೂ ಫ್ರಾನ್ಸಿನ ಸ್ವಾಧೀನಕ್ಕೆ ಬಂದುವು.—

ಹೀಗೆ ವಿಜಯಮಾಲಿಕೆಯನ್ನು ಧರಿಸಿ, ತನ್ನ ದೇಶಮಾತೆಗೆ ಅಪಾರ ಕೀರ್ತಿಯನ್ನು ಸಂಪಾದಿಸಿಕೊಂಡು ಹಿಂದಿರುಗಿದ ತಮ್ಮ ವೀರಶಿರೋಮಣಿ ನೆಪೋಲಿಯನನ್ನು ಯೋಗ್ಯರೀತಿಯಿಂದ ಸತ್ಕರಿಸುವುದು ಹೇಗೆಂದು ಪ್ಯಾ ರಿಸ್ ನಗರವಾಸಿಗಳಿಗೆ ತೋರದಾಯಿತು. ಅವನು ಪ್ರಯಾಣಮಾಡಿದ ಫ್ರಾ ನ್ಸ್‌ದೇಶದ ರಾಜಮಾರ್ಗವನ್ನೂ ತಳಿರುಪತಾಕೆಗಳಿಂದ ಸಿಂಗರಿಸಿದ್ದರು. ಪ್ಯಾರಿಸ್‌ನಗರವನ್ನಂತೂ ತಳಿರುತೋರಣಪತಾಕೆಗಳಿಂದಲೂ, ಮಂಟಪಗ ಳಿಂದಲೂ, ವಿಜಯದೀಪೋತ್ಸವಗಳಿಂದಲೂ, ನೇತ್ರಾನಂದಕರವಾಗಿರುವಂತೆ ತಮಗೆ ಸಾಧ್ಯವಿದ್ದ ಎಲ್ಲಾ ಬಗೆಯಿಂದಲೂ ಸಿಂಗರಿಸಿ, ಆತನನ್ನು ಅಭೂತ ಪೂರ್ವವೈಭವದಿಂದ ಸತ್ಕರಿಸಿದರು. ನೆಪೋಲಿಯನು ಎಂಟು ಶ್ವೇತಾಶ್ವ ಗಳಿಂದ ಕಟ್ಟಲ್ಪಟ್ಟ ದಿವ್ಯರಥದಲ್ಲಿ ಕುಳಿತು, ಆ ನಗರದ ರಾಜಬೀದಿಗಳಲ್ಲಿ ಕಿಕ್ಕಿರಿದು ನೆರೆದಿದ್ದ ಲಕ್ಷಾವಧಿ ಜನರಿಗೆ ನೇತ್ರೋತ್ಸವವನ್ನುಂಟುಮಾಡು ತ್ತಾ ಪ್ರಯಾಣಮಾಡಿ, ಟ್ಯುಲರೀಜ ಎಂಬ ಭವ್ಯವಾದ ಅರಮನೆಯಲ್ಲಿ ಇಳಿ ದನು. ತಮ್ಮ ದೇಶಕ್ಕೆ ಅಖಂಡ ವಿಜಯವನ್ನು ಸಂಪಾದಿಸಿ, ಮಾತೃದೇಶ

ವನ್ನು ಜಗತ್ತಿನ ದೃಷ್ಟಿಯಲ್ಲಿ ಗೌರವನೀಯನಾದುದನ್ನಾಗಿಸಿದ ದೇಶಭಕ್ತನ ವಿಷಯದಲ್ಲಿ, ಪ್ರಜೆಗಳು ಈ ಬಗೆಯ ಪ್ರೀತಿವಿಶ್ವಾಸಗಳನ್ನು ತೋರಿಸಿದರೆ ಅದರಲ್ಲಿ ಆಶ್ಚರ್ಯವೇನಿದೆ ?

ಜಗತ್ತಿನಲ್ಲಿ - ಮುಖ್ಯವಾಗಿ ಯೂರೋಪುಖಂಡದಲ್ಲಿ ಶಾಂತತೆ ಸಮಾಧಾನಗಳು ಸ್ಥಾಪಿಸಲ್ಪಡಬೇಕು ಎಂಬ ನೆಪೋಲಿಯನನ ಆಶಯವು ಬಹುಮಟ್ಟಿಗೆ ಈಡೇರಿದ್ದಿತು. ಇಟಲಿ ಆಸ್ಟ್ರಿಯಾ ಮುಂತಾದ ರಾಷ್ಟ್ರಗಳು ಜಯಿಸಲ್ಪಟ್ಟುವು. ಸ್ಪೇನ್ ರಷ್ಯಾ ಮುಂತಾದ ಕೆಲರಾಷ್ಟ್ರಗಳೊಂದಿಗೆ ಮಾಡಿಕೊಳ್ಳಲ್ಪಟ್ಟ ಸ್ನೇಹವು ನಿರ್ಬಾಧಕವಾಗಿ ನಡೆದುಬಂದಿತ್ತು. ಇನ್ನು ಫ್ರಾನ್ಸಿಗೆ ಶತ್ರುಸ್ಥಾನದಲ್ಲಿದ್ದುದೆಂದರೆ ಇಂಗ್ಲೆಂಡ್ ದೇಶವೊಂದೇ! ನೆಪೋಲಿಯನನ ಶೌರ್ಯಸಾಮರ್ಥ್ಯಗಳೂ, ರಾಜನೀತಿನೈಪುಣ್ಯವೂ ಅವರಿಗೂ ಮನವರಿಕೆಯಾಗಿ, ಆತನೊಡನೆ ಸಂಧಿಮಾಡಿಕೊಳ್ಳಲು ಹೊಸಮಂತ್ರಿಮಂಡಲದವರು ಸಮ್ಮತಿಯಿತ್ತಿರು. ೧೮೦೨ನೆಯ ಮಾರ್ಚ ೨೭ನೆಯ ತಾರೀಖಿನಲ್ಲಿ ಈ ಎರಡು ರಾಷ್ಟ್ರಗಳಿಗೂ ಎಮಿಯಾನ್ಸ್ ಎಂಬಲ್ಲಿ ಒಂದು ಒಡಂಬಡಿಕೆ ಹುಟ್ಟಿತು. ವೀರಶಿರೋಮಣಿ ನೆಪೋಲಿಯನನು ನಾರೀಶಿರೋಮಣಿ ಜೋಸಫಯಿನ ಪತ್ನಿಯೊಂದಿಗೆ, ಟ್ಯುಲರೀಜ್ ಅರಮನೆಯಲ್ಲಿ ವಿಶೇಷ ವೈಭವದಿಂದ ವಾಸಮಾಡಿದನು. ಸಾಮಾನ್ಯ ಮನುಷ್ಯನಾಗಿ ಜನ್ಮಿಸಿದ ಆತನು ಸ್ವಸಾಮರ್ಥ್ಯದಿಂದ ಪಡೆದ ಆ ಪದವಿಯು ಅಭೂತಪೂರ್ವವಾದುದು. ದೇಶದೇಶಗಳ ರಾಯಭಾರಿಗಳೂ ಮಾಂಡಲಿಕರೂ ಬಂದು ಆತನ ದರ್ಶನ ಲಾಭಪಡೆಯಲಿಕ್ಕಾಗಿ, ಆ ಅರಮನೆಯಮುಂದೆ ಕಾದಿರುವರು. ಆತನ ಪತ್ನಿ ಜೋಸಫಯಿನಳು ವಜ್ರವೈಡೂರ್ಯಾದಿ ಅಮೌಲ್ಯಾಭರಣಗಳನ್ನು ಧರಿಸಿ, ನೆಪೋಲಿಯನನಿಗಿಂತಲೂ ಸ್ವಲ್ಪ ಮುಂಚಿತವಾಗಿಯೇ ಸಭಾಗೃಹವನ್ನು ಪ್ರವೇಶಿಸಿ ನಜರು ಮುಜರೆಗಳನ್ನು ಸ್ವೀಕರಿಸುವಳು. ನೆಪೋಲಿಯನನ ಈ ವೈಭವವು ಹಲವರ ಕಣ್ಣು ಕುಕ್ಕದಿರಲಿಲ್ಲ. ಅವನ ಉತ್ಕರ್ಷದ ವಿಷಯದಲ್ಲಿ ಹೆಚ್ಚು ಅಸೂಯೆಗೊಂಡವರೆಂದರೆ ಪೂರ್ವದ ರಾಜವಂಶೀಕರು. ಆತನನ್ನು ಈ ವೈಭವಶಿಖರದಿಂದ ಉರುಳಿಸಿ ಆ ಸ್ಥಾನವನ್ನು ಪುನಃ ಆಕ್ರಮಿಸಬೇಕೆಂದು ಅವರು ಅನೇಕ ಗುಪ್ತ ಸನ್ನಾಹಗಳನ್ನು ನಡೆಸಿದರು. ಆದರೆ ಅವುಗಳಲ್ಲಿ ಒಂದೂ ಯಶಸ್ವಿಯಾಗಲಿಲ್ಲ. ಪ್ರತಿಯಾಗಿ, ಫ್ರಾನ್ಸ

ದೇಶದ ಸೆನೇಟಿನವರು, ಆತನೇ ರಾಜಗದ್ದುಗೆಯನ್ನೇರಬೇಕೆಂದೂ, ಫ್ರಾನ್ಸ್‌ದೇಶಕ್ಕೆ ಸ್ವಾತಂತ್ರ್ಯವನ್ನೂ ಅಗಣಿತ ಐಶ್ವರ್ಯಲಾಭವನ್ನೂ, ಪ್ರಪಂಚದಲ್ಲಿ ಶಾಶ್ವತವಾದ ಕೀರ್ತಿಯನ್ನೂ ಸಂಪಾದಿಸಿ ಕೊಟ್ಟಿರುವ ಆತನಿಗೆ, ವಂಶಪಾರಂಪರ್ಯವಾಗಿ ಆ ದೇಶದ ರಾಜಪದವಿಯು ದಕ್ಕಬೇಕೆಂದೂ ತೀರ್ಮಾನಿಸಿ, ಆ ಬಗ್ಗೆ ಆತನನ್ನು ಪ್ರಾರ್ಥಿಸಿದರು.

ಫ್ರಾನ್ಸ್‌ದೇಶದ ಜನತೆಯ ಚರಿತ್ರೆಯಲ್ಲಿ ಇದೊಂದು ಪರಮಾಶ್ಚರ್ಯಕರ ವಿಚಾರವು. ಕೇವಲ ಕೆಲವರ್ಷಗಳ ಮುಂಚೆ ಯಾವ ಜನತೆಯು ರಾಜ್ಯಕ್ಕೆ ರಾಜನೆಂಬ ಏಕವ್ಯಕ್ತಿತ್ವ ಪ್ರಭುತ್ವವು ಅಪಾಯಕಾರಿಯೆಂದು ಬಗೆದು ರಾಜವಂಶವನ್ನೇ ನಿರ್ಮೂಲಗೊಳಿಸಲು ಯತ್ನಿಸಿದ್ದಿತೋ, ಅದೇ ಜನತೆಯು ಇಂದು ಪುನಃ ಮತ್ತೊಬ್ಬ ವ್ಯಕ್ತಿಶ್ರೇಷ್ಠನಿಗೆ ವಂಶಪಾರಂಪರ್ಯವಾಗಿ ರಾಜಪದವಿಯನ್ನು ಪ್ರಸಾದಿಸಲು ಮಾಲಿಕೆಯನ್ನು ಹಿಡಿದುನಿಂತಿದೆ. ನೆಪೋಲಿಯನ್ನು, ಜನತೆಯ ಆ ಪ್ರಾರ್ಥನೆಯನ್ನು ಅಂಗೀಕರಿಸಿದನು. ಗಲಾಟೆಯ ಮೇಲೆ ಗಲಾಟೆಯ ಬಳಿ ಪಟ್ಟಾಭಿಷೇಕಮಹೋತ್ಸವವು, ರೋಮ್‌ನಗರದಿಂದ ಬಂದಿದ್ದ ಮತಾಚಾರ್ಯ ಪೋಪನ ನೇತೃತ್ವದಲ್ಲಿ ಅತಿಶಯ ವೈಭವದಿಂದ ನೆರವೇರಿತು. ಪ್ಯಾರಿಸ್‌ನಗರವು ಸುರನಗರಿಯಂತೆ ಪ್ರಕಾಶಿಸಿತು. ದೇಶದೇಶದ ರಾಜಾಧಿರಾಜರು ತಮ್ಮ ಪ್ರತಿನಿಧಿಗಳ ಮೂಲಕ ಕಪ್ಪಕಾಣಿಕೆಗಳನ್ನು ಕಳುಹಿಸಿ ಆತನ ಸಾರ್ವಭೌಮಪದವನ್ನು ಒಪ್ಪಿಕೊಂಡರು. ಛತ್ರಚಾಮರಾದಿಗಳೊಂದಿಗೆ, ರಾಜದಂಡವನ್ನು ಸ್ವೀಕರಿಸಿ, ಶೂರಶಿಖಾಮಣಿ ನೆಪೋಲಿಯನು ರಾಜತೇಜದಿಂದ ಒಪ್ಪಿದನು. ಜೋಸಫಯಿನ್ ನೆಪೋಲಿಯನರು ಸಾರ್ವಭೌಮಪದಕ್ಕೆ ಪಟ್ಟಾಭಿಷೇಕಹೊಂದಿ ಪರಮಾನಂದದಿಂದ ಟ್ಯುಲರೀಜ ಅರಮನೆಯಲ್ಲಿ ವಾಸಿಸತೊಡಗಿದರು. ನೆಪೋಲಿಯನ್ ಚಕ್ರವರ್ತಿಯು ಹಲವು ಯುದ್ಧರಂಗಗಳಲ್ಲಿ ತನ್ನ ಕೈಕೆಳಗಿದ್ದು ಕಲಿತನದಿಂದ ಹೋರಾಡಿದ ಶೂರಸೇನಾನಿಗಳಿಗೆ 'ಮಾರ್ಷಲ್ ಆಫ್ ಫ್ರಾನ್ಸ್' ಎಂಬ ಬಿರುದನ್ನೂ, ಮತ್ತೆ ಕೆಲವರಿಗೆ, 'ಲೀಜನ್ ಆಫ್ ಆನರ್' ಎಂಬ ಬಿರುದು ಪದಕವನ್ನೂ ಕೊಟ್ಟು ಆದರಿಸಿದನು. ತರುವಾಯ ಇಟಲಿಗೂ ಪ್ರಯಾಣಮಾಡಿ, ಕಿರೀಟಧಾರಣಮಾಡಿಕೊಂಡು, ರಾಜನೆಂದು ಗೌರವಿಸಲ್ಪಟ್ಟನು.

ನೆಪೋಲಿಯನ್ನನಿಗೆ ಬಾಲ್ಯದಿಂದಲೂ ಅಭ್ಯಾಸವಾಗಿದ್ದ ನಿರಂತರ ಕಾರ್ಯಾಸಕ್ತಿಯು, ಈಗ ಸಂಪೂರ್ಣಫಲಪ್ರದವಾಯಿತು. ಫ್ರಾನ್ಸ್ ಇಟಲಿ ಎರಡು ದೇಶಗಳ ಕ್ಷೇಮಚಿಂತನೆ; ತನ್ನ ಉತ್ಕರ್ಷತೆಯನ್ನು ಸಹಿಸದೆ, ಎದುರಿಸಿ, ಪದಭ್ರಷ್ಟನನ್ನಾಗಿ ಮಾಡಲು ಸಿದ್ಧರಾಗಿ ಸಮಯನಿರೀಕ್ಷಣೆಯಲ್ಲಿದ್ದ ಸುತ್ತುಮುತ್ತಲಿನ ದೇಶಗಳವರಿಂದ ಕೇಡುಂಟಾಗದಂತೆ ಸ್ವಸಂರಕ್ಷಣೆ, ಈ ಮುಂತಾದ ಕಾರ್ಯಗಳಿಗಾಗಿ ಆತನು ದಿನಕ್ಕೆ ಹದಿನಾರು ಹದಿನೆಂಟುಗಂಟೆಗಳವರೆಗೆ ಸರ್ವದಾ ಕಾರ್ಯತತ್ಪರನಾಗಿರುವನು. ಅಂದಿನ ಕಾರ್ಯವನ್ನು ಎಂದಿಗೂ ಮಾರನೆಯದಿನಕ್ಕೆ ಇಡುತ್ತಿರಲಿಲ್ಲ. ಇಂತಹ ಪ್ರಯತ್ನಶೀಲನಿಗೆ ಯಾವ ಕಾರ್ಯವು ತಾನೇ ಅಸಾಧ್ಯವೆನ್ನಿಸೀತು?

ನೆಪೋಲಿಯನ್ನನು ಚಕ್ರವರ್ತಿ ಸಾರ್ವಭೌಮನೆಂದು ಪಟ್ಟಾಭಿಷೇಕ ಮಾಡಿಸಿಕೊಂಡುದು, ಯೂರೋಪಿನ ಇತರ ರಾಷ್ಟ್ರಗಳವರಿಗೆ, ಆತನ ಅಭಿವೃದ್ಧಿಯ ವಿಷಯದಲ್ಲಿ ಈವರೆಗೇ ಇದ್ದ ಅಸೂಯೆಯನ್ನು ಮತ್ತಷ್ಟು ಹೆಚ್ಚಿಸಿತು. ರಷ್ಯಾ, ಪ್ರಷ್ಯಾ, ಸ್ವೀಡನ್, ಆಸ್ಟ್ರಿಯಾದೇಶಗಳವರು ಆಂಗ್ಲೇಯರ ಧನಸಹಾಯಗೊಂಡು, ಫ್ರಾನ್ಸಿನಮೇಲೆ ಯುದ್ಧಮಾಡಬೇಕೆಂದು ಒಪ್ಪಂದಮಾಡಿಕೊಂಡು ತಮ್ಮ ಅಪಾರ ಸೈನ್ಯಗಳನ್ನು ಆತನಮೇಲೆ ಹೊರಡಿಸಿದರು. ನೆಪೋಲಿಯನ್ನನ ಯುದ್ಧವಿದ್ಯಾಚಾತುರ್ಯವು, ಅಮಾನುಷವಾದುದು; ಲಕ್ಷಲಕ್ಷವಾಗಿ ತನ್ನ ಮೇಲೆ ಸಾಗಿಬರುತ್ತಿದ್ದ ರಷ್ಯಾ, ಆಸ್ಟ್ರಿಯಾ ದೇಶಗಳ ಅಪಾರ ಸೈನ್ಯಗಳನ್ನು ನಿರ್ಭಯವಾಗಿ ಎದುರಿಸಿ, ಕೆಲವು ಗಂಟೆಗಳಲ್ಲೇ ಜಯಸಂಪಾದನೆಮಾಡುತ್ತಿದ್ದನು. ಅವನ ಯುದ್ಧವಿದ್ಯಾಚಾತುರ್ಯವೂ ಧೈರ್ಯಸಾಹಸಗಳೂ ಸರ್ವರಿಗೂ ಪರಮಾಶ್ಚರ್ಯವನ್ನುಂಟುಮಾಡಿದುವು. ಭಯಂಕರ ಯುದ್ಧಗಳಲ್ಲಿ ಪ್ರಷ್ಯಾ, ಆಸ್ಟ್ರಿಯಾ, ರಷ್ಯಾ ದೇಶಗಳು ಪರಾಜಯಹೊಂದಿ ಚಕ್ರವರ್ತಿಯೊಂದಿಗೆ ಸಂಧಿಮಾಡಿಕೊಂಡುವು. ಯೂರೋಪಿನ ಈ ಪ್ರಮುಖರಾಷ್ಟ್ರಗಳ ಪಾಡೇ ಹೀಗಾದಮೇಲೆ ಇನ್ನು ಚಿಕ್ಕಪುಟ್ಟ ರಾಜ್ಯಗಳನ್ನು ಕೇಳುವರಾರು! ದಾನಶೂರನಾದ ನೆಪೋಲಿಯನ್ನನು, ತನ್ನ ಕೈಕೆಳಗೆ ಕಲಿತನದಿಂದ ಕಾದಿದ ಸರದಾರರಿಗೆ ಅಸಂಖ್ಯ ದ್ರವ್ಯವನ್ನು ಬಹುಮಾನವಾಗಿ ಕೊಟ್ಟನು. ಅನೇಕರಿಗೆ ಸಂಸ್ಥಾನಗಳನ್ನೇ ಕೊಟ್ಟುಬಿಡುತ್ತಿದ್ದನು. ಇಟಲಿಯಲ್ಲಿ ಜೋಸಫಯಿನಳ ಮಗನನ್ನು

ಸರ್ವಾಧಿಕಾರಿಯನ್ನಾಗಿಟ್ಟು, ಅವನಿಗೆ ಬವೇರಿಯಾದ ಅರಸನ ಮಗಳನ್ನು ಲಗ್ನ ಮಾಡಿಸಿದನು. ತನ್ನ ಅಣ್ಣತಮ್ಮಂದರಿಗೆಲ್ಲ, ರಾಜ್ಯಾಧಿಪತ್ಯಗಳನ್ನಿತ್ತು ಸಂತೋಷಪಡಿಸಿದನು.

ಪ್ರಷ್ಯಾದೇಶದ ಅಗಣಿತ ಸೈನ್ಯವನ್ನು ಜಯಿಸಿದಮೇಲೆ ಚಕ್ರವರ್ತಿ ನೆಪೋಲಿಯನನು ಬರ್ಲಿನ್‌ರಾಜಧಾನಿಯನ್ನು ಪ್ರವೇಶಿಸಿ, ಅಲ್ಲಿಯ ರಾಜನಾಗಿದ್ದ ಫ್ರೆಡರಿಕ ದಿ ಗ್ರೇಟ್ ಎಂಬಾತನ ಖಡ್ಗವನ್ನೂ, ಅಪೂರ್ವವೆನ್ನಿಸಿದ್ದ ಆತನ ಗಡಿಯಾರವನ್ನೂ ತೆಗೆದುಕೊಂಡು ಪ್ಯಾರಿಸ್ ರಾಜಧಾನಿಗೆ ಕಳುಹಿಸಿದನು. ಮತ್ತು ಇಂಗ್ಲೆಂಡ್ ದೇಶದವರು, ತನ್ನ ದೇಶದ ಸರಕುಗಳನ್ನು ಉಪಯೋಗಿಸಕೂಡದೆಂದು ಹೊರಡಿಸಿದ್ದ ಆಜ್ಞೆಗೆ ವಿರೋಧವಾಗಿ,-'ಬರ್ಲಿನ್ ಡಿಕ್ರೀ' ಎಂಬೊಂದು ಆಜ್ಞಾಪತ್ರವನ್ನು ಹೊರಡಿಸಿ, ಇಂಗ್ಲೆಂಡಿನ ಸರಕನ್ನು ಯಾರೂ ಉಪಯೋಗಿಸಕೂಡದೆಂದು ಶಾಸನ ಮಾಡಿದನು. ಮತ್ತೊಂದುವೇಳೆ ರಷ್ಯಾದ ಆರುಲಕ್ಷ ಸೈನ್ಯದೊಂದಿಗೆ ಭಯಂಕರ ಕಾಳಗ ನಡೆದು ಅದರಲ್ಲೂ ನೆಪೋಲಿಯನನ ಸೈನ್ಯವೇ ಜಯಸಂಪಾದನೆ ಮಾಡಿತು. ಮುಖ್ಯವೇನು! ಯೂರೋಪಿನ ಸಕಲ ರಾಷ್ಟ್ರಗಳೂ, ನೆಪೋಲಿಯನನ ನಾಮಸ್ಮರಣೆಯಿಂದ ಭಯಕಂಪಿತವಾಗುವುವು. ರಾಜಾಧಿರಾಜರೂ ಆತನೊಂದಿಗೆ ಯುದ್ಧವೆಂದರೆ, ತಮಗೆ ಪರಾಜಯುವೇ ಸಿದ್ಧ ಎಂದುಕೊಳ್ಳುವಂತಾಯಿತು.

ಹಲವು ಯುದ್ಧಗಳಲ್ಲಿ ಜಯಸಂಪಾದನೆ ಮಾಡಿ ರಾಜಧಾನಿಯನ್ನು ಪ್ರವೇಶಿಸಿದ ತರುವಾಯ ದೇಶ ಕ್ಷೇಮಕ್ಕಾಗಿ ಹಲವು ಪ್ರಜಾಹಿತ ಕಾರ್ಯಗಳನ್ನು ಕೈಕೊಂಡು, ಒಂದೇ ಮನಸ್ಸಿನಿಂದ ಕೊನೆಗಾಣಿಸಿದನು. ವಿವಿಧ ಶಾಸ್ತ್ರಪಾರಂಗತರನ್ನು ಒಂದೆಡೆ ಸೇರಿಸಿ, ಅವರ ಸಲಹೆಗಳನ್ನು ಪಡೆದು ಹಲವೆಡೆಗಳಲ್ಲಿ ವಿಶ್ವವಿದ್ಯಾನಿಲಯಗಳನ್ನು ಸ್ಥಾಪಿಸಿ, ಅಲ್ಲಿ ವಿದ್ಯಾಭ್ಯಾಸ ಕಾರ್ಯವು ಸಾಂಗವಾಗಿ ನಡೆವಂತೆ ಸಕಲ ಅನುಕೂಲತೆಗಳನ್ನೂ ಒದಗಿಸಿಟ್ಟನು. ರಾಜನೀತಿಶಾಸ್ತ್ರದಲ್ಲಿ ಅದ್ವಿತೀಯ ಪ್ರಜ್ಞಾನಿಧಿಯಾದ ಆತನು ಶಾಸ್ತ್ರಜ್ಞರ ಸಹಾಯಗೊಂಡು ಕೋಡ್ ಡೀ ನೆಪೋಲಿಯನ್ ಎಂಬೊಂದು, ಬೃಹದ್ಗ್ರಂಥವನ್ನು ರಚಿಸಿದನು. ಅದು ಯೂರೋಪುಖಂಡದಲ್ಲಿ ರಾಜ

ನೀತಿ ವಿಚಾರದಲ್ಲಿ ನಮ್ಮಲ್ಲಿಯು ಮನಸ್ಮೃತಿಯಂತೆ ಈಗಲೂ ಉಪಯೋಗಪಡುತ್ತದೆ.

ನೆಪೋಲಿಯನನು ಈವರೆಗೆ ಕಂಡಂತೆ, ಅನೇಕಾನೇಕ ಯುದ್ಧಗಳಲ್ಲಿ ಜಯಸಂಪಾದನೆಮಾಡಿ ವೀರಶ್ರೇಷ್ಠನೆಂಬ ಏಕಮಾತ್ರ ಬಿರುದಿಗೆ ಪಾತ್ರನಾದನು, ಅಪಾರದ್ರವ್ಯವನ್ನು ಗಳಿಸಿದನು, ಚಕ್ರವರ್ತಿಪದವು ಪ್ರಾಪ್ತವಾಯಿತು, ಸಕಲ ದೇಶಗಳ ರಾಜಾಧಿರಾಜರಿಂದ ಅನುಪಮ ಗೌರವವು ಲಭ್ಯವಾಯಿತು, ಸುಖಸಾಮ್ರಾಜ್ಯದಲ್ಲಿ ಓಲಾಡಿದನು, ಇಷ್ಟಾದರೂ, ಸಂತಾನವಿಲ್ಲದ ಕೊರತೆಯೊಂದು ಆತನಿಗೆ ತಪ್ಪಲಿಲ್ಲ. ಆ ವೇಳೆಗೆ ಜೋಸಫಯಿನಳು ನಾಲ್ವತ್ತೈದು ವರ್ಷಕ್ಕೆ ಮೀರಿದುದರಿಂದ ಇನ್ನು ಅವಳಲ್ಲಿ ಮಕ್ಕಳಾಗುವ ಸಂಭವ ತೋರಲಿಲ್ಲ. ರಾಜ್ಯಕ್ಕೆ ಒಬ್ಬ ಉತ್ತರಾಧಿಕಾರಿಯನ್ನು ಕಲ್ಪಿಸಲಿಕ್ಕಾಗಿ ಬೇರೊಂದು ವಿವಾಹ ಮಾಡಿಕೊಳ್ಳಬೇಕಾದುದು ಅತ್ಯವಶ್ಯವೆಂದು ಆತನ ಹಿತಚಿಂತಕರನೇಕರು ಸಲಹೆ ಕೊಟ್ಟರು. ಒಬ್ಬ ಪತ್ನಿಯು ಜೀವಂತಳಾಗಿರುವಾಗ ಬೇರೊಬ್ಬಳನ್ನು ವರಿಸುವುದು ಧರ್ಮವಿರೋಧವಾದುದರಿಂದ, ಪ್ರಾಣಪ್ರಿಯೆಯಾದ ಜೋಸಫಯಿನ್ ಚಕ್ರವರ್ತಿನಿಯನ್ನು ತ್ಯಜಿತಬೇಕಾದುದು ಆವಶ್ಯಕವಾಯಿತು. ಆ ವಿಯೋಗವು ಪತಿಪತ್ನಿಯರಿಬ್ಬರಿಗೂ ಅಪಾರ ದುಃಖವನ್ನುಂಟುಮಾಡಿತೆಂದು ಹೇಳಬೇಕಾದುದಿಲ್ಲ. ಆದರೂ ವಿಧಿಯಿಲ್ಲದೆ, ಚಕ್ರವರ್ತಿಯು ಜೋಸಫಯಿನಳನ್ನು ಆ ದೇಶದ ಪದ್ಧತಿಗನುಸಾರವಾಗಿ ವಿವಾಹ ವಿಚ್ಛೇದನ ಮಾಡಿಕೊಂಡು ಪರಿತ್ಯಜಿಸಿದನು. ತರುವಾಯ ಆಸ್ಟ್ರಿಯಾದೇಶದ ರಾಜಪುತ್ರಿ ಮೇರಿಯಾ ಲೂಯಿಸಾ ಎಂಬ ಹದಿನೆಂಟುವರ್ಷದ ಒಬ್ಬ ಕನ್ಯಾಮಣಿಯನ್ನು ವಿವಾಹಮಾಡಿಕೊಂಡನು. ಈ ವಿವಾಹವು ಅತ್ಯಂತ ವಿಜೃಂಭಣೆಯಿಂದ ನೆರವೇರಿತು. ಚಕ್ರವರ್ತಿಯು ವಿವಾಹಾಂಗವಾಗಿ ಅನೇಕ ದಾನಧರ್ಮಗಳನ್ನು ಮಾಡಿದನು. ತನ್ನ ಸೈನ್ಯದಲ್ಲಿನ ಆರುಸಾವಿರಮಂದಿ ಅವಿವಾಹಿತರಿಗೆ ಕುಲೀನ ಸ್ಥಳಗಳಲ್ಲಿ ಹುಟ್ಟಿಬೆಳೆದ ಕನ್ಯೆಯರನ್ನು ನೋಡಿಸಿ, ತನ್ನ ಸ್ವಂತ ಖರ್ಚಿನಿಂದ ವಿವಾಹಮಾಡಿದನು. ಚಕ್ರವರ್ತಿಯ ಔದಾರ್ಯವನ್ನು ಸಕಲರೂ ಮುಕ್ತಕಂಠದಿಂದ ಹೊಗಳಿ ಕೊಂಡಾಡಿದರು.

ಸಾರ್ವಭೌಮನಾದ ತನ್ನ ಪತಿಯೊಂದಿಗೆ ವಿಶೇಷ ವೈಭವದಿಂದ

ಕಾಲಯಾಪನೆ ಮಾಡಿಕೊಂಡಿದ್ದ ಚಕ್ರವರ್ತಿನಿಯ ಉದರದಲ್ಲಿ, ೧೮೧೧ನೆಯ ಮಾರ್ಚಿ ೧೯ನೆಯ ಶುಭದಿನದಲ್ಲಿ ಒಬ್ಬ ಕುಮಾರನು ಜನಿಸಿದನು. ಚಕ್ರವರ್ತಿಗಾದ ಆನಂದಕ್ಕೆ ಪಾರವಿಲ್ಲ. ಪ್ರಜಾಪರಿವಾರಗಳವರೂ, ತಮ್ಮ ಚಕ್ರವರ್ತಿಯು ಪುತ್ರವಂತನಾದುದಕ್ಕಾಗಿ ಸಂತಸಗೊಂಡರು. ತನ್ನ ಪದವಿ ಮತ್ತು ಐಶ್ವರ್ಯಗಳಿಗೆ ಉತ್ತರಾಧಿಕಾರಿಯಾಗಿ ಸಂತಾನಾಂಕುರವೊಂದು ತಲೆದೋರಲಿಲ್ಲವೆಂದು ಬಹುದಿನಗಳಿಂದಲೂ ಹಂಬಲಿಸಿ ಅದಕ್ಕಾಗಿಯೇ ಪ್ರಾಣಪ್ರಿಯಳಾದ ಜೋಸಫೈನ್ ರಾಣಿಯನ್ನು ಕೂಡ ತೊರೆದು ಪ್ರತ್ಯೇಕ ವಿವಾಹವನ್ನು ಮಾಡಿಕೊಂಡಿದ್ದ ಆತನಿಗೆ ಪುತ್ರಜನನವು ಎಷ್ಟು ಸಂತೋಷಪ್ರದವಾಗಿದ್ದಿತೆಂದು ಹೇಳಬೇಕಾದುದೇನು! ತಾಯಿತಂದೆಗಳಿಬ್ಬರೂ ಮಗುವನ್ನು ಅತಿಶಯ ಪ್ರೀತಿ ವಾತ್ಸಲ್ಯಗಳಿಂದ ತಮ್ಮ ಬಹಿಃಪ್ರಾಣವೋ ಎಂಬಂತೆ ಕಾಪಾಡಿಕೊಂಡು ಬಂದರು. ನೆಪೋಲಿಯನನು ಈ ಸಂದರ್ಭದಲ್ಲಿ ಅತ್ಯುಚ್ಚ ದೆಸೆಯುಲ್ಲಿದ್ದನು. ಅವನು ಕೈಯಿಟ್ಟ ಕಾರ್ಯದಲ್ಲಿ ಅಪಜಯಗೊಂಡಿದ್ದುದಿಲ್ಲ. ರಾಜಾಧಿರಾಜರೊಂದಿಗೆ ಮಾಡಿದ ನೂರಾರು ಯುದ್ಧಗಳಲ್ಲಿ ಸೋಲೆಂಬ ಶಬ್ದವನ್ನು ಕೇಳಿದುದಿಲ್ಲ. ಅಪಾರ ಐಶ್ವರ್ಯ, ರಾಶಿರಾಶಿ ವಜ್ರವೈಢೂರ್ಯಗಳು, ಮುತ್ತು ರತ್ನಗಳು. ರಾಜಾಧಿರಾಜರು ಆಜ್ಞಾಧಾರಕರಾಗಿ ನಿಲ್ಲುತ್ತಿದ್ದಾರೆ. ಅವನ ಆಜ್ಞೆಗೆ ಪ್ರತಿ ಹೇಳುವ ಪ್ರಾಣಿಯಿಲ್ಲ. ಸಾರ್ವಭೌಮ ಪದವಿ, ಮನೋಹಾರಿಣಿಯಾದ ತುಂಬುಯೌವನದ ಪತ್ನಿ. ಸುಕೃತವೇ ಮೂರ್ತಿಭವಿಸಿದಂತೆ ಉದ್ಭವಿಸಿದ ಸುಕುಮಾರ. ಇಷ್ಟರೊಂದಿಗೆ ಅನುಪಮಪಾಂಡಿತ್ಯ. ಲೋಕೋಪಕಾರ ಮಾಡಬೇಕೆಂಬ ಸದಿಚ್ಛೆ, ಆಸ್ತಿಕತೆ, ವಾಚಕಮಹಾಶಯರೇ! ಹೀಗೆ ಸಕಲ ಸಂಪತ್ತುಗಳೂ ಏಕತ್ರ ಕಲೆತುಬರುವುದು, ಅಪೂರ್ವವಲ್ಲವೆ? ನಮ್ಮ ಕಥಾನಾಯಕನೂ ಯೋಗಭ್ರಷ್ಟನಾದ ಮಹಾನುಭಾವನೋ ಎಂಬಂತೆ ಈ ಸಕಲವಿಧ ಸಂಪತ್ತುಗಳಿಗೂ ಸ್ವಾಮಿಯಾಗಿ, ವೈಭವದ ಅತ್ಯುಚ್ಚ ಶಿಖರದಲ್ಲಿ ಕುಳಿತು ಕೆಲಕೆಲ ಆಧಿಪತ್ಯಮಾಡಿದನು. ಹೀಗೆ ವೈಭವ ಶಿಖರದ ಕೋಡಗಲ್ಲಮೇಲೆ ಕುಳಿತಿದ್ದ ನೆಪೋಲಿಯನ್ ಚಕ್ರವರ್ತಿಯು - ಮುಂದೆ ಸ್ವಲ್ಪದಿನಗಳೊಳಗಾಗಿಯೇ ಬಂಧನದಲ್ಲಿ ಸಿಕ್ಕಿ ನರಳಬೇಕಾಗುತ್ತದೆಂದು ಯಾರ ಊಹೆಗಾದರೂ ಬರಬಹುದೇ! ದೈವೀವಿಚಿತ್ರಾಗತಿಃ!!

# ಉ ಪ ಸಂ ಹಾ ರ

ನೆಪೋಲಿಯನ್ ಚಕ್ರವರ್ತಿಯು ತನ್ನ ಆಡಳಿತದಿಂದಲೂ, ದೇಶದೇಶಗಳ ಶತ್ರುಗಳನ್ನು ಹಲವು ಯುದ್ಧಗಳಲ್ಲಿ ಜಯಿಸಿದುದರಿಂದಲೂ ಸರ್ವತ್ರ ಶಾಂತಿಯು ವ್ಯಾಪಿಸಬಹುದೆಂದು ತಿಳಿದಿದ್ದನು. ಆದರೆ ಆತನ ಈ ಇಚ್ಛೆ ಮಾತ್ರ ನೆರವೇರಲಿಲ್ಲ. ಆತನ ಯುದ್ಧಗಳ ಫಲವಾಗಿ ಎಲ್ಲೆಲ್ಲೂ ಆತನಿಗೆ ಶತ್ರುಗಳು ಹುಟ್ಟಿಕೊಂಡರು. ದ್ವೇಷ ಮತ್ತು ಅಸೂಯೆಗಳಿಂದ ಕೂಡಿದ ಹಲವು ರಾಷ್ಟ್ರಗಳವರು ಅವನ ಅಳಿವನ್ನೇ ಕೋರುವವರಾದರು. ಚಕ್ರವರ್ತಿಯು, ರಷ್ಯದವರು ಕರಾರಿಗೆ ವಿರೋಧವಾಗಿ ಬ್ರಿಟಿಷರ ಸರಕುಗಳನ್ನು ಉಪಯೋಗಿಸತೊಡಗಿದರೆಂದು ಅವರನ್ನು ಶಿಕ್ಷಿಸಲೆಳಸಿ ಆರುಲಕ್ಷ ಸೈನ್ಯವನ್ನುಸಿದ್ಧಗೊಳಿಸಿ ಮಾಸ್ಕೋನಗರದಮೇಲೆ ದಂಡೆತ್ತಿದನು. ಚಳಿಯಿಂದಲೂ ಆಹಾರಾದಿಸಾಮುಗ್ರಿಗಳ ಅಭಾವದಿಂದಲೂ ಫ್ರೆಂಚ್‌ಸೈನ್ಯವು ಬಹುಮಟ್ಟಿಗೆ ಹಣ್ಣಾಯಿತು. ಅಷ್ಟರಲ್ಲಿ ಇತ್ತ ಯಾರೋ ದುರುಳರು ನೆಪೋಲಿಯನನು ಸತ್ತನೆಂದು ಪ್ಯಾರಿಸ್ ರಾಜಧಾನಿಯಲ್ಲಿ ಸುಳ್ಳು ವರ್ತಮಾನವನ್ನು ಹಬ್ಬಿಸಿದರು. ಆತನ ಆಧಿಪತ್ಯವನ್ನು ದ್ವೇಷಿಸುತ್ತಿದ್ದ ಅನೇಕ ವಿರೋಧಿಪಂಗಡಗಳು ಆಗ ಫ್ರಾನ್ಸಿನಲ್ಲಿದ್ದುದರಿಂದ, ಆಸಂದರ್ಭದಲ್ಲಿ ಹೊರಗಿರುವುದು ಅಪಾಯವೆಂದು ರಾಜಧಾನಿಯ ಕಡೆಗೆ ಪ್ರಯಾಣವಾದನು. ಆದರೆ ರಾಜಧಾನಿಯೆಲ್ಲವೂ ಶತ್ರುಮಯವಾಗಿದ್ದಿತು. ಅವನ ದುರದೃಷ್ಟಕಾಲಕ್ಕೆ ಮಿತ್ರರೆಲ್ಲರೂ ಶತ್ರುಗಳಾಗಿದ್ದರು. ರಾಜಪಕ್ಷೀಯರು ತಮ್ಮ ಬಲವನ್ನು ವಿಶೇಷವಾಗಿ ಬೆಳೆಸಿಕೊಂಡು, ಪ್ಯಾರಿಸ್ ನಗರದ ಕಡೆಗೆ ದಂಡೆತ್ತಿನಡೆದು ಚಕ್ರವರ್ತಿನಿಯನ್ನೂ ರಾಜಪುತ್ರನನ್ನೂ ಅರಮನೆಯಿಂದ ಹೊರಡಿಸಿದ್ದರು. ತಂದೆಯಂತೆಯೇ ಶೂರನಾದ ಆ ಪುತ್ರನು-'ತಮ್ಮ ತಂದೆಯು ಬರುವವರೆಗೆ ನಾನು ಈ ಅರಮನೆಯನ್ನು ಬಿಟ್ಟು ಹೋಗಲಾರೆನು' ಎಂದು ಹಟಕೊಟ್ಟನು. ಆದರೆ ಅದನ್ನು ಕೇಳುವರಾರು! ಬಲವಂತದಿಂದ ಅವರನ್ನು ರಾಜಗೃಹದಿಂದ ಹೊರಗೆಹಾಕಿ, ನೆಪೋಲಿಯನನಿಗೆ ಫ್ರಾನ್ಸ್ ರಾಜಸಿಂಹಾಸನದ ಯಾವ ಸಂಬಂಧವೂ ಇಲ್ಲವೆಂದು ಸೆನೇಟ್ ಸಭೆಯವರು ಜಾಹೀರ್ನಾಮೆಯನ್ನು ಹೊರಡಿಸಿದರು. ನೆಪೋಲಿಯನನು ಎಲ್ಬಾ ಎಂ

ಬೊಂದು ದ್ವೀಪದಲ್ಲಿ ನಾನೂರು ಮಂದಿ ಸೇವಕರೊಂದಿಗೆ ಹೋಗಿ ವಾಸಿಸ ಬಹುದೆಂದು ಅಪ್ಪಣೆ ದೊರೆಯಿತು.

ಪತಿಪತ್ನಿಯರಿಗೆ ಪುನಃ ದರ್ಶನಭಾಗ್ಯವೊದಗಲಿಲ್ಲ. ಆವಳ ತಂದೆ ಯು ತನ್ನ ಮಗಳನ್ನು ನೆಪೋಲಿಯನ್‌ಬಳಿಗೆ ಪುನಃ ಕಳುಹಲೊಪ್ಪಲಿಲ್ಲ. ಆತನ ಮಗನು ಇಪ್ಪತ್ತೊಂದುವರ್ಷ ವಯಸ್ಸಿನವರೆಗೆ ಬೆಳೆದು ತರು ವಾಯ ಕ್ಷಯರೋಗಪೀಡಿತನಾಗಿ ಸತ್ತನು. ಜೋಸಫಯಿನಳು ನೆಪೋಲಿಯನ್ ನಿಗೆ ಪ್ರಾಪ್ತವಾದ ದುರ್ಗತಿಯನ್ನು ಕೇಳಿ ಅತ್ಯಂತ ದುಃಖಪೀಡಿತಳಾದಳು. ತನ್ನಮರಣಪರ್ಯಂತ ಆತನ ಸೇವೆಮಾಡಿಕೊಂಡಿರಬೇಕಾಗಿ ಇಚ್ಛಿಸಿದ್ದಳಾ ದರೂ, ಅಷ್ಟರಲ್ಲೇ ರೋಗಹೆಚ್ಚಿ, ಶಕ್ತಿಕುಗ್ಗಿ ಮರಣಗಾಲವು ಸಮೀಪಿ ಸಿತು. ಪತಿಭಕ್ತಿಯುತಳಾದ ಆ ಸಾಧ್ವೀಮಣಿಯು ಮರಣಕಾಲದಲ್ಲಿ - ನೆಪೋಲಿಯನ್ನನನ್ನು ಸುರಕ್ಷಿತವಾಗಿರಿಸಿರೆಂದು ದೇವರಿಗೆ ಪ್ರಾರ್ಥಿಸಿಕೊಂಡು ಆತನ ನಾಮೋಚ್ಚಾರಣೆಯಲ್ಲೇ ಮೃತಳಾದಳು.

ಮಹಾ ಕರ್ತೃತ್ವಶಾಲಿಯಾದ ನೆಪೋಲಿಯನ್ನನು ಲೌಕಿಕ ಪ್ರಭುತ್ವದ ಕ್ಷಣಭಂಗುರತ್ವವನ್ನು ತಿಳಿದವನಾದುದರಿಂದ ಆದಕ್ಕಾಗಿ ವಿಶೇಷ ಮರುಗದೆ ತಾನು ವಾಸಿಸಿದ್ದ ಆ ನಡುಗಡ್ಡೆಯಲ್ಲೇ ವಿಶೇಷ ವ್ಯವಸಾಯ ಕೈಗಾರಿಕೆ ಪಶುಪಾಲನೆ ಮುಂತಾದುವುಗಳನ್ನು ಹೆಚ್ಚಿಸಿ ಅದನ್ನು ಬಹು ಅಭಿವೃದ್ಧಿ ಸ್ಥಿತಿಗೆ ತಂದನು. ಅಷ್ಟರಲ್ಲಿ ಇತ್ತ ಫ್ರಾನ್ಸಿನಲ್ಲಿ, ನೂತನ ಸರ್ಕಾರದವರ ರಾಜ್ಯಪಾಲನೆಯು ಪ್ರಜೆಗಳಿಗೆ ಸಮ್ಮತವಾಗದೆ ಪುನಃ ದಂಗೆ ದರೋಡೆಗಳಿಗೆ ಪ್ರಾರಂಭವಾಯಿತು. ನೆಪೋಲಿಯನ್ನನು ಧೈರ್ಯವಾಗಿ ಪುನಃ ಪ್ಯಾರಿಸ್ ರಾಜಧಾನಿಗೆ ಬಂದು ಪ್ರಜೆಗಳಿಗೆ ದರ್ಶನಕೊಟ್ಟನು. ನೆಪೋಲಿಯನ್ನನನ್ನು ಕಂಡೊಡನೆಯೇ ಪ್ರಜೆಗಳು ಪರಮಾನಂದಭರಿತರಾಗಿ ಆತನನ್ನು ತೋಳು ಗಳಮೇಲೆತ್ತಿಕೊಂಡು ಅರಮನೆಗೆ ಕರೆತಂದು ಆದರಿಸಿದರು. ರಾಜನು ರಾಜಧಾನಿಯನ್ನು ಬಿಟ್ಟು ಓಡಿಹೋದನು. ನೆಪೋಲಿಯನ್ನನು ಎಂದಿನಂತೆ ಯೇ ಪುನಃ ರಾಜ್ಯಭಾರವನ್ನು ಆರಂಭಿಸಿದನು.

ಸ್ಥಾನಭ್ರಷ್ಟತೆಯನ್ನು ಹೊಂದಿ ದ್ವೀಪಾಂತರವಾಸಿಯಾಗಿದ್ದ ನೆಪೋ ಲಿಯನ್ನನು ಪುನಃ ಪ್ಯಾರಿಸ್ ರಾಜಧಾನಿಗೆ ಬಂದು ಜನಪ್ರಿಯನಾದನೆಂಬ ವಾ ರ್ತೆಯನ್ನು ಕೇಳಿದೊಡನೆಯೇ ಯೂರೋಪಿನ ಸಕಲ ರಾಜರೂ ಮಹದಾ

ಶ್ವರ್ಯಯುಕ್ತರಾಗಿ ಗಡಗಡ ನಡುಗಿಹೋದರು. ಬದ್ಧ ಶತ್ರುಗಳಾದ ಇಂಗ್ಲೀಷರು, ಇತರ ರಾಜರ ಬೆಂಬಲದಿಂದ ಈ ಬಾರಿ ನೆಪೋಲಿಯನ್ನನ್ನು ಭೂಗತವಮಾಡಿಬಿಡಬೇಕೆಂದು ಹಟತೊಟ್ಟು ಅಪಾರ ಸೈನ್ಯವನ್ನು ಸಿದ್ಧಗೊಳಿಸಿಕೊಂಡು ಹೊರಟರು. ೧೮೧೫ನೆಯ ಜೂನ್ ೧೮ನೆಯ ದಿನ ವಾಟರ್ಲೂ ಎಂಬಲ್ಲಿ ಇಂಗ್ಲಿಷ್ ಸೇನಾಪತಿ ಡ್ಯೂಕ್ ಆಫ್ ವೆಲ್ಲಿಂಗ್‌ಟನ್ ಎಂಬ ಶೂರನಿಗೂ ನೆಪೋಲಿಯನ್ನನಿಗೂ ಘೋರ ಸಂಗ್ರಾಮ ನಡೆಯಿತು. ನೆಪೋಲಿಯನ್ನನು ಅಲ್ಲೂ ಜಯಶಾಲಿಯಾಗತಕ್ಕವನೇ! ಆದರೆ ಆ ದಿನ ಆತನ ಸರದಾರರೇ ಆತನ ಅಪ್ಪಣೆಯನ್ನು ಸರಿಯಾಗಿ ಪಾಲಿಸದೆ ದ್ರೋಹಮಾಡಿದರು. ನೆಪೋಲಿಯನ್ನನು ತನ್ನ ಜನ್ಮದಲ್ಲೆಲ್ಲಾ ಈ ಒಂದೇಬಾರಿ ಸೋತು, ರಾಜಧಾನಿಗೆ ಹಿಂದಿರುಗಿ ಬಂದನು. ಪುನಃ ಯುದ್ಧ ಪ್ರಯತ್ನಮಾಡಲು ಸೆನೇಟಿನವರು ಆತನ ಇಷ್ಟಕ್ಕೆ ಒಪ್ಪಲಿಲ್ಲ. ಆತನಿಗೆ ಆ ಸಂದರ್ಭದಲ್ಲಿ ಎಲ್ಲಿಗೆ ಹೋಗಬೇಕು; ಏನುಮಾಡಬೇಕು ಎಂಬುದು ತೋರದೆ ಬಹು ಜಿಗುಪ್ಸೆಯುಂಟಾಯಿತು. ಕೊನೆಗೆ ಇಂಗ್ಲೆಂಡಿಗೆ ಹೋಗಿ ಅಲ್ಲಿ ಬ್ರಿಟಿಷರ ಅತಿಥಿಯಾಗಿರಬೇಕೆಂದು ಅಲ್ಲಿಗೆ ಹೊರಟನು. ಆ ಅಪೂರ್ವ ವ್ಯಕ್ತಿಯನ್ನು ನೋಡಲು ಜನರು ಸಹಸ್ರಾರು ಸಂಖ್ಯೆಯಿಂದ ನೆರೆದರು. ಆದರೇನು, ಆತನು ಬಯಸಿಹೋದಂತೆ ಬ್ರಿಟಿಷ್ ಜನಗಳಿಂದ ಆತನಿಗೆ ಆತಿಥ್ಯವಾಗಲೀ ರಕ್ಷಣೆಯಾಗಲೀ ದೊರೆಯಲಿಲ್ಲ. ಇಂಗ್ಲೆಂಡಿನಲ್ಲಿ ಇಳಿದೊಡನೆಯೇ ಆತನನ್ನು ಸೆರೆಹಿಡಿದು ಸೆಂಟ್ ಹೆಲೀನಾ ಎಂಬೊಂದು ದ್ವೀಪಕ್ಕೆ ಕಳುಹಿಸಿಬಿಟ್ಟರು. ಫ್ರಾನ್ಸ್‌ದೇಶದ ಚಕ್ರವರ್ತಿಯಾಗಿ, ರಾಜಾಧಿರಾಜರನ್ನು ನಡುಗಿಸಿದ ನೆಪೋಲಿಯನ್ನನು ಒಬ್ಬ ಸಾಮಾನ್ಯ ಸೆರೆಯಾಳಿನಂತೆ ಸೆಂಟ್ ಹೆಲೀನಾ ಎಂಬ ನಿರ್ಜನ ದ್ವೀಪದಲ್ಲಿ ಆರುವರ್ಷಕಾಲ ದುಃಖವನ್ನನುಭವಿಸಿ, ಅಪಮಾನಗಳನ್ನು ಸಹಿಸಿ, ಅಲ್ಪರು ಆಡುವ ಅಸಹ್ಯ ದುರ್ವಾಕ್ಯಗಳನ್ನು ಕೇಳಿ, ಕೊನೆಗೆ ೧೮೨೧ನೆಯ ಮೇ ತಿಂಗಳು ೫ನೆಯ ದಿನ ತನ್ನ ಜೀವಿತಯಾತ್ರೆಯನ್ನು ಸಾಕುಮಾಡಿ ಪರಲೋಕಗತನಾದನು.

ನೆಪೋಲಿಯನ್ನನನ್ನು ಫ್ರಾನ್ಸ್‌ದೇಶೀಯರು ತಮ್ಮ ಆರಾಧ್ಯ ದೇವತೆಯನ್ನಾಗಿ ಭಾವಿಸುವರು. ಯೂರೋಪು ಖಂಡದಲ್ಲಿ ಪ್ರಜಾ ಸ್ವಾತಂತ್ರ್ಯವೆಂಬ ಭಾವನೆಯ ಬೀಜಗಳನ್ನು ಬಿತ್ತಿದ ಈ ಮಹಾನುಭಾವನ ಅದ್ಭುತ

ಪ್ರಜ್ಞೆ, ಅವಿರಳ ಕಾರ್ಯತತ್ಪರತೆ, ಶೌರ್ಯ ಧೈರ್ಯ ಗಾಂಭೀರ್ಯಗಳು ಮುಂತಾದುವು ಅವರಿಗೆ ಧ್ಯೇಯಗಳಾಗಿವೆ. ಆತನ ಜ್ಞಾಪಕಾರ್ಥವಾಗಿ ಅನೇಕ ಸ್ಥಳಗಳಲ್ಲಿ ಶಿಲಾ ಮೂರ್ತಿಗಳನ್ನು ಸ್ಥಾಪಿಸಿರುವರು. ಮಾತ್ರವಲ್ಲ, ೧೮೪೦ನೆಯ ಸಂ||ದಲ್ಲಿ ವಿಕ್ಟೋರಿಯಾ ರಾಣಿಯವರಲ್ಲಿ ವಿಜ್ಞಾಪಿಸಿಕೊಂಡು ಆ ದೇಶೀಯರು ಮಹದ್ವೈಭವದಿಂದ ಆತನ ಕಳೇಬರವನ್ನು ಸೆಂಟ್ ಹೆಲೀನಾ ದ್ವೀಪದಿಂದ ಫ್ರಾನ್ಸ್ ದೇಶಕ್ಕೆ ತಂದು, ಆತನ ಉದ್ದೇಶಾನುಸಾರವಾಗಿ ಸೀನ್ ನದೀ ತೀರದ ಒಂದು ಮನೋಹರ ಸ್ಥಳದಲ್ಲಿ ಸಮಾಧಿಮಾಡಿದರು. ಆಗಲೂ ಆತನ ಶರೀರವು ಲೇಶಮಾತ್ರವೂ ವಿರೂಪಹೊಂದದೆ ಆಗತಾನೆ ಮೃತನಾದಂತೆ ಇದ್ದಿತಂತೆ. ಇದನ್ನು ಕಂಡು ಸಕಲರೂ ಪರಮಾಶ್ಚರ್ಯಪಟ್ಟು, ಆತನ ಗುಣವಿಶೇಷಗಳನ್ನು ಹೊಗಳಿ ಹಾಡಿ ಹರಸಿದರು.

'ಗುಣಾಃ ಪೂಜಾಸ್ಥಾನಂ' ಎಂಬ ಆರ್ಯೋಕ್ತಿಯನ್ನನುಸರಿಸುವುದಾದರೆ, ಮಹಾಸದ್ಗುಣನಿಧಿಯಾದ ಈ ಮಹನೀಯನು ಜಗತ್ತಿನ ಸಕಲ ಜನಾಂಗಗಳ ಗೌರವಕ್ಕೂ ಪಾತ್ರನಾಗಲು ಅರ್ಹನಾಗಿದ್ದಾನೆ. ಆತನ ಈ ಅನುಪಮ ಚರಿತ್ರೆಯು ಸರ್ವಮಾನ್ಯವಾಗಲಿ. ಆತನ ಘನವಾದ ಸದ್ಗುಣಗಳು ಸಕಲರಿಗೂ ಅನುಕರಣೀಯಗಳಾಗಲಿ. ಸ್ವಾತಂತ್ರ್ಯಾಪೇಕ್ಷಿಗಳಿಗೆ ಆತನ ಚರಿತ್ರೆಯು ಸರ್ವದಾ ಮಾರ್ಗದರ್ಶಕವಾಗಿರಲಿ.

**ತಥಾಸ್ತು.**



— ಶ್ರೀರಾಮಸಹಾಯಂ. —

# ಸುಬೋಧ ಕುಸುಮಾಂಜಲಿ ಗ್ರಂಥಮಾಲಾ

## (ಸಚಿತ್ರ ಮಾಸ ಪುಸ್ತಕಾವಳಿ)

**ಮುನ್ನುಡಿ:—**

ಶ್ರೀರಾಮಚಂದ್ರಮೂರ್ತಿಯ ದಿವ್ಯಚರಿತಾಮೃತ ವರ್ಷವನ್ನು ಸುರಿಸಿದ ಕವಿಕುಲಕ್ಕೆ ಆಚಾರ್ಯರೂ, ಅಗಣಿತ ತಪಸ್ಸಂಪನ್ನರೂ, ಸಂಯಮಿಶ್ರೇಷ್ಠರೂ ಆದ ಶ್ರೀ ವಾಲ್ಮೀಕಿ ಮಹರ್ಷಿಗಳ ಪವಿತ್ರ ಚರಿತ್ರೆಯನ್ನು ವರ್ಣಿಸುವ ಸೌಭಾಗ್ಯವು ಪುಣ್ಯೋದಯದಿಂದ ಇಂದು ನಮಗೆ ಲಭಿಸಿರುವುದು. ಯಾವ ಮಹಾಮಹಿಮರು, ಶ್ರೀರಾಮಚಂದ್ರನ ಅವತಾರ ಪ್ರಾರಂಭದಿಂದಲೂ, ವೈಕುಂಠಗಮನದವರೆಗಿನ ಸಮಗ್ರ ಚರಿತ್ರೆಯನ್ನೂ, ಚತುರ್ಮುಖ ಬ್ರಹ್ಮನ ಅನುಗ್ರಹ ಬಲದಿಂದ ಕರತಲಾಮಲಕವಾಗಿ ತಿಳಿದು ಲೋಕೋದ್ಧಾರಕ್ಕಾಗಿ '**ಆದಿಕಾವ್ಯ**' ವೆಂದು ಪ್ರಖ್ಯಾತವಾದ ಶ್ರೀ ರಾಮಾಯಣ ಗ್ರಂಥರತ್ನವನ್ನು ರಚಿಸಿ, ಪ್ರಪಂಚಕ್ಕೇ ಶಾಶ್ವತವಾದ ಮಹೋಪಕಾರವನ್ನು ಮಾಡಿದರೋ, ಆ ವಾಲ್ಮೀಕಿ ಮಹರ್ಷಿಗಳ ದಿವ್ಯ ನಾಮಸ್ಮರಣೆಯು ಸರ್ವಪಾಪ ನಿವಾರಕವೂ, ಸರ್ವ ಸತ್ಫಲ ಪ್ರದಾಯಕವೂ ಆದುದೆಂಬುದರಲ್ಲಿ ಸಂದೇಹವೇನು ?

ಶ್ಲೋ:—ಕೂಜಂತಂ ರಾಮ ರಾಮೇತಿ ಮಧುರಂ ಮಧುರಾಕ್ಷರಂ
ಆರುಹ್ಯ ಕವಿತಾಶಾಖಾಂ ವಂದೇ ವಾಲ್ಮೀಕಿ ಕೋಕಿಲಂ

'ರಾಮ ರಾಮ' ಎಂಬ ಪರಮಪಾವನಕರವಾದ ಶ್ರೀರಾಮ ನಾಮವನ್ನು-ಮಧುರತಮವಾದ ಆ ದಿವ್ಯನಾಮವನ್ನು ಉಚ್ಚರಿಸಿಕೊಳ್ಳುತ್ತಾ, ಕವಿತಾ ಶಾಖೆಯನ್ನು ಆರೋಹಿಸಿ ಕುಳಿತಿರುವ ವಾಲ್ಮೀಕಿ ಎಂಬಾ ಕೋಕಿಲವನ್ನು ನಮಸ್ಕಾರ ಮಾಡುತ್ತೇನೆ' ಎಂಬದಾಗಿ ಆರ್ಯರು ಗಾನಮಾಡಿದ್ದಾರೆ. ವಾಲ್ಮೀಕಿ ಮಹರ್ಷಿಗಳ ಚರಿತ್ರವೇ ಶ್ರೀರಾಮನಾಮದ ಮಹಿಮೆಯನ್ನು ಪ್ರಪಂಚಕ್ಕೆ ಪ್ರಕಟಿಸಿದ ಅದ್ಭುತ ಘಟನೆಯುಳ್ಳದಾಗಿದೆ. ಶ್ರೀರಾಮ

ನಾಮ ಪಾರಾಯಣದಿಂದ,-ನಿರಂತರ ಧ್ಯಾನದಿಂದ- ಉದ್ಧೃತರಾದ ಆ ಮಹಾನುಭಾವರು ತಾವೇ ಶ್ರೀರಾಮನಾಮ ಸುಧಾಸಿಂಧುವಾಗಿ- ಶ್ರೀರಾಮನಾಮ ದೇವತರಂಗಿಣಿಯಾಗಿ ಮಾರ್ಪಟ್ಟರೋ ಎಂಬಂತೆ ತಮ್ಮ ಮುಖದಿಂದ ನಿರರ್ಗಳ ಕವಿತಾ ಪ್ರವಾಹವನ್ನು ಹರಿಯಲಿತ್ತು ಸಕಲ ಜಗತ್ತನ್ನೂ ಪಾವನವಾದುದನ್ನಾಗಿ ಮಾಡಿದರು. ಅಂತಹ ಆ ಮಹಾನುಭಾವರ ಚರಿತ್ರೆಯು ಪಠನೀಯವಾದುದಾಗಿರಲಾರದೆ ?

ಋಷಿಮೂಲ ನದೀಮೂಲಗಳನ್ನು ವಿಚಾರಿಸಬಾರದೆಂಬ ಒಂದು ಲೋಕೋಕ್ತಿಯುಂಟಷ್ಟೆ ! ಹಾಗೆ ಹೇಳುವುದಕ್ಕೆ ಕಾರಣವೂ ಒಂದುಂಟು. ಅತ್ಯುತ್ಕೃಷ್ಟವಾದ ಮಹರ್ಷಿಪದವಿಯು ಯಾರಿಗೆಂದರವರಿಗೆ, ಹೇಗೆಂದರೆ ಹಾಗೆ ದೊರೆಯಲಾರದು. ಯಾರು ತಮ್ಮ ಹೃದಯ ಪರಿಶೋಧನೆಯಿಂದ ತಮ್ಮ ಆತ್ಮವು ಎಷ್ಟುಮಟ್ಟಿನ ಪಾಪ ಸಮುದಾಯದಿಂದ ಆಚ್ಛಾದಿತವಾಗಿದೆಯೆಂಬುದನ್ನು ಕಂಡುಹಿಡಿದು, ತಮಗೆ ಸದ್ಗತಿಯು ಪ್ರಾಪ್ತವಾಗಬೇಕಾದರೆ, ಆ ಪಾಪ ಸಮುದಾಯವನ್ನೆಲ್ಲ ಸಮೂಲನಾಶಗೊಳಿಸದಿದ್ದರೆ ಅನ್ಯಥಾ ಮಾರ್ಗವೇ ಇಲ್ಲವೆಂಬುದನ್ನು ತಿಳಿದು, ಅದಕ್ಕಾಗಿ ಅಸಹ್ಯ ಕಷ್ಟ ದುಃಖ ಸಂಕಟಗಳನ್ನು ಸಹಿಸಿ ಅಗಾಧ ಪ್ರಯತ್ನ ನಡಿಸುವರೋ - ಪ್ರಾಪಂಚಿಕವಾದ ಸಮಸ್ತವನ್ನೂ ತೃಣಗಣಾಯಮಾನವಾಗಿ ಕಂಡು ಶಾಶ್ವತನೂ ಸನಾತನನೂ ಆದ ಆ ಲೋಕಪಿತನ ಪಾದಕಮಲಗಳನ್ನೇ ನಿಶ್ಚಲ ಭಕ್ತಿಭಾವದಿಂದ ಆರಾಧಿಸಿ ತಮ್ಮ ದೇಹ ಮನೋಬುದ್ಧಿಗಳನ್ನೂ, ಆತ್ಮವನ್ನೂ ಶುದ್ಧಿಗೊಳಿಸಿಕೊಳ್ಳುವರೋ ಅವರು ಮಾತ್ರವೇ ಮಹರ್ಷಿ ಪದವಿಗೆ ಪಾತ್ರರು. ಅಂತಹ ಹೃದಯವೇದನೆಯು, ತಾನು ಪೂರ್ವದಲ್ಲಿ ಆಚರಿಸಿದ ಅಗಣಿತ ಪಾಪ ರಾಸಿಯಿಂದ ನೊಂದು, ಆ ಪಾಪ ಪರಿಹಾರಕ್ಕಾಗಿ ಪಶ್ಚಾತ್ತಾಪ ಪೂರ್ವಕವಾಗಿ ಪ್ರಯತ್ನಿಸಬೇಕೆಂಬ ಯೋಚನೆಯು ಹುಟ್ಟಿದಿದ್ದರೆ, ಪ್ರಾಪ್ತವಾಗದು. ಅಜ್ಞಾನದಿಂದ ಪಾಪಮಾಡುವುದೂ, ಆ ಪಾಪಫಲವಾಗಿ ಅಸಹ್ಯ ದುಃಖಾನುಭವಕ್ಕೆ ನೆಲೆವೀಡಾಗುವುದೂ, ಮುಂದೊಂದುವೇಳೆ ಪುಣ್ಯೋದಯದಿಂದ ಆ ಪಾಪ ಪರಿಹಾರಕ್ಕಾಗಿ ಭಗವಂತನ ಪಾದಾರವಿಂದಗಳಲ್ಲಿ ಮೊರೆಯಿಟ್ಟುಕೊಳ್ಳುವುದೂ, ದಯಾಮಯನಾದ ಆತನ ಕೃಪಾಕಟಾಕ್ಷದಿಂದ

ತನ್ನ ಪಾಪರಾಶಿಯನ್ನೆಲ್ಲ ಭಸ್ಮಗೊಳಿಸಿಕೊಂಡು ಉದ್ಧೃತನಾಗುವುದೂ ಜೀವನು ಲೌಕಿಕ ಯಾತ್ರೆಯಲ್ಲಿ ಅನುಭವಿಸುವ ಸರ್ವಸಾಮಾನ್ಯ ಅವಸ್ಥೆಯಾಗಿರುವುದು. ಇಂದು ಅತ್ಯದ್ಭುತ ಮಹಿಮಾಶಾಲಿಗಳೆಂದೂ ತಪೋಧನರೆಂದೂ, ಭಕ್ತಾಗ್ರಗಣ್ಯರೆಂದೂ, ಜ್ಞಾನಿವರೇಣ್ಯರೆಂದೂ ಪ್ರಖ್ಯಾತರಾಗಿರುವವರೆಲ್ಲರೂ ಲೋಕಯಾತ್ರೆಯಲ್ಲಿ ಜೀವನಿಗೆ ಸ್ವಾಭಾವಿಕವಾದ ಈ ಸಂಸಾರ ಪ್ರವಾಹದಲ್ಲಿ ತೇಲಿಕೊಂಡು ಬಂದಿರುವವರೇ ಅಲ್ಲದೆ, ಒಮ್ಮೆಗೇ ನಕ್ಷತ್ರಗಳಂತೆ ಧರೆಗಿಳಿದು ಬಂದವರಲ್ಲ. ಇಂದು ಪ್ರತ್ಯಕ್ಷ ಗೋಚರವಾಗುವ ಅವರ ಮಹಿಮೆ, ಅವರ ಭಕ್ತಿ ಜ್ಞಾನ ವೈರಾಗ್ಯಗಳು ಮುಂತಾದುವನ್ನು ಮಾತ್ರ ಕಂಡು ಅವರನ್ನು ತನ್ನ ಗುರು ಸ್ಥಾನೀಯರನ್ನಾಗಿಯೂ, ಧ್ಯೇಯಮೂರ್ತಿಯನ್ನಾಗಿಯೂ ಇಟ್ಟುಕೊಳ್ಳಬೇಕೆಂದು ಇಚ್ಛಿಸುವವನಿಗೆ, ಅವರ ಕೇವಲ ಆ ಪೂಜ್ಯತೆಯ ಪರಿಚಯವಿದ್ದರೆ ಮಾತ್ರವೇ ಅವರಲ್ಲಿ ಭಕ್ತಿ ಗೌರವಗಳು ಉಳಿಯುವುವಲ್ಲದೆ, ಲೋಕಸಾಮಾನ್ಯವಾಗಿ ಬಹು ಹಿಂದಿನಿಂದಲೂ ಅವರ ಜೀವಿತದಲ್ಲಿ ನಡೆದು ಬಂದ ವಿರುದ್ಧಗುಣ-ಆಚರಣೆಗಳೆಲ್ಲವೂ ತಿಳಿದರೆ ನಿಶ್ಚಯವಾಗಿಯೂ ಅವರ ವಿಷಯದಲ್ಲಿ ಪೂಜ್ಯತೆಗೆ ಬದಲಾಗಿ ಹೇಯಭಾವವೇ-ತುಚ್ಛಭಾವವೇ ಉಂಟಾಗಬಹುದು. ಆದುದರಿಂದಲೇ ಹಿರಿಯರು ಋಷಿಮೂಲವನ್ನು ಎಣಿಸಿಕೊಂಡು ಹೋಗದೆ, ಕೇವಲ ಅವರು ಪ್ರತ್ಯಕ್ಷವಾಗಿ ಈಗಿರುವ ಸ್ಥಿತಿಯಲ್ಲಿ ಮಾತ್ರವೇ ಅವರನ್ನು ಸೇವಿಸಿ, – 'ನಿನ್ನ ಗತಿಯನ್ನು ನೀನು ಸಾಧಿಸಿಕೋ' – ಎಂದು ಬುದ್ಧಿವಾದ ಹೇಳಿರುವರು. ನದಿಯ ವಿಷಯದಲ್ಲೂ ಅಷ್ಟೆ! ಎಂದಿಗೂ ಕುಂದದ ಶುದ್ಧವಾದ ವಿಶೇಷ ಜಲರಾಶಿಯಿಂದ ಕೂಡಿ ಅಗಾಧವಾಗಿ ತೋರುತ್ತಿರುವವರೆಗೆ ಮಾತ್ರ ನದಿಯ ವಿಷಯದಲ್ಲಿ ಪೂಜ್ಯಭಾವವೂ ಅದು ಪವಿತ್ರ ತೀರ್ಥವೆಂಬ ನಂಬಿಕೆಯೂ ಇರುವುದು. ಆದರೆ, ಆದೇ ನದಿಯಲ್ಲೇ ಪಾದಮುಳುಗುವಷ್ಟು ನೀರಿಲ್ಲದೆ, ಇರುವ ಸ್ವಲ್ಪ ನೀರೂ ಕೊಳಚೆಯಾಗಿ, ಕ್ರಿಮಿಯುತವಾಗಿ, ದುರ್ಗಂಧಮಯವಾಗಿ, ಕ್ಷುದ್ರರೀತಿಯಲ್ಲಿ ಕಂಡುಬಂದರೆ ಅದರ ವಿಷಯದಲ್ಲಿ ಯಾರಿಗಾದರೂ ಪೂಜ್ಯಬುದ್ಧಿಯುಂಟಾಗುವುದೇನು? ನದಿಯನ್ನು ಮುಖಭಾಗದಿಂದ ಮೂಲದವರೆಗೆ ಹುಡುಕಿಕೊಂಡು ಹೋದಹಾಗೆಲ್ಲ, ಜಲಾಭಾವದಿಂದ್ಲೂ, ಇತರ ಸ್ವಾಭಾವಿಕ ಕಾರಣಗಳಿಂದಲೂ ಮೇಲ್ಕಂಡ ಅದರ ದು

ಸ್ಥಿತಿಯ ಚಿತ್ರಗಳನ್ನೆಲ್ಲ ಕಾಣಲವಕಾಶವಾಗಿ ಅದರ ವಿಷಯದಲ್ಲಿ ನಮ್ಮ ಮ
ನಸ್ಸಿನಲ್ಲಿರುವ ಪೂಜ್ಯತೆಯೂ ಪಾವಿತ್ರ್ಯತೆಯೂ ಲೋಪವಾಗಲು ಕಾರಣ
ವಾಗುವುದು ತಪ್ಪದು. ಲೋಕದಲ್ಲಿನ ಪ್ರತಿಯೊಂದು ವಸ್ತುವೂ ಒಳ್ಳೆಯ
ದು-ಕೆಟ್ಟದು ಎಂಬೀ ದ್ವಂದ್ವಗಳಿಂದ ಕೂಡಿಯೇ ಇದೆಯಲ್ಲದೆ, ಸಂಪೂ
ರ್ಣ ಉತ್ತಮವಾಗಿಯೇ ಆಗಲೀ, ಸಂಪೂರ್ಣ ನೀಚವಾಗಿಯೇ ಆಗಲಿ
ಇರಲಾರದು. ಅದರ ವಿಷಯದಲ್ಲಿ ನಮ್ಮ ಮನಸ್ಸಿನಲ್ಲಿ ಹುಟ್ಟುವ ಅಭಿ
ಪ್ರಾಯವನ್ನನುಸರಿಸಿ ಒಂದು ಪದಾರ್ಥವು ಉತ್ತಮವೋ ನೀಚವೋ ಆಗಿ
ಪರಿಣಮಿಸುವುದು. ಆದುದರಿಂದ ನಾವು ಒಂದು ವಸ್ತುವಿನಲ್ಲಿ ಕಂಡು
ಬರುವ ಗುಣಗಳನ್ನು ಮಾತ್ರ ಗ್ರಹಿಸುವಂತಹ ಮನಸ್ಸಿನಿಂದ ಕೂಡಿದ್ದು
ಅವರಿಂದ ಉಂಟಾಗುವ ಪ್ರಯೋಜನವನ್ನು ಪಡೆಯಬೇಕಲ್ಲದೆ, ದೋಷೈಕ
ದೃಷ್ಟಿಯುಳ್ಳವರಾಗಿದ್ದರೆ, ನಮಗೆ ಎಲ್ಲೆಲ್ಲೂ ದೋಷಸಮುದಾಯವೇ ಕಂ
ಡುಬರುವುದು. ದೇವತ್ವವನ್ನು ಹುಡುಕಿಕೊಂಡು ಹೋಗುವವನಿಗೆ ಎಲ್ಲೆ
ಲ್ಲೂ ದೈವತವೇ ಕಂಡುಬರುವುದು. ಆದರೆ ದೈತ್ಯಸ್ವಭಾವವನ್ನೇ ಹುಡು
ಕುತ್ತಾ ಹೋಗುವವನಿಗೆ, ಎಲ್ಲೆಲ್ಲೂ ದೈತ್ಯರೇ ಕಾಣುವರು; ಭೂತಗಳೇ
ಕಂಡುಬರುವುವು; ಇದರಲ್ಲಿ ಅತಿಶಯವೇನು ?

ನಮ್ಮ ಚರಿತ್ರನಾಯಕರಾದ ಶ್ರೀ ವಾಲ್ಮೀಕಿ ಮಹರ್ಷಿಗಳು ಲೋಕ
ಪೂಜ್ಯವಾದ ತಮ್ಮ ಕವಿತೆಯಲ್ಲಿ (ಶ್ರೀರಾಮಾಯಣ ಗ್ರಂಥದಲ್ಲಿ) ಮಾನವ
ಜೀವಿತದಲ್ಲಿ ದೊರೆಯಬಹುದಾದ ಸಕಲ ಸದ್ಗುಣಗಳ ಸಮೂಹವನ್ನೂ ಕೇ
ಖರಿಸಿಟ್ಟಿದ್ದಾರೆ. ಅಂತೆಯೇ ಸಮಸ್ತ ದುರ್ಗುಣಗಳನ್ನೂ ಅವುಗಳಿಂದ
ಪ್ರಾಪ್ತವಾಗುವ ದುಷ್ಪರಿಣಾಮಗಳನ್ನೂ ಚಿತ್ರಿಸಿದ್ದಾರೆ. ರಾಮ-ರಾವಣ
ಈ ಎರಡು ವ್ಯಕ್ತಿಗಳೂ ಅವರಿಬ್ಬರ ಅನುಯಾಯಿಗಳೂ, ದೈವೀಸಂಪದ-
-ಆಸುರೀ ಸಂಪದಗಳ ಪ್ರತ್ಯಕ್ಷ ಮೂರ್ತಿಗಳೋ ಎಂಬಂತೆ ಚಿತ್ರಿಸಲ್ಪಟ್ಟಿ
ದ್ದಾರೆ. ವಾಲ್ಮೀಕರ ಹೃದಯಂಗಮವಾದ ಕವಿತಾ ಪ್ರೌಢಿಮೆಯಿಂದ ಇಂ
ದು ಶ್ರೀರಾಮನಾಮವೂ ಶ್ರೀರಾಮಚರಿತವೂ ತ್ರಿಲೋಕಗಳಲ್ಲೂ ವ್ಯಾಪಿಸ
ಲೂ, ಸೂರ್ಯಚಂದ್ರಾದಿಗಳಿರುವವರೆಗೂ ಜಗತ್ತಿನಲ್ಲಿ ಲೇಶಮಾತ್ರವೂ
ಕಳೆಗುಂದದೆ ಸದಾ ಸೌಭಾಗ್ಯಪ್ರದವಾದುದಾಗಿಯೇ ಇರಲೂ ಅವಕಾಶವಾ

ಯಿತಲ್ಲದೆ, ಕವಿಮುಖದಿಂದ ಹಾಗೆ ಕೀರ್ತಿತವಾಗದಿದ್ದರೆ ರಾಮಚರಿತವು ಈಗ ಅದಕ್ಕಿರುವಷ್ಟುಮಟ್ಟಿನ ಪ್ರಾಶಸ್ತ್ಯಕ್ಕೆ ಪಾತ್ರವಾಗಲು ಸಾಧ್ಯವಿರುತ್ತಿದ್ದಿತೆ ?

ಕವಿಕುಲ ಸಾರ್ವಭೌಮರಾದ ವಾಲ್ಮೀಕಿ ಮಹರ್ಷಿಗಳ ಅಗಾಧ ಮಹಿಮೆಯನ್ನಾಗಲೀ (ಶ್ರೀರಾಮಚಂದ್ರನ ಚರಿತ್ರ ರೂಪವಾದ) ಅವರಿಂದ ರಚಿತವಾದ ಶ್ರೀರಾಮಾಯಣ ಗ್ರಂಥರತ್ನದ ಉತ್ಕೃಷ್ಟತೆ ಪಾವಿತ್ರ್ಯತೆಗಳನ್ನಾಗಲೀ ಕ್ಷುದ್ರವಾದ ನಮ್ಮ ಶುಷ್ಕ ಲೇಖನಿಯು ಏನೆಂದು ವರ್ಣಿಸಬಲ್ಲುದು ! ಕೋಟಿ ಸೂರ್ಯಪ್ರಕಾಶಮಾನನಾದ ಶ್ರೀ ಲೋಕೇಶ್ವರನಿಗೆ ಒಂದು ಬತ್ತಿಯ ದೀಪವನ್ನು ಹಚ್ಚಿಟ್ಟೋ-ಒಂದು ಕರ್ಪೂರದಾರತಿಯನ್ನೆತ್ತಿಯೂ ಭಾವುಕರು ಧನ್ಯರಾದೆವೆಂದುಕೊಳ್ಳುವುದಿಲ್ಲವೆ? ಅಂತೆಯೇ ಇದೂ ಒಂದು ಅಲ್ಪಸೇವೆ - ಗ್ರಂಥಮಾಲಾಭಿಮಾನಿಗಳು ಎಂದಿನಂತೆ ತಮ್ಮ ಪ್ರೋತ್ಸಾಹವನ್ನು ಮುಂದರಿಸಿ ನಮ್ಮ ಸೇವೆಯನ್ನು ಸ್ವೀಕರಿಸಬೇಕಾಗಿ ಪ್ರಾರ್ಥನೆ.

ಬೆಂಗಳೂರು<br>ತಾ. ೨೦-೮-೧೯೩೭

ಇತಿ ಸುಜನವಿಧೇಯ<br>**ಯಂ. ರಾಮರಾವ್.**



ಸುಬೋಧ ಮುದ್ರಣಾಲಯ, ಬೆಂಗಳೂರು ನಗರ.

# ಶ್ರೀಮದ್ರಾಮಾಯಣ ಕಥಾಸಾರ.

## ಸೂಚಕ ಧ್ಯಾನಶ್ಲೋಕಗಳು.

ಕಾಕಪಕ್ಷ ಧರಂ ದೇವಂ ವನಮಾಲಾವಿಭೂಷಿತಂ
ಶ್ರೀರಾಮಂ ಬಾಲಕಂ ಧ್ಯಾಯೇ ದ್ಬಾಲಕಾಂಡೇ ಮುನೀಶ್ವರ ೧

ಸೀತಾದೇವಿಯುತಂ ವೀರಂ ಸರ್ವಭೂಷಣ ಭೂಷಿತಂ
ಪಿತೃಭಕ್ತಂ ಹರಿಂಧ್ಯಾಯೇ ದಯೋಧ್ಯಾಕಾಂಡ ಉತ್ತಮೇ ೨

ಜಟಿಲಂ ಚೀರವಸನಂ ದಂಡಕಾರಣ್ಯವಾಸಿನಂ
ಮುನಿವೇಷಧರಂ ಧ್ಯಾಯೇ ದರಣ್ಯೇಕಾಂಡ ಉತ್ತಮೇ ೩

ಸುಗ್ರೀವಾದಿಯುತಂ ಶ್ರೀಶಂ ಭಸ್ಮಾಂಗಾವೃತನಿರಾಶ್ವರಂ
ಮಹೇಶ್ವರಸಮಂ ಧ್ಯಾಯೇ ತ್ಕಿಷ್ಕಿಂಧಾಕಾಂಡ ಉತ್ತಮೇ ೪

ಚಂದ್ರಬಿಂಬಸಮಾಕಾರಂ ವಾಂಛಿತಾರ್ಥಪ್ರದಾಯಕಂ
ಹನೂಮತ್ಸೇವಿತಂ ಧ್ಯಾಯೇ ತ್ಸುಂದರೇಕಾಂಡ ಉತ್ತಮೇ ೫

ರಾವಣಾದಿನಿಹಂತಾರಂ ಬ್ರಹ್ಮರುದ್ರಾದಿಸೇವಿತಂ
ಸೀತಾದೇವಿಯುತಂ ಯುದ್ಧೇ ರಾಮಂ ಧ್ಯಾಯೇದ್ಹೃದಂಬುಜೇ ೬

ಅಗಸ್ತ್ಯಾದಿಮುನಿಸ್ತುತ್ಯಂ ವಾಂಛಿತಾರ್ಥಪ್ರದಾಯಕಂ
ಸರ್ವದೇವೋತ್ತಮಂ ಧ್ಯಾಯೇ ದುತ್ತರೇಕಾಂಡ ಉತ್ತಮೇ ೭

ಬ್ರಹ್ಮಾಂಡಪುರಾಣಂ.



ಶ್ರೀ ರಾಮಾಯಣ ಕರ್ತ-ಆದಿಕವಿ ಶ್ರೀ ವಾಲ್ಮೀಕಿ ಮಹರ್ಷಿಗಳು.

|| ಶ್ರೀರಾಮಸಹಾಯಂ ||

ಶ್ರೀ ರಾಮಾಯಣ ಕರ್ತ - ಆದಿಕವಿ

# ಶ್ರೀ ವಾಲ್ಮೀಕಿ ಮಹರ್ಷಿಗಳು

**ಅಧ್ಯಾಯ ೧** **"ಮಹರ್ಷಿಗಳ ನಾಡು"**

ನಮ್ಮ ಮಾತೃಭೂಮಿ, ಈ ಭಾರತದೇಶವು-'ತತ್ವವಿದರ ತೌರೂರು' ಎಂದು ಕೀರ್ತಿಸಲ್ಪಟ್ಟಿದು. ಮಹರ್ಷಿಗಳೂ, ರಾಜರ್ಷಿಗಳೂ, ಮುನಿ ಪ್ರೋತ್ತಮರೂ, ಯೋಗಿವರ್ಯರೂ, ಭಕ್ತಶ್ರೇಷ್ಠರೂ, ಸಾಧುಸಂತರೂ ಈ ಪುಣ್ಯದೇಶದಲ್ಲೇ ಜನ್ಮವೆತ್ತಿ, ಮುಕ್ತಿಸಾಧನೆಗಾಗಿ ಅಗಾಧ ಪುಣ್ಯಕಾರ್ಯ ಗಳನ್ನಾಚರಿಸಿ ತಮ್ಮ ಜನ್ಮವನ್ನು ಸಾರ್ಥಕಗೊಳಿಸಿಕೊಂಡ ಉದಾಹರಣೆಗ ಳು, ಒಂದಲ್ಲ-ಎರಡಲ್ಲ, ನೂರಾರಿವೆ;—ಸಹಸ್ರ ಸಂಖ್ಯೆಯಿಂದ ದೊರೆಯುತ್ತ ವೆ. ಭರತಖಂಡವೆಂದರೆ ಮಹರ್ಷಿಗಳ ನಾಡು. ಹೀಗೆಂದು ಹೇಳುವುದು ಅಹಂಭಾವದಿಂದಲೆಂದೂ, ಸ್ವಯಂ ಶ್ರೇಷ್ಠತಾ ಭಾವನೆಯಿಂದಲೆಂದೂ ಯಾ ರೂ ತಿಳಿಯಬಾರದು. ಹೀಗೆಂದ ಮಾತ್ರದಿಂದ ಭರತಖಂಡದಲ್ಲಿರುವವರೆಲ್ಲ ರೂ ಮಹರ್ಷಿಗಳೇ, ತತ್ವವಿದರೇ, ಸಾಧುಸಂತರೇ ಎಂದು ಹೇಳಿದಂತಾಗ ಲಿಲ್ಲ. 'ತಾವರೆಯ ಕೊಳ'ವೆಂದರೆ ಆ ಕೊಳದಲ್ಲಿ ತಾವರೆಯಲ್ಲದೆ ಮತ್ತೆ ನೂ ಇಲ್ಲವೆಂದು ಅರ್ಥವಾಗುವುದೇ ? ಕೊಳದಲ್ಲಿ ನೀರೂ ಕೊಳಚೆಯೂ ಕಪ್ಪೆ ಮೀನು ಏಡಿ ಮುಂತಾದ ಇತರ ಜಲಚರಗಳೂ, ಹುಲ್ಲು ಜೊಂಡು ಪಾಚಿ ಮುಂತಾದುವುಗಳೂ ಅಗಣಿತವಾಗಿದ್ದು ಅವುಗಳೊಂದಿಗೆ ತಾವರೆ ಯೂ ಇರುವುದು. ಆದರೆ, ಆ ಪುಷ್ಪಗಳು ನೇತ್ರಾನಂದಕರವಾಗಿ ಅರಳಿ ಮನೋಹರವಾಗಿರುವುವು. ಇತರ ಎಲ್ಲಾ ವಸ್ತುಗಳಿಗಿಂತಲೂ ವಿಶೇಷವಾ ಗಿರುವಂತೆ ಎತ್ತಿ ಕಾಣುವುವು. ಆದುದರಿಂದಲೇ ಅದನ್ನು ಜನರು 'ತಾವರೆ ಕೊಳ' ಎಂದು ಹೆಸರಿಟ್ಟು ಕರೆಯುವರು. ಹಾಗೆಯೇ, 'ಮಹರ್ಷಿಗಳ ನಾಡು' 'ತತ್ವವಿದರ ತೌರೂರು' ಎಂಬುದರಲ್ಲಿ, ಈ ದೇಶದಲ್ಲೂ ಇತರ ದೇಶಗಳಲ್ಲಿರು

ವಂತೆಯೇ, ಸಾಮಾನ್ಯ ಗೃಹಸ್ಥರೂ, ಪಾಪಿಗಳೂ, ಕ್ಷುದ್ರರೂ, ಇವ್ವರೂ ಸಹ ಮೇಲ್ಕಂಡಂತೆ ಮಹರ್ಷಿಗಳ ತತ್ವವಿದರ ಸಂಖ್ಯೆಯು ಮಹಾಪ್ರಕಾಶಮಾನವಾಗಿ ಎತ್ತಿ ಕಾಣುವಂತೆ ಇದೆಯೆಂದು ಅರ್ಥವಾಗುವುದು. ಇಂತಹ ಪುಣ್ಯಶೀಲರ ಸಂಪರ್ಕದಿಂದ, ಅವರ ಸನ್ನಿಧಾನ ವಿಶೇಷದಿಂದ ಈ ನಾಡು ಪಾವನವೆನಿಸಿರುವುದು. ಇಲ್ಲಿಯ ವಾತಾವರಣವು ಧರ್ಮಪ್ರೇರಕವಾಗಿರುವುದು.

ಈ ಪಾವಿತ್ರ್ಯತೆಗೆ ಮಾತ್ರವಲ್ಲ - ಪ್ರಾಚೀನತೆಗೂ ಭಾರತದೇಶ ಚರಿತ್ರೆಯು ವಿಶೇಷ ಆಧಾರಗಳನ್ನುಳ್ಳದಾಗಿರುವುದು. ಭೂಗೋಳದಲ್ಲಿ ಸದ್ಯಃ ಭೂಖಂಡಗಳೆಂದು ಹೆಸರುಗೊಂಡಿರುವ ದೇಶಗಳೆಲ್ಲ ಅವು ಜನ ನಿವಾಸಯೋಗ್ಯವಾಗಿ ದೇಶಗಳೆಂದು ಕರೆಯಲ್ಪಟ್ಟು ಇಷ್ಟೇ ವರ್ಷಗಳಾದುವು ಎಂಬುದಕ್ಕೆ ಒಂದು ಲೆಖ್ಖವುಂಟು. ಭಾರತದೇಶಕ್ಕೆ ಅಂತಹ ಲೆಖ್ಖವೇ ಇಲ್ಲ. ಎಷ್ಟು ಹಿಂದಿನ ಪುರಾಣವನ್ನು ನೋಡಿದರೂ, ಅದಕ್ಕೂ ಹಿಂದಿನದೊಂದು ಚರಿತ್ರೆಯೂ, ಒಬ್ಬ ಪ್ರಖ್ಯಾತನಾದ ರಾಜನೂ, ಆತನಕಾಲದಲ್ಲಿ ನಡೆದುವೆಂಬ ಮಹತ್ಕಾರ್ಯಗಳ ಕಥನವೂ ಇದ್ದೇ ಇರುವುವು. ಈ ಪ್ರಾಚೀನತೆಗೆ ತುದಿಮೊದಲಿಲ್ಲವೆಂಬಂತೆ ತೋರುವುದು. ಅಂತೆಯೇ, ನಮ್ಮ ಕಥಾನಾಯಕರಾದ ವಾಲ್ಮೀಕಮಹರ್ಷಿಗಳ ಕಾಲವೂ ಸಹ ಬಹು ಪ್ರಾಚೀನವಾದುದೆಂದು ತಿಳಿಯಬರುವುದು. ಆಧುನಿಕ ಚರಿತ್ರಕಾರರನೇಕರು, ರಾಮಾಯಣಗ್ರಂಥವು ವಾಲ್ಮೀಕಿಮಹರ್ಷಿಯಿಂದ ಕ್ರಿ. ಪೂ. ಎರಡುಸಾವಿರವರ್ಷಗಳ ಪೂರ್ವದಲ್ಲಿ ಅಥವ ಆ ಸುಮಾರಿನಲ್ಲಿ ರಚಿಸಲ್ಪಟ್ಟಿರಬಹುದೆಂದು ಊಹಿಸುವುದುಂಟು. ಆದರೆ, ಶಿಷ್ಟಸಂಪ್ರದಾಯದಂತೆ ರಾಮಾಯಣಕಾಲವೂ ಅದನ್ನು ರಚಿಸಿದ ವಾಲ್ಮೀಕಿಮಹರ್ಷಿಗಳ ಕಾಲವೂ ನಮ್ಮ ಈ ಕ್ಷುದ್ರಚರಿತ್ರೆಗೆ ಊಹಾತೀತವಾದ ಪುರಾಣಕಾಲವೆಂದು ಹೊರಪಡುವುವು. * 'ಶ್ರೀರಾಮಕಾಲ ನಿರ್ಣಯ ಬೋಧಿನೀ' ಎಂಬೊಂದು ಗ್ರಂಥದಲ್ಲಿ ಹೀಗೆ ಉಕ್ತವಾಗಿದೆ.

'ಕೃತ ತ್ರೇತಾ ದ್ವಾಪರ ಕಲಿ ಎಂಬ ನಾಲ್ಕು ಯುಗಗಳು ಸೇರಿದರೆ ಒಂದು ಮಹಾಯುಗವೆನಿಸಿಕೊಳ್ಳುವುದು. ಇಂತಹ ಎಪ್ಪತ್ತೊಂದು ಮಹಾಯುಗಗಳಿಗೆ ಒಂದು ಮನ್ವಂತರ. ಇದುವರೆಗೆ ಆರು ಮನ್ವಂತರಗಳು

*ಸಂಸ್ಕೃತ ಕವಿಚರಿತೆ, ಪುಟ ೧೦ - ೧೧.

ಕಳೆದು ಹೋಗಿರುವುವು. ಈಗ ನಡೆಯುವುದಾದ ವೈವಸ್ವತ ಮನ್ವಂತರ ದಲ್ಲಿ ೨೮ನೆಯ ಮಹಾಯುಗವು ನಡೆಯುತ್ತಿರುವುದು. ಈ ಮನ್ವಂತರದ ಐದನೆಯ ಮಹಾಯುಗವು ಕಳೆದ ತ್ರೇತಾಯುಗದ ನಾಲ್ಕನೆಯ ಭಾಗದಲ್ಲಿ ವಿಲಂಬಿ ಸಂವತ್ಸರ ಚೈತ್ರಶುದ್ಧ ನವಮಿ ಶ್ರೀರಾಮ ಜನನ.

| | | |
|---|---|---|
| ತ್ರೇತಾಯುಗ ಪ್ರಮಾಣ | ೧೨,೯೬,೦೦೦ | ವರ್ಷಗಳು |
| ಇದರ, ೪ನೆಯ ೩ ಭಾಗ | ೯,೭೨೦೦೦ | ,, |
| ಅನಂತರ ಶ್ರೀರಾಮ ಜನನ | ೩,೨೪೦೦೦ | ,, |
| ದ್ವಾಪರಯುಗ ಪ್ರಯಾಣ | ೮,೬೪೦೦೦ | ,, |
| ಕಲಿಯುಗವು ಹುಟ್ಟಿ ಈಗ್ಗೆ | ೫,೦೨೯ | ,, |
| ಶ್ರೀರಾಮ ಜನನವಾಗಿ ಈಗ್ಗೆ | ೧೧,೯೩೦೨೯ | ,, |
| ರಾಮನ ಆಯುಷ್ಯವು | ೧೧೦೪೦ | ,, |
| ರಾಮಾಯಣ ಕಾಲವು ಈಗ್ಗೆ | ೧೧೮೧೯೮೯ | ,, |

ಇದರಲ್ಲಿ ಈಗ ನಡೆಯುವ ಕ್ರಿ. ಶ. ೨೦ನೆಯ ಶತಮಾನವನ್ನು ತಳ್ಳಿ ಹಾಕಿಬಿಟ್ಟರೆ ರಾಮಾಯಣವು ಕ್ರಿ. ಪೂ. ೧೧೮೧ ಶತಮಾನಗಳ ಹಿಂದೆ ಬರೆಯಲ್ಪಟ್ಟಿತೆಂದು ಸ್ಥೂಲಮಾನದಿಂದ ವ್ಯಕ್ತವಾಗುವುದು''

ಮೇಲ್ಕಂಡ ಶ್ರೀರಾಮ ಕಾಲನಿರ್ಣಯ ಬೋಧಿನೀ ಗ್ರಂಥವನ್ನುದಾಹರಿಸಿ ಸಂಸ್ಕೃತ ಕವಿಚರಿತ್ರಕಾರರು ಮೇಲ್ಕಂಡಂತೆ ಲೆಖ್ಖವನ್ನು ಕೊಟ್ಟಿದ್ದಾರೆ. ಆದರಲ್ಲಿ ೨೮ನೆಯ ಮಹಾಯುಗದಲ್ಲಿನ ತ್ರೇತಾಯುಗದ ಚತುರ್ಥಪಾದದಿಂದ ಈವರೆಗಿನ ವರ್ಷಗಳೆಷ್ಟು ಎಂದು ಮಾತ್ರ ತಿಳಿದುಬರುತ್ತದಲ್ಲದೆ ಅವರು ಹೇಳುವಂತೆ ಐದನೆಯ ಮಹಾಯುಗದಲ್ಲಿನ ತ್ರೇತಾಯುಗದ ನಾಲ್ಕನೆಯ ಭಾಗದಿಂದ ಈಗ ನಡೆಯುತ್ತಿರುವ ೨೮ನೆಯ ಮಹಾಯುಗದ ಕಲಿಯುಗಕ್ಕೆ ಎಷ್ಟು ವರ್ಷಗಳಾದುವು ಎಂಬ ಲೆಖ್ಖವು ಕೊಡಲ್ಪಟ್ಟಿಲ್ಲ. ಆದರೆ ಸ್ಕಾಂದಪುರಾಣದಲ್ಲಿಯೂ, ಪದ್ಮಪುರಾಣದಲ್ಲಿಯೂ ಶ್ರೀ ರಾಮಾವತಾರವಾದುದು ೨೪ನೆಯ ಚತುರ್ಯುಗದ ತ್ರೇತಾಯುಗದಲ್ಲಿ ಎಂದು ಹೇಳಲ್ಪಟ್ಟಿದೆಯಾಗಿ ತಿಳಿಯಬರುತ್ತದೆ. ಅದನ್ನನುಸರಿಸಿ ಲೆಖ್ಖಮಾಡುವುದಾದರೆ:—

| | | | |
|---|---|---|---|
| ೨೪ನೆಯ | ತ್ರೇತಾಯುಗದ ಚತುರ್ಥಪಾದ | ೩,೨೪,೦೦೦. | ವರ್ಷಗಳು. |
| ,, | ದ್ವಾಪರಯುಗ | ೮,೬೪,೦೦೦. | ,, |
| ,, | ಕಲಿಯುಗ | ೪,೩೨,೦೦೦. | ,, |
| ೨೫ನೆಯ | ಚತುರ್ಯುಗ | ೪೩,೨೦,೦೦೦. | ,, |
| ೨೬ | ,, | ೪೩,೨೦,೦೦೦. | ,, |
| ೨೭ | ,, | ೪೩,೨೦,೦೦೦. | ,, |
| ೨೮ನೆಯ | ಕೃತಯುಗ | ೧೭೨೮೦೦೦ | ,, |
| ,, | ತ್ರೇತಾಯುಗ | ೧೨೯೬೦೦೦ | ,, |
| ,, | ದ್ವಾಪರಯುಗ | ೮೬೪೦೦೦ | ,, |
| ,, | ಕಲಿಯುಗದಲ್ಲಿ ಈವರೆಗೆ | ೫೦೩೩ | ,, |
| | | ೧,೮೪,೭೩,೦೩೩ | ,, |

ಎಂದರೆ ಶ್ರೀರಾಮಜನನವಾಗಿ ಇಂದಿಗೆ ಒಂದುಕೋಟಿ ಎಂಭತ್ನಾಲ್ಕು ಲಕ್ಷ ಎಪ್ಪತ್ತೂರುಸಾವಿರದ ಮೂವತ್ತೂರು ವರ್ಷಗಳಾದುವೆಂದು ಸ್ಪಷ್ಟವಾಗುತ್ತದೆ. ಹೀಗೆ ಕೋಟ್ಯಾಂತರ ವರ್ಷಗಳಿಗೆ ಹಿಂದೆ ರಾಮಾವತಾರವಾಗಿದ್ದುದಾದರೆ, ನಮ್ಮ ಕಥಾನಾಯಕರಾದ ವಾಲ್ಮೀಕಿ ಮಹರ್ಷಿಗಳೂ ಶ್ರೀರಾಮನ ಸಮಕಾಲೀನರಾಗಿದ್ದುದರಿಂದ ಅವರೂ ಅಷ್ಟು ಪ್ರಾಚೀನ ಕಾಲದವರೆಂದು ನಿಸ್ಸಂದೇಹವಾಗಿ ಹೇಳಬಹುದಾಗಿದೆ. ಅಷ್ಟು ಮಾತ್ರವಲ್ಲ- *ಒಬ್ಬಾನೊಬ್ಬ ಬಂಗಾಳೀ ಗ್ರಂಥಕಾರನು ವಾಲ್ಮೀಕಿ ಮಹರ್ಷಿಯು ರಾಮಾಯಣ ಗ್ರಂಥವನ್ನು ಶ್ರೀರಾಮ ಜನನಕ್ಕೆ ಅರುವತ್ತು ಸಾವಿರ ವರ್ಷಗಳ ಪೂರ್ವದಲ್ಲೇ ರಚನೆಮಾಡಿದನೆಂದು ಹೇಳುತ್ತಾನೆ.

ಇದಂತಿರಲಿ, ಈ ಎಲ್ಲಾ ವಿಚಾರಗಳಿಂದಲೂ ಮುಖ್ಯವಾಗಿ ರಾಮಾಯಣ ಗ್ರಂಥರಚನಾ ಕಾಲವೂ, ಶ್ರೀರಾಮ ಜನನಕಾಲವೂ, ಅಂತೆಯೇ

*'ವಾಲ್ಮೀಕೀರ ಜಯ' (ವಾಲ್ಮೀಕಿಯ ಜಯ) ಗ್ರಂಥಕರ್ತರು, ಮಹಾಮಹೋಪಾಧ್ಯಾಯ ಪಂಡಿತ ಹರಪ್ರಸಾದಶಾಸ್ತ್ರಿ ಎಂ. ಎ., ಯವರು.

ವಾಲ್ಮೀಕಿ ಮಹರ್ಷಿಗಳ ಕಾಲವೂ ನಮ್ಮ ಈಗಿನ ಚರಿತ್ರೆಯ ಲೆಖ್ಖಕ್ಕೆ ಅತಿದೂರವಾದ ಪುರಾಣಯುಗಕ್ಕೆ ಸಂಬಂಧಪಟ್ಟುವೆಂಬ ಒಂದು ಮಾತನ್ನು ನಿಸ್ಸಂದೇಹವಾಗಿ ಹೇಳಬಹುದಾಗಿದೆ. ಕೋಟ್ಯಾಂತರ ವರ್ಷಗಳ ಆ ಹಿಂದಿನ ಕಾಲದಲ್ಲೇ ಸರ್ವ ಸಂಪತ್ಪರಿಪೂರ್ಣವಾಗಿ ಸೂರ್ಯ-ಚಂದ್ರ ವಂಶಗಳ ರಾಜರ ಪಾಲನೆಯಿಂದ ಪ್ರಸಿದ್ಧವಾಗಿದ್ದುದೀ ಭರತಭೂಮಿ! ರಘು ದಿಲೀಪ ಭಗೀರಥ ಮಾಂಧಾತ ಹರಿಶ್ಚಂದ್ರ ಇಕ್ಷ್ವಾಕು ಮುಂತಾದ ರಾಜವರೇಣ್ಯರು ಶ್ರೀರಾಮನಿಗೆ ಅನೇಕ ಕಾಲಗಳ ಪೂರ್ವದಲ್ಲೇ ರಾಜ್ಯಭಾರ ಮಾಡಿ ಕೀರ್ತಿಶೇಷರಾದವರು. ಹೀಗೆ ಪುರಾಣಕಾಲವನ್ನು ವಿಚಾರಿಸುತ್ತಾ ಹೋಗುವುದಾದರೆ ಭರತಖಂಡದ ಪ್ರಾಚೀನತೆಯು ಗಣನಾತೀತವಾಗುತ್ತದೆ. ಇಂತಹ ಪುರಾತನವೂ, ಪವಿತ್ರತಮವೂ ಮಹರ್ಷಿಗಳ ನಿವಾಸಸ್ಥಾನವೂ ಆದ ಈ ನಾಡು, ಇಂದು ಪರಾಧೀನತೆಯಲ್ಲಿ ಸಿಕ್ಕು ಮುಂಗಾಣದೆ ತೊಳಲುತ್ತಿರುವುದೆಂದರೆ ಅದು ವಿಧಿಯ ವಿಚಿತ್ರವಿಲಾಸವಲ್ಲವೆ ?

---

## ಅಧ್ಯಾಯ ೨ "ಜನ್ಮಾಂತರೀಯ ಕಥಾ"

ನಮ್ಮ ಕಥಾನಾಯಕರ ಕಾಲವಿಚಾರದಲ್ಲಿ ಪೂರ್ವಾಧ್ಯಾಯದಲ್ಲಿ ವಿವರಿಸಿದಂತೆ ಇರುವ ಗೊಂದಲ ಮಾತ್ರವಲ್ಲ;- ಜಾತಿವಿಚಾರದಲ್ಲೂ ಒಂದು ದೊಡ್ಡ ಪ್ರಶ್ನೆಯು ಇತ್ಯರ್ಥವಾಗತಕ್ಕುದಿದೆ. ವಾಲ್ಮೀಕರು ಜನ್ಮತಃ ಕಿರಾತರಾಗಿದ್ದು ತಮ್ಮ ತಪಃಪ್ರಭಾವದಿಂದ ಮಹರ್ಷಿತ್ವವನ್ನು ಪಡೆದರೆಂಬುದೊಂದು ಚಿತಪರಿಚಿತ ವಿಚಾರವಷ್ಟೆ! * ಆದರೆ ಅವರು ಜನ್ಮತಃ ಬ್ರಾಹ್ಮಣರಾಗಿದ್ದು ಕಾರಣಾಂತರದಿಂದ ಪತಿತರಾಗಿ ಕಿರಾತವೃತ್ತಿಯಲ್ಲಿ ತೊಡಗಿದ್ದ

---

*ಅಹಂ ಪುರಾಕಿರಾತೇಷು ಕಿರಾತೈಸ್ಸಹವರ್ಧಿತಃ
ಜನ್ಮಮಾತ್ರಾದ್ವಿಜತ್ವಂ ಮೇ ಶೂದ್ರಾಚಾರರತಸ್ಸದಾ
ಅಧ್ಯಾತ್ಮ ರಾಮಾಯಣ
ಅಯೋಧ್ಯಾಕಾಂಡ ೬ - ೬೫

ರೆಂದು ಹೇಳುವಂತಹ ಸ್ಪಷ್ಟೋಕ್ತಿಗಳಿವೆ. ಸ್ಕಾಂಧಪುರಾಣದ ವೈಶಾಖ ಮಹಾತ್ಮ್ಯೆಯಲ್ಲಿ ವಾಲ್ಮೀಕರ ಪೂರ್ವಚರಿತ್ರೆಗೆ ಸಂಬಂಧಪಟ್ಟ ಕೆಲ ಅಪೂರ್ವ ವಿಚಾರಗಳು ದೊರೆಯುತ್ತವೆ. ಅವರ ಜನ್ಮಾಂತರ ಚರಿತ್ರೆಗೆ ಸಂಬಂಧಿಸಿದ ಆ ಕಥೆಯನ್ನು ಯಥಾವತ್ತಾಗಿ ಇಲ್ಲಿ ಕೊಡುತ್ತೇವೆ.

ಪಾವನವಾದ ಪಂಪಾತೀರದ ಒಂದಾನೊಂದು ಋಷ್ಯಾಶ್ರಮದಲ್ಲಿ ಶಂಖನಾಮಕ ಬ್ರಾಹ್ಮಣನು ವಾಸಮಾಡಿಕೊಂಡಿದ್ದನು. ಆತನು ವೇದವೇದಾಂಗಪಾರಂಗತನೂ, ಯಜನಯಾಜನಾದಿ ಷಟ್ಕರ್ಮನಿರತನೂ, ತಪಸ್ವಾಧ್ಯಾಯತತ್ಪರನೂ ಆಗಿ ಮಹಾಸಾಧುವೆನ್ನಿಸಿಕೊಂಡಿದ್ದನು. ಒಂದಾನೊಂದು ಪುಣ್ಯಕಾಲಪ್ರಾಪ್ತವಾಗುತ್ತಿರಲು ಆತನಿಗೆ ಗೋದಾವರೀ ಸ್ನಾನಕ್ಕೆ ಹೋಗಬೇಕೆಂಬ ಅಪೇಕ್ಷೆಯುಂಟಾಯಿತು. ಆ ಪಂಪಾಸರಸ್ತಟದಿಂದ ಗೋದಾವರೀತೀರಕ್ಕೆ ಪ್ರಯಾಣಮಾಡುವಾಗ್ಗೆ ಮಧ್ಯದಲ್ಲಿ ನಿರ್ಜಲವೂ ನಿರ್ಜನವೂ ಆದ ಒಂದು ಘೋರಾರಣ್ಯವನ್ನು ದಾಟಿಕೊಂಡು ಹೋಗಬೇಕಾಗಿದ್ದಿತು. ಸ್ನಾನದ ಮಹೋದ್ದೇಶದಿಂದ ಹೊರಟು, ಆ ಬ್ರಾಹ್ಮಣನು ಆ ನಿರ್ಜನವಾದ ಕಾಡಿನಲ್ಲಿ ಏಕಾಂಗಿಯಾಗಿ ಪ್ರಯಾಣಮಾಡುತ್ತಾ ಭೀಮರಥೀ ನದಿಯನ್ನು ದಾಟಿ, ಮುಂದೆಮುಂದೆ ಹೋಗುತ್ತಿರುವಲ್ಲಿ ಧನುರ್ಬಾಣಧಾರಿಯಾಗಿ ಯಮದೂತನಂತೆ ಭಯಂಕರ ಸ್ವರೂಪಿಯಾಗಿದ್ದ ಒಬ್ಬ ವ್ಯಾಧನು ಆತನಿಗೆ ದೃಷ್ಟಿಗೋಚರನಾದನು. ಅವನನ್ನು ಕಂಡೊಡನೆಯೇ ಸಾಧುಸ್ವಭಾವದ ಆ ಬ್ರಾಹ್ಮಣನಿಗೆ ಬಹುಭೀತಿಯುಂಟಾಗಿ ಕೈಕಾಲುಗಳು ನಡುಗಲಾರಂಭವಾದುವು. ಮುಂದೆ ಏನುಮಾಡಬೇಕೆಂದು ತೋರಲಿಲ್ಲ. ಹಾಗೆ ತತ್ತರಗೊಳ್ಳುತ್ತ ನಿಂತಿದ್ದ ಆತನ ಬಳಿಗೆ ಆ ಕಿರಾತನು ವೇಗದಿಂದ ಬಂದು, ಆತನ ಬಳಿಯಿದ್ದ ಛತ್ರಿ, ಅಕ್ಷಮಾಲಾ, ಕಮಂಡಲು, ಕುಂಡಲಾದಿ ಆಭರಣಗಳು ಮುಂತಾದುವನ್ನೂ, ಕೊನೆಗೆ ಆತನ ಪಾದರಕ್ಷೆಗಳನ್ನೂ ಕಿತ್ತುಕೊಂಡು ನಿಷ್ಠುರವಾಕ್ಕಿನಿಂದ ಹೋಗೆಂದು ತಳ್ಳಿಬಿಟ್ಟನು. ಬ್ರಾಹ್ಮಣನು ತನ್ನ ಸರ್ವಸ್ವವೂ ಹಾಗೆ ಅಪಹೃತವಾದುದರಿಂದ ಬಹು ಖಿನ್ನಮನಸ್ಕನಾಗಿ, ತನ್ನ ದುಸ್ಥಿತಿಗಾಗಿ ವಿಲಪಿಸುತ್ತ ಪ್ರಾಣದೊಂದಿಗೆ ಉಳಿದುದಕ್ಕಾಗಿ ಲೇಶಮಾತ್ರ ಸಂತೋಷವಾದರೂ, ಮುಂದೆಲ್ಲಿಗೆ ಹೋಗುವುದು ಏನು ಮಾಡುವುದು ಎಂಬುದು ತೋರದೆ ಹತಾಶನಾಗಿ, ಅಲ್ಲೇ ನಿಂತರೆ ಮತ್ತೆ ಎಲ್ಲಿ

ಆ ವ್ಯಾಧನ ಕೋಪಕ್ಕೆ ಪಾತ್ರನಾಗಬೇಕಾದೀತೋ ಎಂಬ ಭಯದಿಂದ ಅಲ್ಲಿಂದ ಹೊರಟು, ನಡೆಯತೊಡಗಿದನು. ಮಧ್ಯಾಹ್ನದ ಚಂಡಕಿರಣನ ಆ ಪ್ರಚಂಡಬೇಗೆಯಲ್ಲಿ ಕೆಳಗೆ ಕಾಯ್ದ ನೆಲವೂ ಮೇಲೆ ಬೆಂಕಿಯ ಮಳೆಯು ಸುರಿಯುವಂತಿದ್ದ ಅಸಹ್ಯ ಬಿಸಿಲಿನತಾಪವೂ ಆತನನ್ನು ಬಹುಮಟ್ಟಿಗೆ ಬಳಲಿಸಿ ತೊಳಲಿಸಿಬಿಟ್ಟುವು. ಬ್ರಾಹ್ಮಣನು ಬೆಂಕಿಯಂತೆ ಸುಡುತ್ತಿದ್ದ ಆ ಕಾದ ಮರಳಿನಮೇಲೆ ಕಾಲಿಟ್ಟು ನಡೆಯಲಾರದೆ ತಪಿಸುತ್ತಾ, ನರಳುತ್ತಾ, ಹಸಿವು ಬಾಯಾರಿಕೆಗಳ ಸಂಕಟದಿಂದ ತೊಳಲುತ್ತಾ ಭಯವಿಹ್ವಲನಾಗಿ ಹೆಜ್ಜೆಯಿಟ್ಟು ಹೋಗುತ್ತಿದ್ದನು. ಹಾಗೆ ಸಂಕಟಪಡುತ್ತಿದ್ದ ಆ ಬ್ರಾಹ್ಮಣನನ್ನು ಕಂಡು, ಪಶುಘಾತಕಿಯಾದ ಆ ಕಿರಾತನಿಗೂ ಮನಸ್ಸು ಕರಗಿತು. 'ಅಕ್ಕಟಾ ಈ ಪ್ರಾಣಿಯು ನಿಜವಾಗಿ ಬಹು ಸಂಕಟಪಡುತ್ತಿರುವನು. ಅಯ್ಯೋ ಪಾಪ! ಬಿಸಿಲು ಬಹಳವಾಗಿದೆ' ಎಂದುಕೊಂಡು- ಮತ್ತೇನು ಮಾಡುವನೋ ಎಂದು ಭಯಗೊಂಡು ಹಿಂದೆ ಹಿಂದೆ ನೋಡಿಕೊಂಡು ಹೋಗುತ್ತಿದ್ದ ಆ ಬ್ರಾಹ್ಮಣನನ್ನು ಬಾರೆಂದು ಕೂಗಿ ಕರೆದನು. ಬ್ರಾಹ್ಮಣನು, ತನ್ನಿಂದ ಮತ್ತೇನು ಪ್ರಮಾದವುಂಟಾಯಿತೋ, ಅದರ ಫಲವಾಗಿ ಬೇರಿನ್ನಾವ ಶಿಕ್ಷೆ ಕಾದಿದೆಯೋ ಎಂದು ಭಯಗೊಂಡು, ತುಟಿಬಾಯಿಗಳನ್ನು ಸವರಿಕೊಳ್ಳುತ್ತಾ ಹತ್ತಿರಕ್ಕೆ ಬರಲು, ಕಿರಾತನು ಅವನಿಂದ ತಾನು ಕಸಿದುಕೊಂಡಿದ್ದ ಪಾದರಕ್ಷೆಗಳನ್ನು ಹಿಂದಕ್ಕೆ ಕೊಟ್ಟು, - 'ಅವುಗಳನ್ನು ಹಾಕಿಕೊಂಡು ನಡೆದುಕೊಂಡುಹೋಗು' ಎಂದನು. ಮಹಾ ನಿಷ್ಕರುಣಿಯಾಗಿದ್ದ ಆ ವ್ಯಾಧನ ಮನಸ್ಸಿನಲ್ಲಿ ದಯಾಸಂಚಾರವಾದುದನ್ನು ಕಂಡು, ಆ ಬ್ರಾಹ್ಮಣನಿಗೆ ಪರಮಾಶ್ಚರ್ಯವಾಯಿತು. ಆಗಲಾತನು ಪ್ರತಿಮಾತನ್ನಾಡದೆ, ಆ ಪಾದರಕ್ಷೆಗಳನ್ನು ತೊಟ್ಟು ಸ್ವಸ್ಥಚಿತ್ತನಾಗಿ ನಿಂತುಕೊಂಡು ಪ್ರಸನ್ನದೃಷ್ಟಿಯಿಂದ ಆ ಕಿರಾತನನ್ನು ನೋಡಿ - 'ಶ್ರೇಯೋಸ್ತು, ಅಯ್ಯಾ ನಿನಗೆ ಸುಖವಾಗಲಿ. ನಿನ್ನಲ್ಲಿ ಹುಟ್ಟಿದ ಈ ಧರ್ಮಬುದ್ಧಿಗಾಗಿ ಶ್ರೀ ವಿಷ್ಣುವು ಪ್ರಸನ್ನನಾಗಿ ನಿನ್ನನ್ನು ಅನುಗ್ರಹಿಸುತ್ತಾನೆ' ಎಂದು ನುಡಿದನು.

ಆ ಮಾತುಗಳನ್ನು ಕೇಳಿದ ಕಿರಾತನು ಆಶ್ಚರ್ಯಗೊಂಡು, ನಕ್ಕು- 'ಅಲ್ಲವಯ್ಯಾ ಬ್ರಾಹ್ಮಣ, ನಿನ್ನದೇ ಆದ ಈ ವಸ್ತುವನ್ನು ನಿನಗೆ ಕೊಟ್ಟರೆ, ನನಗೆ ಪುಣ್ಯ ಹೇಗೆ ಬಂದೀತು' ಎಂದು ಪ್ರಶ್ನಿಸಿದನು. ಆಗಲಾ ಬ್ರಾ

ಹ್ಮಣನು – 'ಅಯ್ಯಾ ಹಾಗಲ್ಲ, ನೀನು ಯಾವಾಗ ಆ ವಸ್ತುಗಳನ್ನು ನಿನ್ನ ಕುಲಧರ್ಮಾನುಸಾರ ನನ್ನಿಂದ ತೆಗೆದುಕೊಂಡೆಯೋ ಆಗ ಅದು ನಿನ್ನದಾಯಿತು. ನಿನ್ನದಾದ ಈ ಸ್ವತ್ತನ್ನು ವೈಶಾಖಮಾಸದ ಈ ಬೇಗೆಯಲ್ಲಿ ಬೇಯುತ್ತಿದ್ದ ನನಗೆ ದಾನಮಾಡಿದುದರಿಂದ ಈ ಪುಣ್ಯವು ನಿನ್ನ ಜನ್ಮಾಂತರಾರ್ಜಿತ ಪುಣ್ಯಕರ್ಮವನ್ನು ಪರಿಪಾಕಗೊಳಿಸಿತು. ಆ ಮೂಲಕ ನಿನಗೆ ತಪ್ಪದೆ ಭಗವತ್ಕೃಪೆಯು ಲಭ್ಯವಾಗುತ್ತದೆ ಇದಕ್ಕೆ ಸಂಶಯವಿಲ್ಲ' ಎಂದು ನುಡಿದು, ವಿಷ್ಣುಮಾಹಾತ್ಮ್ಯವನ್ನು ವಿಸ್ತಾರವಾಗಿ ವರ್ಣಿಸಿ ಹೇಳಿದನು. ವ್ಯಾಧನೂ, ಆ ಬ್ರಾಹ್ಮಣನ ಅಮೃತಮಯ ವಾಕ್ಯಗಳನ್ನು ಕೇಳಿ ಕೇಳಿದಂತೆ ಆ ವಿಚಾರದಲ್ಲೇ ನಟ್ಟಮನಸ್ಸುಳ್ಳವನಾಗಿರುತ್ತಿರುವ ಆ ಕಾಲದಲ್ಲೇ ಒಂದು ಆಶ್ಚರ್ಯಕರ ವೃತ್ತಾಂತವು ನಡೆಯಿತು. ಅವರು ನಿಂತಿದ್ದ ಆ ಸ್ಥಳಕ್ಕೆ ಸಮೀಪದಲ್ಲಿನ ಪೊದೆಯ ಪಕ್ಕದಲ್ಲಿ ಒಂದು ಸಿಂಹವೂ ಒಂದು ವ್ಯಾಘ್ರವೂ ಕದನಮಾಡುತ್ತಿದ್ದು ಆ ಬ್ರಾಹ್ಮಣನು ಹೇಳಿದ ವಿಷ್ಣು ಮಾಹಾತ್ಮ್ಯಶ್ರವಣದಿಂದ ತಮ್ಮ ಆ ದುಷ್ಟಜನ್ಮದಿಂದ ಬಿಡುಗಡೆಯೊಂದಿ ದಿವ್ಯದೇಹಧಾರಿಗಳಾಗಿ ವಿಮಾನದಲ್ಲಿ ಕುಳಿತು ದೇವಲೋಕವನ್ನು ಕುರಿತು ಹೊರಟರು. ಕಿರಾತನು ತೇಜೋಮಯವಾದ ಅವರನ್ನು ಕಂಡು, ಬ್ರಾಹ್ಮಣನನ್ನು ಕುರಿತು – ಸ್ವಾಮಿ, ಇವರಾರು? ಇದುವರೆಗೆ ಸಿಂಹವ್ಯಾಘ್ರಗಳಾಗಿದ್ದ ಇವರಿಗೆ ನೂತನವೂ ತೇಜೋಮಯವೂ ಆದ ಈ ಶರೀರಗಳು ಹೇಗೆ ಪ್ರಾಪ್ತವಾದುವು' ಎಂದು ಪ್ರಶ್ನಿಸಿದುವು. ಬ್ರಾಹ್ಮಣನು – 'ಅಯ್ಯಾ ಕೇಳು, ನಾನು ನಿನಗೆ ಈವರೆಗೆ ಹೇಳುತ್ತಾ ಬಂದ ವಿಷ್ಣುಮಾಹಾತ್ಮ್ಯಶ್ರವಣವು, ಸಂಸಾರಬಂಧನ ತಾರಕರೂಪವಾದುದರಿಂದ, ಶಾಪದಿಂದ ಹೀಗೆ ದುಷ್ಟಜನ್ಮಗಳನ್ನೆತ್ತಿದ್ದ ಇವರು ಆ ಸತ್ಕಥಾಶ್ರವಣದ ಯೋಗದಿಂದ ಬಿಡುಗಡೆ ಹೊಂದಿದರು' ಎಂದು ನುಡಿದನು. ಈ ಆಶ್ಚರ್ಯವನ್ನು ಕಂಡಮೇಲಂತೂ ವ್ಯಾಧನ ಮನಸ್ಥಿತಿಯೇ ಬದಲಾದಂತಾಯಿತು. ಒಡನೆ ಆತನು ತನ್ನ ಕೈಯಲ್ಲಿದ್ದ ಧನುರ್ಬಾಣಗಳನ್ನೂ ಇತರ ಆಯುಧಾದಿಗಳನ್ನೂ ಕೆಳಗಿಟ್ಟು, ಆ ಬ್ರಾಹ್ಮಣನಿಗೆ ಶ್ರದ್ಧಾಭಕ್ತಿಪೂರ್ವಕವಾಗಿ ಕೈಮುಗಿದು – 'ಸ್ವಾಮಿ, ತಮ್ಮ ಪಾದದಲ್ಲಿ ನಾನು ಮಹಾಪರಾಧಮಾಡಿದೆನು. ನನ್ನಿಂದ ಸಜ್ಜನರಾದ ತಮಗೆ ಬಹು ತೊಂದರೆಯುಂಟಾಯಿತು. ಅದನ್ನು ಮನಸ್ಸಿಗೆ ತಾ

ರವೆ, ನನ್ನನ್ನು ಶಿಷ್ಯನನ್ನಾಗಿ ಸ್ವೀಕರಿಸಿ ಉದ್ಧಾರಮಾಡಬೇಕು' ಎಂದು ಪ್ರಾರ್ಥಿಸಿಕೊಂಡನು.

ತನ್ನ ಸರ್ವಸ್ವಾಪಹಾರಮಾಡಿ ಪ್ರಾಣವನ್ನು ತೆಗೆಯಲೂ ಸಿದ್ಧನಾಗಿದ್ದ ಆ ಕಿರಾತನಲ್ಲಿ ಉಂಟಾದ ಪರಿವರ್ತನೆಯನ್ನು ಕಂಡು ಬ್ರಾಹ್ಮಣನಿಗೆ ಬಹು ಸಮಾಧಾನವೆನ್ನಿಸಿತು. 'ಅಯ್ಯಾ ಸತ್ಪುರುಷನೇ, ನನಗೆ ಬಹು ದಾಹವಾಗುತ್ತದೆ. ಎಲ್ಲಾದರೂ ಸ್ವಲ್ಪ ನೀರು ಸಿಕ್ಕಿದರೆ ಸ್ನಾನಪಾನಗಳನ್ನು ತೀರಿಸಿಕೊಂಡು ತರುವಾಯ ನಿನ್ನ ಇಚ್ಛಾನುಸಾರ ಬೇಕಾದುದನ್ನು ಹೇಳುತ್ತೇನೆ' ಎನ್ನಲು- ಆವ್ಯಾಧನು ಬಹು ಶ್ರದ್ಧಾಭಕ್ತಿಯಿಂದ ಆತನಿಗೆ ಮಾರ್ಗವನ್ನು ಸರಿಗೊಳಿಸುತ್ತಾ ಮುಂದೆ ನಡೆಯಲು ಸ್ವಲ್ಪ ಹೊತ್ತಿನಲ್ಲೇ ಅವರು ಸಮೀಪದಲ್ಲಿದ್ದ ಒಂದು ಜಲಾಶಯದ ಬಳಿಗೆ ಬಂದರು. ಬ್ರಾಹ್ಮಣನು ಅಲ್ಲಿಯ ನಿರ್ಮಲ ಜಲದಲ್ಲಿ ಸ್ನಾನಾನ್ಹಿಕಗಳನ್ನು ಮುಗಿಸಿಕೊಳ್ಳುವ ವೇಳೆಗೆ ವ್ಯಾಧನು ಸಮೀಪದ ವನವೃಕ್ಷಗಳಲ್ಲಿದ್ದ ಹಣ್ಣುಹಂಪಲುಗಳನ್ನು ತಂದು ಒದಗಿಸಿದನು. ಬ್ರಾಹ್ಮಣರು ತರುವಾಯ ಫಲಾಹಾರಮಾಡಿ ಜಲಪಾನಮಾಡಿ ಸಂತುಷ್ಟನಾಗಿ ಕುಳಿತಿರಲು- ಆವರೆಗೆ ತನ್ನ ದುಷ್ಟಜನ್ಮದ ವಿಚಾರವನ್ನು ಕುರಿತ ಯೋಚನೆಯಲ್ಲೇ ಮಗ್ನನಾಗಿದ್ದ ವ್ಯಾಧನು ಬಳಿಗೆ ಬಂದು ಸಾಷ್ಟಾಂಗನಮಸ್ಕಾರಮಾಡಿ ಕೈಜೋಡಿಸಿ ನಿಂತುಕೊಂಡು- 'ಮಹಾಸ್ವಾಮಿ, ನನಗೆ ಯಾವ ಜನ್ಮದ ದುಷ್ಕರ್ಮ ಫಲವಾಗಿ ಈ ವ್ಯಾಧಜನ್ಮವು ಪ್ರಾಪ್ತವಾಗಿದೆಯೋ ಅದನ್ನು ತಿಳಿಸಿ ಕಾಪಾಡಬೇಕು- ಅಷ್ಟುಮಾತ್ರವಲ್ಲ- ಮಹಾ ದುಷ್ಕರ್ಮನಿರತನಾದ ನನಗೆ ತಮ್ಮಂತಹ ಸಜ್ಜನಸಮಾಗಮವಾದುದರ ಕಾರಣವಾದರೂ ಏನು? ಏಕೆಂದರೆ, ಸದ್ಗತಿದಾಯಕವಾದ ಸಜ್ಜನಸಮಾಗಮವೂ, ಸದ್ವಿಚಾರ ಶ್ರವಣವೂ ಸುಲಭವಾಗಿ ಲಭ್ಯವಾಗಲಾರವು' ಎಂದು ಬಿನ್ನವಿಸಿಕೊಂಡನು.

ವ್ಯಾಧನ ಆ ಮಾತುಗಳನ್ನು ಕೇಳಿ ಮಹಾ ತಪಸ್ವಿಯಾದ ಆ ಬ್ರಾಹ್ಮಣನು, ಆತನ ಸ್ಥಿತಿ ಯೇನಾಗಿದ್ದಿತೆಂದು ಜ್ಞಾನದೃಷ್ಟಿಯಿಂದ ನೋಡಲು ಆ ಸಂಬಂಧವಾದ ಸಕಲ ವೃತ್ತಾಂತಗಳೂ ಕರತಲಾಮಲಕವಾಗಿ ತಿಳಿದು ಹೋದುವು.—'ಕೇಳು ಆಪ್ತಬಂಧುವೇ, ಹಿಂದೆ ಶಾಕಲವೆಂಬೊಂದು ಊರಿನಲ್ಲಿ ಶ್ರೀವತ್ಸ ಗೋತ್ರೋದ್ಭವನಾದ ಸ್ತಂಬನೆಂಬೊಬ್ಬ ಬ್ರಾಹ್ಮಣನಿ

ದ್ದನು. ವೇದವೇದಾಂಗ ಪಾರಂಗತನೂ ಷಟ್ಕರ್ಮನಿರತನೂ ಆದ ಆತನು ಕಾಂತಿಮತಿಯೆಂಬ ಪತ್ನೀಸಮೇತನಾಗಿ ಸುಖವಾಗಿ ವಾಸಮಾಡಿ ಕೊಂಡಿದ್ದನು. ಮುಂದೊಂದು ದುರ್ಮುಹೂರ್ತದಲ್ಲಿ ಆತನಿಗೆ ಪ್ರಾರಬ್ಧ ಕರ್ಮಯೋಗದಿಂದ ವೇಶ್ಯಾಸಮಾಗಮವಾಯಿತು. ಆ ದುಸ್ಸಂಗದ ಪ್ರಭಾವದಿಂದ ಮುಂದೆ ಆತನಿಗೆ ನಿತ್ಯಕರ್ಮಗಳೂ, ವೇದಾಂತವಿಚಾರವೂ, ನಿಷ್ಠಾವಂತರ ಸಂಗವೂ ದೂರವಾಗಿ ಸ್ತಂಬ ಬ್ರಾಹ್ಮಣನು ಕೇವಲ ಶೂದ್ರವೃತ್ತಿಯಿಂದ ಜೀವಿಸಲಾರಂಭಿಸಿದನು. ತನ್ನ ಪತಿಯು ವೇಶ್ಯಾನುರಕ್ತನೂ ಧರ್ಮಬಾಹಿರನೂ ಆಗಿದ್ದರೂ, ಕಾಂತಿಮತಿಯು ಅತ್ಯಂತ ಪತಿಭಕ್ತಿ ಪರಾಯಣಳಾಗಿದ್ದು ಆತನನ್ನು ಅನುವರ್ತಿಸಿಕೊಂಡಿರುತ್ತಾ, ಇಂದಲ್ಲದಿದ್ದರೆ ಮುಂದೆ ಎಂದಿಗಾದರೂ ಆತನಿಗೆ ಮನಃಪರಿವರ್ತನೆಯುಂಟಾಗದಿರದು ಎಂದು ನಂಬಿ, ಆತನ ಪ್ರೇಮಸಂಪಾದನೆಗಾಗಿ, ಆ ವೇಶ್ಯೆಯ ಮತ್ತು ಆತನ ಸೇವೆಯನ್ನೂ ಬೇಸರವಿಲ್ಲದೆ ಮಾಡಿಕೊಂಡಿದ್ದಳು. ಸ್ತಂಬನು ಮಹಾ ಸಾಧ್ವಿಯಾದ ಆ ಪತ್ನಿಯ ವಿಚಾರವನ್ನೇ ಮನಸ್ಸಿಗೆ ತಂದುಕೊಳ್ಳದೆ. ಸದಾ ವೇಶ್ಯಾಲೋಲನಾಗಿ ಮತ್ತನಾಗಿ ಇದ್ದುಬಿಟ್ಟನು. ಅಭೋಜ್ಯ ಭೋಜನ, ಅಪೇಯಪಾನ, ಸಂತೃಪ್ತಿಯನ್ನೇ ಕಾಣದ ಅಮಿತಭೋಗ ಮುಂತಾದುವುಗಳ ಫಲವಾಗಿ ಅವನಿಗೆ ಮಹಾ ಘೋರವಾದ ಭಗಂದರ ರೋಗವು ಪ್ರಾಪ್ತವಾಯಿತು. ಕೈಯಲ್ಲಿದ್ದ ಧನವು ವೆಚ್ಚವಾಗಿ, ದಾರಿದ್ರ್ಯವು ಪ್ರಾಪ್ತವಾಯಿತು. ಅದನ್ನು ಕಂಡ ಆ ವೇಶ್ಯೆಯು ಸಂಪಾದನಾ ವಿಹೀನನೂ ರೋಗಪೀಡಿತನೂ ಆದ ಆತನನ್ನು ಬಿಟ್ಟು ಬೇರೊಬ್ಬನನ್ನು ಹುಡುಕಿಕೊಂಡು ಹೊರಟುಹೋದಳು. ಅಸಹ್ಯ ರೋಗಬಾಧೆಯಿಂದ ಪೀಡಿತನಾದ ಅವನು, ಆಗ ವಿಶೇಷ ಸಂತಾಪಕ್ಕೊಳಗಾಗಿ, ಆಗಲೂ ತನ್ನನ್ನು ಅನುವರ್ತಿಸಿಕೊಂಡು ಬೇಸರಗೊಳ್ಳದೆ ಸೇವೆಮಾಡಿಕೊಂಡಿದ್ದ ಪತ್ನಿ ಕಾಂತಿಮತೀದೇವಿಯನ್ನು ಕುರಿತು,-'ಸಾಧ್ವೀಮಣಿ, ಪರಮ ಪಾಪಿಯೂ ದುರಾಚಾರಿಯೂ ಆದ ನನ್ನನ್ನು ನೀನು ದಯಮಾಡಿ ಸಹಸ್ರಬಾರಿ ಕ್ಷಮಿಸಬೇಕು. ನಿನ್ನ ಕ್ಷಮಾಗುಣವು ಅನ್ಯಾದೃಶವಾದುದು. ಅಕ್ಕಟಾ, ನಿನ್ನಂತಹ ಧರ್ಮಪತ್ನಿಯನ್ನು ಮಹಾ ಸಂತಾಪಕ್ಕೆ ಗುರಿಪಡಿಸಿ ಮಾಡಬಾರದ ದುಷ್ಕೃತ್ಯಗಳನ್ನೆಲ್ಲ ಮಾಡಿ, ಶಾಶ್ವತ ನರಕವಾಸವನ್ನು ಕಲ್ಪಿಸಿಕೊಂಡೆನಲ್ಲ. ಅಕ್ಕ

ಟಾ ನನಗಿನ್ನೇನುಗತಿ! ನಾನು ಉದ್ಧಾರವಾಗುವುದೆಂದಿಗೆ ' ಎಂದು ಅಗಾಧ ಪಶ್ಚಾತ್ತಾಪಕ್ಕೊಳಗಾಗಿ, ವ್ಯಸನಾಕ್ರಾಂತನಾದನು. ಶಾಂತಿಮತಿಯು ತನ್ನ ಪತಿಯ ಮನಸ್ಸು ಪಶ್ಚಾತ್ತಾಪಯುಕ್ತವಾದುದನ್ನು ಕಂಡು ಸಮಾಧಾನಹೊಂದಿ, ಆತನನ್ನು ಅನೇಕ ಬಗೆಯ ಹಿತವಾಕ್ಯಗಳಿಂದ ಆದರಿಸುತ್ತಾ ಆತನ ಪಾಪಪರಿಹಾರವಾಗಲೆಂದು ವಿಶೇಷ ರೀತಿಯಿಂದ ಭಗವತ್ಪ್ರಾರ್ಥನೆಗಳನ್ನು ಮಾಡಿಕೊಂಡಿದ್ದಳು. ರೋಗವು ದಿನದಿನಕ್ಕೆ ಪ್ರಬಲವಾಗಿ ತರುವಾಯ ಕೆಲವು ದಿನಗಳಮೇಲೆ ಸ್ತಂಬನು ಪಂಚತ್ವವನ್ನೈದಿದನು. ಅತಿಶಯ ದುರ್ಮಾರ್ಗತನದಿಂದಲೇ ತನ್ನ ಜೀವಮಾನವನ್ನೆಲ್ಲ ಕಳೆದಿದ್ದ ಅವನಿಗೆ ಮರಣಕಾಲದಲ್ಲೂ ಆ ವೇಶ್ಯಾದುಃಖವು ಬಿಡದೆ ಬಾಧಿಸುತ್ತಿರಲು, ಆತನು ಅವಳ ಸ್ಮರಣೆಯಲ್ಲೇ ಪ್ರಾಣಬಿಟ್ಟನು. ಕಾಂತಿಮತಿಯು ಅವನ ಕಳೇಬರದೊಂದಿಗೆ ಸಹಗಮನವಾಡಿ ದೇಹಬಿಟ್ಟಳು.

' ಪ್ರಿಯಬಂಧುವೇ ಲಾಲಿಸು. ಮಹಾ ದುರ್ಮಾರ್ಗಿಯಾಗಿ ಬದುಕಿ ವೇಶ್ಯಾ ಚಿಂತೆಯಿಂದಲೇ ಪ್ರಾಣಬಿಟ್ಟ ಆ ಸ್ತಂಬನೆಂಬ ಬ್ರಹ್ಮಬಂಧುವನ್ನು ಕರ್ಮಾಧಿದೇವತೆಗಳು ಕಿರಾತ ಜನ್ಮವನ್ನೆತ್ತುವಂತೆ ವಿಧಿಸಿದರು. ಅಯ್ಯಾ ಅದೇ ನಿನ್ನ ಈಗಿನ ಜನ್ಮವೆಂದು ತಿಳಿ. ಸಾಧ್ವೀಮಣಿಯಾದ ಆ ಕಾಂತಿಮತೀದೇವಿಯು ದುರಾಚಾರಿಯಾಗಿದ್ದ ತನ್ನ ಪತಿಯ ಶ್ರೇಯಸ್ಸಿಗಾಗಿ ಮಾಡುತ್ತಿದ್ದ ಭಗವತ್ಪ್ರಾರ್ಥನೆ ಮುಂತಾದ ಸತ್ಕಾರ್ಯಗಳ ಫಲವಾಗಿಯೇ ಈಗ ನಿನಗೆ ಸದ್ಬುದ್ಧಿಯೂ, ಸಾಧುಮಾರ್ಗವೂ, ಚಿತ್ತಶುದ್ಧಿಯೂ ಉಂಟಾಗಲು ಅವಕಾಶವಾಯಿತು. ಇಂತಿದು ನಿನ್ನ ಪೂರ್ವ ವೃತ್ತಾಂತವು' ಎಂದು ನುಡಿದು ಸುಮ್ಮನಾದನು.

ಪಾಪಕ್ರಿಯಾ ಪರಿಪೂರಿತವಾದ ತನ್ನ ಪೂರ್ವ ಜನ್ಮ ವೃತ್ತಾಂತವನ್ನು ಆ ಬ್ರಾಹ್ಮಣವರ್ಯನ ಮುಖದಿಂದ ಕೇಳಿದ ವ್ಯಾಧನು, ಅತಿಶಯ ವ್ಯಸನದಿಂದಲೂ ನಾಚಿಕೆಯಿಂದಲೂ ಮುಂದೋರದೆ ಸ್ವಲ್ಪಹೊತ್ತು ಅಧೋವದನನಾಗಿ ಕುಳಿತಿದ್ದು, ತರುವಾಯ ಮೇಲಕ್ಕೆದ್ದು ಆ ವಿಪ್ರೋತ್ತಮನಿಗೆ ದೀರ್ಘದಂಡವತ್ ನಮಸ್ಕಾರಮಾಡಿ — 'ಮಹಾತ್ಮಾ ಬ್ರಾಹ್ಮ

ಹೋತ್ತಮಾ ಅತ್ಯಂತ ಪಾಪಿಯಾದ ನನ್ನನ್ನು ಸನ್ಮಾರ್ಗದಲ್ಲಿ ಬಿಟ್ಟು ಉದ್ಧಾರಮಾಡುವ ಮತ್ತಾರನ್ನೂ ನಾನು ಕಾಣೆನು. ತಾವು ಹೇಳಿದಂತೆ ಲೇಶಮಾತ್ರ ಜನ್ಮಾಂತರಾರ್ಜಿತ ಸುಕೃತ ಪರಿಪಾಕದಿಂದ ತಮ್ಮ ಪಾದ ಸಂದರ್ಶನವಾಗಿ, ಈದಿನ ನನ್ನ ಜನ್ಮದಲ್ಲೇ ಒಂದು ವಿಧವಾದ ಪರಿವರ್ತನೆಯುಂಟಾಗಿದೆ. ಈ ಸ್ಥಿತಿಯಲ್ಲೇ ನನ್ನನ್ನು ಬಿಟ್ಟು ಹೋಗದೆ, ಮಹಾಪಾಪಿ ಜೀವನನಾದ ನನ್ನ ಉದ್ಧಾರಕ್ಕೆ ಆವಶ್ಯಕವಾದ ಒಂದು ಮಾರ್ಗವನ್ನು ತೋರಿಸಿ ಕಾಪಾಡಶಕ್ಯದವ ತಮ್ಮ ಪಾದವನ್ನೇ ಸೇರಿದೆ. ನನಗಿನ್ನು ಬೇರೆ ದಿಕ್ಕಿಲ್ಲ. ಸರ್ವಸ್ವವೂ ತಾವೇ ಎಂದು ನೆರೆನಂಬಿದ್ದೇನೆ' ಎಂದು ಕಣ್ಣುಗಳಿಂದ ಧಾರಾಕಾರವಾಗಿ ನೀರನ್ನು ಸುರಿಸುತ್ತಾ, ಎರಡು ಪಾದಗಳನ್ನೂ ಹಿಡಿದು ಬೇಡಿಕೊಂಡನು.

ಸ್ವಭಾವವಾಗಿಯೇ ದಯಾಳುವಾದ ಆ ಬ್ರಾಹ್ಮಣನು, ಪಶ್ಚಾತ್ತಾಪಾಗ್ನಿಯಿಂದ ಬೆಂದ ಆ ವ್ಯಾಧನ ಯಥಾರ್ಥವಾದ ಸ್ಥಿತಿಯನ್ನು ಅರಿತವನಾಗಿ, ಕಣ್ಣುಗಳಲ್ಲಿ ಆನಂದಬಾಷ್ಪವು ಸೂಸುತ್ತಿರಲು - 'ಮಗೂ ವ್ಯಸನಪಡಬೇಡ. ನಿನ್ನ ವಿಷಯದಲ್ಲಿ ವಾಸ್ತವವಾಗಿಯೂ ಭಗವತ್ಪ್ರಸಾದವುಂಟಾಗಿದೆ. ಹಾಗಿಲ್ಲದಿದ್ದಲ್ಲಿ, ಕಿರಾತವೃತ್ತಿಯ ನಿನ್ನೀ ಕಠಿನಹೃದಯವು ಇಷ್ಟುಮಟ್ಟಿಗೆ ಮಾರ್ದವವನ್ನು ಹೊಂದುವುದೆಂದರೇನು? ನೀನಿನ್ನು ಚಿಂತಿಸಬೇಡ. ಜಗಜ್ಜನ್ಮಾದಿಕಾರಣನೂ, ಬ್ರಹ್ಮರುದ್ರಾದಿ ನಿಯಾಮಕನೂ, ಲಕ್ಷ್ಮೀಪತಿಯೂ ಆದ ಶ್ರೀಮನ್ನಾರಾಯಣನು, ಸರ್ವಭೂತ ಹೃದಯಾಂತರ್ವರ್ತಿಯಾಗಿರುವನು. ಯಾವ ಹೃದಯವು ಪಶ್ಚಾತ್ತಾಪಾಗ್ನಿಯಿಂದ ಪುಟವಿಡಲ್ಪಟ್ಟು ಶುದ್ಧವಾಗುವುದೋ ಅಲ್ಲಿ ಆತನು ಪ್ರಕಟವಾಗಿಯೇ ಆಗುವನು. ಈಗ ನಿನ್ನಲ್ಲಿ ನಿಶ್ಚಯವಾದ ಪಶ್ಚಾತ್ತಾಪವುಂಟಾಗಿರುವುದರಿಂದಲೇ ಪಾಪಪರಿಹಾರ ಮಾಡಿಕೊಂಡು ಸದ್ಗತಿಯ ಮಾರ್ಗದಲ್ಲಿ ನಡೆಬೇಕೆಂಬ ಆತುರವು ನಿನಗುಂಟಾಗಿರುವುದು. ಇನ್ನು ಚಿಂತಿಸಬೇಡ. ಯಾವ ಬಗೆಯ ವಿಧ್ಯುಕ್ತ ಕರ್ಮಾಚರಣೆಗಾಗಲೀ ಯಜ್ಞಯಾಗಾದಿಗಳನ್ನು ಮಾಡುವುದಕ್ಕಾಗಲೀ ಯೋಗ್ಯವೆನ್ನಿಸದ ನಿನ್ನೀಸ್ಥಿತಿಯಲ್ಲಿ, ಭಗವಂತನಾದ ಶ್ರೀ ರಮಾಪತಿಯ ಪಾವನ ನಾಮಧ್ಯಾನವೊಂದೇ ಉದ್ಧಾರಕ ಸಾಮಗ್ರಿಯಾಗಿರು

ವುದು. ಒಂದು ರಹಸ್ಯವನ್ನು ಹೇಳುವೆನು ಕೇಳು, * ರಾಮ ಎಂಬ ನಾಮ ಜಪವು ವಿಷ್ಣು ಸಹಸ್ರನಾಮ ಜಪಕ್ಕಿಂತಲೂ ಅಧಿಕವೆನ್ನಿಸಿರುವುದು. ನಿನಗೆ ಪರಮಪಾವನವಾದ ಆ ನಾಮ ಮಂತ್ರವನ್ನು ಉಪದೇಶಿಸುವೆನು. ಅದನ್ನು ಶ್ರದ್ಧಾಭಕ್ತಿ ಪೂರ್ವಕವಾಗಿ ಸದಾ ಜಪಿಸುತ್ತಾ, ಪಾಪಕರ್ಮವನ್ನು ವರ್ಜಿಸಿ ಜೀವಿಸಿಕೊಂಡಿರು. ಈ ದೇಹಾವಸಾನವಾದ ನಂತರದಲ್ಲಿ ನಿನಗೆ ವಾಲ್ಮೀಕಋಷಿಯ ಉದರದಲ್ಲಿ ಜನ್ಮವಾಗುವುದು. ಆಗ ಶ್ರೀ ರಾಮಸೇವಾ ರೂಪವಾದ ಅಗಾಧ ಕಾರ್ಯವೊಂದು ನಿನ್ನಿಂದ ನಡೆಯಲಿರುವುದು. ತನ್ಮೂಲಕ ನಿನಗೆ ಶಾಶ್ವತವಾದ ಸದ್ಗತಿಯು ಪ್ರಾಪ್ತವಾಗುವುದು. ಜೀವನ್ಮುಕ್ತನಾಗುವೆ' ಎಂದು ನುಡಿದನು.

ಬ್ರಾಹ್ಮಣೋತ್ತಮನ ವದನಾರವಿಂದದಿಂದ ಹೊರಡುತ್ತಿದ್ದ ಕರ್ಣರಸಾಯನವಾದ ಆ ಮಾತುಗಳನ್ನು ಕೇಳಿಕೇಳಿದಂತೆ ವ್ಯಾಧನ ಕಣ್ಣುಗಳಲ್ಲಿ ಆನಂದ ಬಾಷ್ಪವು ಧಾರಾಳವಾಗಿ ಹರಿಯಿತು. ಮೈಯಲ್ಲಿ ಪುಳಕಗಳುಂಟಾದುವು. ಪವಿತ್ರತಮವಾದ ಶ್ರೀರಾಮ ನಾಮಾಮೃತವನ್ನು ಎಂದಿಗೆ ಪಾನ ಮಾಡಿಯೇನು ಎಂಬ ಆತುರವು ಹೆಚ್ಚಾಗಲು, ಒಡನೆಹೋಗಿ ಅಲ್ಲೇ ಇದ್ದ ಸರಸ್ಸಿನಲ್ಲಿ ಸ್ನಾನಮಾಡಿಕೊಂಡು ಬಂದು ಶಂಖಮುನಿಯ ಎದುರಿಗೆ ದೀರ್ಘದಂಡನಮಸ್ಕಾರಮಾಡಿ ಕೈಮುಗಿದು ನಿಂತುಕೊಂಡನು. ಬ್ರಾಹ್ಮಣನು ಆ ವ್ಯಾಧನಲ್ಲಿ ಹುಟ್ಟಿದ ಹೃದಯ ಪರಿವರ್ತನೆಗಾಗಿ ಮೇಲಿಮೇಲಿ ಆಶ್ಚರ್ಯಗೊಳ್ಳುತ್ತಾ, ಆತನಿಗೆ ರಾಮ ರಾಮ ಎಂಬ ನಾಮಮಂತ್ರವನ್ನು ಉಪದೇಶಿಸಿ ಅದನ್ನು ಸದಾ ಜಪಿಸುತ್ತಿರೆಂದು ಸಂದೇಶವನ್ನಿತ್ತು, ತನ್ನ ಮಾರ್ಗವನ್ನು ಕುರಿತು ಹೊರಡಲುದ್ಯುಕ್ತನಾದನು. ವ್ಯಾಧನು ತಾನು ಆತನಿಂದ ಕಿತ್ತುಕೊಂಡಿದ್ದ ಛತ್ರ ವ್ಯಜನ ಕುಂಡಲಾದಿ ಸಮಸ್ತ ವಸ್ತುಗಳನ್ನೂ ಕೃತಜ್ಞತಾ ಪೂರ್ವಕವಾಗಿ ಸಮರ್ಪಿಸಿದುದಲ್ಲದೆ, ಅಜ್ಞಾನವಶ

---

* ಪಾರ್ವತ್ಯುವಾಚ :—ಕೇನೋಪಾಯೇನ ಲಘುನಾ ವಿಷ್ಣೋರ್ನಾಮ ಸಹಸ್ರಕಂ
ಪಠ್ಯತೇ ಪಂಡಿತೈರ್ನಿತ್ಯಂ ಶ್ರೋತುಮಿಚ್ಛಾಮ್ಯಹಂ ಪ್ರಭೋ
ಈಶ್ವರೋವಾಚ :—ಶ್ರೀ ರಾಮರಾಮ ರಾಮೇತಿ ರಮೇ ರಾಮೇ ಮನೋರಮೇ
ಶ್ರೀ ಸಹಸ್ರನಾಮ ತತ್ತುಲ್ಯಂ ಶ್ರೀರಾಮನಾಮ ವರಾನನೇ ?

ವಾಗಿ ತನ್ನಿಂದ ನಡೆದ ಅಪಚಾರವನ್ನು ಮನಸ್ಸಿನಲ್ಲಿಡಬಾರದೆಂದು ಮತ್ತೆ ಮತ್ತೆ ಪ್ರಾರ್ಥಿಸಿಕೊಂಡನು. ಬ್ರಾಹ್ಮಣನು ಚಿಂತೆಪಡಬೇಡವೆಂದು ಅವನನ್ನು ಆಶೀರ್ವದಿಸಿ ಗೋದಾವರೀ ತೀರ್ಥವನ್ನು ಕುರಿತು ಪ್ರಯಾಣ ಮಾಡಿದನು. ಬ್ರಾಹ್ಮಣನ ಸತ್ಸಾಂಗತ್ಯದಿಂದ ವರ್ಜಿತನಾದಮೇಲೆ, ವ್ಯಾಧನು ತಾಯಿಯಿಂದ ಬಿಡಲ್ಪಟ್ಟ ಕರುವಿನಂತೆ ಬಹು ವ್ಯಥೆಪಟ್ಟು, ಪುನಃ ತನ್ನ ಪತ್ನೀಪುತ್ರಾದಿಗಳ ಬಳಿಗೆ ಹೋಗಲು ಇಷ್ಟಪಡದೆ ಆ ಕಾಡಿನಲ್ಲೇ ಇದ್ದುಬಿಡಲು ಸಂಕಲ್ಪಿಸಿದನು. ಮನಸ್ಸನ್ನು ವೈರಾಗ್ಯ ವಿಚಾರವು ಆವರಿಸಿತು. ತನ್ನ ಆ ಜನ್ಮದಲ್ಲಿ ಆಚರಿಸಿದ ಅಗಣಿತ ಪಶುಹತ್ಯೆ, ನರಹತ್ಯೆ, ಸಾಧುನಿಂದೆ, ಮದ್ಯಮಾಂಸಾದಿ ಭಕ್ಷಣೆ, ಸ್ವರ್ಣಸ್ತೇಯಾದಿ ಮಹಾಪಾತಕಗಳು ಮುಂತಾದುವುಗಳೆಲ್ಲಾ ಪರ್ವತರೂಪವಾಗಿ ಅವನ ಎದೆಯಮೇಲೆ ಕುಳಿತಂತೆ ಭಾಸವಾದುವು. ವ್ಯಾಧನು, ಆ ಪಾಪಭಾರವನ್ನೆಲ್ಲವನ್ನು ತೊಲಗಿಸಲು ಸರ್ವೋತ್ತಮ ಸಾಧನವು ಶ್ರೀರಾಮನಾಮ ಜಪವೊಂದೇ ಎಂಬ ತತ್ವವನ್ನು ಹೃತ್ಪೂರ್ವಕವಾಗಿ ನಂಬಿ, ಸದಾ ಅದರ ಜಪದಲ್ಲೇ,-ಶ್ರೀರಾಮನಾಮಧ್ಯಾನದಲ್ಲೇ ನಿರತನಾಗಿದ್ದುಬಿಟ್ಟನು. ಆತನಿದ್ದ ಆ ಸ್ಥಳವು ತೀರ್ಥಯಾತ್ರಾರ್ಥಿಗಳಾದ ಸಾಧು ಸತ್ಪುರುಷರು ಸಂಚರಿಸುತ್ತಿದ್ದ ಮಾರ್ಗವಾದುದರಿಂದ ಅಲ್ಲೆಲ್ಲಾ ಮಾರ್ಗದಲ್ಲಿ ಸಾಲುಮರಗಳನ್ನೂ ಫಲವೃಕ್ಷಗಳ ತೋಪುಗಳನ್ನೂ, ಅರವಟ್ಟಿಗೆಗಳನ್ನೂ ನಿರ್ಮಿಸಿ, ಪಾಂಥರನ್ನು ಮೃದುವಾಕ್ಯಗಳಿಂದ ಆದರಿಸಿ, ನೆಳಲಲ್ಲಿ ಕುಳ್ಳಿರಲಿತ್ತು ಕಂದಮೂಲ ಫಲಾದಿಗಳನ್ನು ಒದಗಿಸಿ ಉಪಚರಿಸಿ ಕಳುಹಿಸುತ್ತಾ, ಸದಾ ರಾಮರಾಮರಾಮ ಎಂಬದಾಗಿ, ಆ ಪಾವನನಾಮ ಜಪದಲ್ಲೇ ಮಗ್ನನಾಗಿದ್ದನು. ಹೀಗೆ ತನ್ನ ಶೇಷಾಯುಸ್ಸನ್ನು ಕಳೆದು ಆ ವ್ಯಾಧನು, ರಾಮನಾಮ ಸ್ಮರಣೆಯಿಂದಲೇ ತನ್ನಾಕಳೇಬರವನ್ನೂ ನೀಗಿದನು.

ಮುಂದೆ ಕೆಲವು ಕಾಲದಮೇಲೆ, ಆ ವ್ಯಾಧನು ನಿರ್ಮಿಸಿದ್ದ ಸರೋವರದ ಬಳಿಯ ತೋಪು ಒಂದು ತಪೋವನವಾಗಿ ಮಾರ್ಪಟ್ಟಿತು. ಅಲ್ಲಿ ಕೃಣು ಎಂಬೊಬ್ಬ ಬ್ರಾಹ್ಮಣೋತ್ತಮನು ತಪಸ್ಸು ಮಾಡಲು ನಿಶ್ಚಯಿಸಿ, ಬಂದು ನೆಲೆಸಿದ್ದನು. ಸಂಯಮಿಗಳಲ್ಲಿ ಶ್ರೇಷ್ಠನೂ, ದೃಢಚಿತ್ತನೂ ಆದ ಆ ಕೃಣುವಿಪ್ರನು ತಪಸ್ಸಿಗಾಗಿ ಏಕಾಗ್ರಚಿತ್ತವೃತ್ತಿಯಿಂದ, ಕುಳಿತ

ಮೇಲಕ್ಕೇಳದೆ ಬಹುಕಾಲದವರೆಗೆ ಹಾಗೆಯೇ ಇದ್ದುಬಿಟ್ಟನು. ಆತನ ದೇಹದಮೇಲೆ ಹುತ್ತವು ಬೆಳೆದುಹೋಯಿತು. ಸಂಸ್ಕೃತ ಭಾಷೆಯಲ್ಲಿ ಹುತ್ತಕ್ಕೆ ವಲ್ಮೀಕವೆಂಬ ಹೆಸರುಂಟು. ಮಾರ್ಗದಲ್ಲಿ ತಿರುಗುವ ಜನರು, ಕಾಲಕ್ರಮದಲ್ಲಿ ಅಲ್ಲಿ ಒಬ್ಬ ಮನುಷ್ಯನು ಕುಳಿತಿದ್ದನೆಂಬುದನ್ನೇ ಮರೆತು ಅಲ್ಲಿದ್ದ ಹುತ್ತವನ್ನು 'ವಲ್ಮೀಕ' ಎಂದೇ ಸಹಜನಾಮದಿಂದ ಕರೆಯಲಾರಂಭಿಸಿದರು. ಮುಂದೆ ಬಹುಕಾಲಗಳಾದಮೇಲೆ ಆತನಿಗೆ ಬಾಹ್ಯಜ್ಞಾನವುಂಟಾಯಿತು. ಆ ವೇಳೆಗೆ ಸರಿಯಾಗಿ ಹಲವು ಮಂದಿ ನಾಗಕನ್ನಿಕೆಯರು ಆತನಿಗೆ ದೃಷ್ಟಿಗೋಚರರಾದರು. ಅವರ ದರ್ಶನದಿಂದ ಆತನಿಗೆ ವೀರ್ಯಸ್ಖಲನವಾಗಲು ಅದನ್ನು ಅಲ್ಲೇ ಇದ್ದ ಒಂದು ಸರ್ಪವು ನುಂಗಿತು. ಮಹಾತೇಜೋವಂತವಾದ ಆ ವೀರ್ಯವನ್ನು ಗರ್ಭದಲ್ಲಿ ಧರಿಸಿದ ಆ ಸರ್ಪವು (ಸರ್ಪರೂಪಿ ನಾಗಸ್ತ್ರೀಯು) ಯುಕ್ತಕಾಲದಲ್ಲಿ ಒಂದು ಪುರುಷ ಶಿಶುವನ್ನು ಪ್ರಸವಿಸಿತು. ಆ ಶಿಶುವನ್ನು ಆ ಹುತ್ತದಲ್ಲಿದ್ದ ನಾಗಸ್ತ್ರೀಯರೇ ಪೋಷಿಸಿ ಪ್ರಬುದ್ಧನನ್ನಾಗಿ ಮಾಡಿದರು. ಮುಂದೆ ಕೆಲವು ಕಾಲವಾಗಲು ಒಂದು ದಿನ ಕುಂಭದ್ರೋಣವಾಗಿ ಮಳೆಸುರಿದು, ಮೇಲೆ ಆಚ್ಛಾದಿತವಾಗಿದ್ದ ಹುತ್ತವು ಕರಗಿಹೋಗಲು, ಒಳಗಿದ್ದ ಋಷಿಕುಮಾರನು ಸರ್ವರಿಗೂ ದೃಷ್ಟಿಗೋಚರನಾದನು. ಆತನು ವಾಲ್ಮೀಕ ಋಷಿಯ ಮಗನೂ, ವಲ್ಮೀಕ (ಹುತ್ತ) ದಿಂದ ಹುಟ್ಟಿ ಬಂದವನೂ ಆದುದರಿಂದ ಆತನನ್ನು ವಾಲ್ಮೀಕಿಯೆಂದೂ, ಪ್ರಚೇತ (ವರುಣ) ನಿಂದ ಹುತ್ತದ ಆಚ್ಛಾದನೆಯು ಹೋಗಿ ಲೋಕಕ್ಕೆ ಪ್ರಕಟನಾದುದರಿಂದ ಪ್ರಾಚೇತಸನೆಂದೂ ಪ್ರಾಜ್ಞರು ಕರೆದರು. ಆತನೇ ಮುಂದೆ ಶಮದಮಾದಿ ಗುಣಸಂಪನ್ನನಾಗಿ ಮಹಾ ತಪಸ್ವಿಯಾಗಿ ನಾರದರಿಂದ ಉಪದೇಶವನ್ನು ಪಡೆದು ಶ್ರೀ ರಾಮಾಯಣ ಗ್ರಂಥವನ್ನು ಬರೆದು ಲೋಕಪ್ರಸಿದ್ಧನಾದ ವಾಲ್ಮೀಕಿ ಮಹರ್ಷಿಯು. ಇಂತಿದು ಸ್ಕಾಂದ ಪುರಾಣೋಕ್ತವಾದ ವಾಲ್ಮೀಕಿ ಮಹರ್ಷಿಗಳ ಜನ್ಮಾಂತರೀಯ ಕಥಾವಿಸ್ತಾರವು.

**ಅಧ್ಯಾಯ ೪** **"ವಲ್ಮೀಕೋದ್ಭವ"**

'ಮನುಷ್ಯನಿಗೆ ಪ್ರಾಪ್ತವಾಗುವ ಸದ್ಗತಿಗಳಿಗೂ, ಬಂಧನ ಮೋಕ್ಷಗಳಿಗೂ ಅವನು ಜನ್ಮವೆತ್ತುವ ವರ್ಣ ಅಥವ ಜಾತಿಯು ಒಂದು ಮುಖ್ಯ ಕಾರಣವಾಗಿ ಪರಿಣಮಿಸುವುದು. ಯಾವನಾಗಲೀ ಉತ್ತಮ ವರ್ಣದ ಮಾತಾಪಿತೃಗಳಿಂದ ಜನ್ಮಿಸಿದಲ್ಲದೆ ಅವನಿಗೆ ಸದ್ಗತಿಯ ಮಾರ್ಗವು ಗೋಚರವಾಗಲಾರದು' ಎಂಬ ಒಂದು ವಿಚಾರವು ಅನೇಕರ ಮನಸ್ಸಿಗೆ ಒಂದು ಬಗೆಯ ಕಳವಳವನ್ನುಂಟುಮಾಡುತ್ತಿದೆ. - 'ಇದೇನ, ಭಗವಂತನ ರಾಜ್ಯದಲ್ಲೂ ಈ ಜಾತಿಮತಗಳ ಗೊಂದಲವುಂಟೆ? ಬ್ರಹ್ಮಾನಂದ ಇಂತಹ ವರ್ಣಸ್ಥರಿಗೆ ಮಾತ್ರ ಪ್ರವೇಶವುಂಟು, ಮಿಕ್ಕವರು ದೂರದಲ್ಲಿರಬೇಕು ಎಂಬ ನಿರ್ಬಂಧವುಂಟೆ? ಇದು ನ್ಯಾಯವೇ?' ಎಂಬ ಪ್ರಶ್ನೆಗಳು ಹುಟ್ಟುತ್ತವೆ! ಹಾಗೆ ಹೇಳುವವರು ಒಂದುವೇಳೆ ಬ್ರಾಹ್ಮಣರಾದರಂತು, ಸ್ವಾರ್ಥಪರತೆ, ಸ್ವಯಂ ಪ್ರತಿಷ್ಠಾಭಾವನೆ ಮುಂತಾದ ಆರೋಪಗಳು ಅವರ ತಲೆಯಮೇಲೆ ಹೊರಿಸಲ್ಪಡುವುದು ತಪ್ಪದು! ಆದುದರಿಂದ ಮನುಷ್ಯನ ಮೋಕ್ಷಮಾರ್ಗ ಗಮನದಲ್ಲಿ ಅವನ ಜನ್ಮಸ್ಥಳವು-ಅರ್ಥಾತ್ ಒಬ್ಬನು ಉತ್ಪನ್ನನಾಗುವ ಕ್ಷೇತ್ರವು, ಎಷ್ಟುಮಟ್ಟಿನ ಸಹಾಯವನ್ನೊದಗಿಸಬಹುದು; ಅಥವ ಎಷ್ಟುಮಟ್ಟಿಗೆ ಪ್ರತಿಬಂಧಕವಾಗಬಹುದು ಎಂಬುದನ್ನು ಕುರಿತು, ಸ್ವಲ್ಪ ವಿಚಾರಮಾಡಬೇಕಾಗುತ್ತದೆ.

ಶ್ರೀಕೃಷ್ಣಪರಮಾತ್ಮನು ಲೋಕಪೂಜ್ಯವಾದ ಭಗವದ್ಗೀತೆಯಲ್ಲಿ—'*ಗುಣಗಳ ಮತ್ತು ಕರ್ಮಗಳ ವಿಭಾಗದಿಂದ ಬ್ರಹ್ಮ ಕ್ಷತ್ರಿಯ ವೈಶ್ಯ ಶೂದ್ರ ಎಂಬ ನಾಲ್ಕು ವರ್ಣಗಳು ನನ್ನಿಂದ ಸೃಷ್ಟಿಸಲ್ಪಟ್ಟಿವೆ........' ಎಂದು ಅಪ್ಪಣೆ ಕೊಡಿಸಿದ್ದಾನೆ ಇಲ್ಲಿ ಗುಣ ಮತ್ತು ಕರ್ಮಗಳೆಂಬ ಪದಗಳಿಗೆ ಶಾಸ್ತ್ರಸಮ್ಮತವಾದ ಅರ್ಥಗಳನ್ನೇ ಮಾಡಬೇಕಾಗುತ್ತದೆಯಲ್ಲದೆ ಲೌಕಿಕವಾದ ಅರ್ಥವನ್ನು ಮಾಡಬಾರದು. ಸತ್ವ ರಜ ತಮ ಎಂಬ ಮೂರು ಗುಣಗಳು, ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರ ಎಂಬೀ ನಾಲ್ಕು ವರ್ಣಗಳಲ್ಲಿ ಹಂಚಿಡಲ್ಪಟ್ಟಿವೆ,- ಈ ಮೂರು ಗುಣಗಳಲ್ಲಿ ಸತ್ವಗುಣವು ಹೆಚ್ಚಾಗಿದ್ದು ಅದರ ಫಲವಾಗಿ ಇಂದ್ರಿಯನಿಗ್ರಹ, ಬ್ರಹ್ಮಚರ್ಯರಕ್ಷಣೆ, ತಪಸ್ಸು,

* ಚಾತುರ್ವರ್ಣ್ಯಂ ಮಯಾಸೃಷ್ಟಂ ಗುಣಕರ್ಮ ವಿಭಾಗಶಃ ೪. ೧೩.

ದೇವತಾರಾಧನೆ, ಸದ್ವಿದ್ಯಾಭ್ಯಾಸ ಮುಂತಾದ ಕರ್ಮಗಳಲ್ಲಿ ಸದಾ ನಿರತ ನಾಗಿರಬೇಕಾದುದು ಬ್ರಾಹ್ಮಣವರ್ಣದ ಕರ್ತವ್ಯ. ಸತ್ವಗುಣಾಂಶವು ಲೇಶ ಮಾತ್ರ ಕಡಮೆಯಿದ್ದು ರಜೋಗುಣಾಂಶವು ಹೆಚ್ಚಾಗಿದ್ದು, ಅದರ ಫಲ ವಾಗಿ ಶೌರ್ಯ ದರ್ಪ ಮುಂತಾದುವುಗಳನ್ನು ಪ್ರಕಟಿಸಿ, ಕಾಮಕ್ರೋಧಾದಿಗಳ ಹೊಯ್ಲಿಗೆ ಬಿದ್ದು ದಂಡಯಾತ್ರೆ, ರಾಜ್ಯಾಧಿಪತ್ಯ ಮುಂತಾದ ಕಾರ್ಯಗಳನ್ನು ವಹಿಸಬೇಕಾದುದು ಕ್ಷತ್ರಿಯ ವರ್ಣದ ಕರ್ತವ್ಯ. ಸತ್ವ ಗುಣಾಂಶವು ಅಲ್ಪವಾಗಿಯೂ, ರಜೋಗುಣಾಂಶವು ಅಧಿಕವಾಗಿಯೂ ತಮೋ ಗುಣಾಂಶವು ಸತ್ವಾಂಶಕ್ಕಿಂತಲೂ ಅಧಿಕವಾಗಿಯೂ ಇದ್ದು ಭೂವ್ಯವಸಾಯ ವಾಣಿಜ್ಯ, ಪಶುಪಾಲನೆ ಮುಂತಾದ ವೃತ್ತಿಗಳನ್ನವಲಂಬಿಸುವುದು ವೈಶ್ಯ ವರ್ಣದ ಕರ್ತವ್ಯ; ಸತ್ವಗುಣಾಂಶವು ಅತ್ಯಲ್ಪವಾಗಿಯೂ ರಜೋಗು ಣಾಂಶವು ಅಲ್ಪವಾಗಿಯೂ ತಮೋಗುಣಾಂಶವು ಅಧಿಕವಾಗಿಯೂ ಇದ್ದು ಸೇವಾಕಾರ್ಯಾದಿಗಳಲ್ಲಿ ತೊಡಗುವುದ. ಶೂದ್ರವರ್ಣದ ಕರ್ತವ್ಯವು. *ಹೀಗೆ ಈ ನಾಲ್ಕು ವರ್ಣಗಳೂ ಸತ್ವರಜಸ್ತಮೋಗುಣಾದಿಗಳ ಪ್ರಮಾಣವನ್ನ ನುಸರಿಸಿ ಏರ್ಪಟ್ಟವಾಗಿವೆಯಲ್ಲದೆ, ಪಕ್ಷಪಾತದಿಂದ ಒಬ್ಬನನ್ನು ಮೇಲೂ ಮತ್ತೊಬ್ಬನನ್ನು ಕೆಳಗೂ ಇರಿಸಬೇಕೆಂಬ ಕುತಂತ್ರದಿಂದ ಏರ್ಪಡಿಸಿಟ್ಟ ಮಾರ್ಗಗಳಲ್ಲವೆಂದು ತಿಳಿಯಬೇಕು. ಈ ವ್ಯವಸ್ಥೆಯನ್ನನುಸರಿಸಿ ಒಬ್ಬ ನು ಉತ್ತಮ ವರ್ಣದಲ್ಲಿ ಜನ್ಮವೆತ್ತಬೇಕೆಂದರೆ ಉತ್ತಮ ಗುಣಗಳನ್ನು ಅಭ್ಯಸಿಸಿ ಸಾತ್ವಿಕಗುಣವನ್ನು ತನ್ನಲ್ಲಿ ಅಭಿವೃದ್ಧಿಪಡಿಸಿಕೊಂಡರೆ ಮಾ ತ್ರವೇ ಅದು ಸಾಧ್ಯವಾದೀತಲ್ಲದೆ, ರಾಗ ದ್ವೇಷಾದಿಗಳ ವಶವಾಗಿ, ಕ್ರೋಧ ಮೋಹಗಳನ್ನು ಬೆಳೆಸಿಕೊಂಡರೆ ಅದು ಎಂದಿಗೂ ಸಾಧ್ಯವಾಗಲಾರದು,— ಅಷ್ಟೇ ಅಲ್ಲ, ಮತ್ತೊಬ್ಬನನ್ನು ದ್ವೇಷಿಸಿ, ತಾನು ಉತ್ತಮ ವರ್ಣಕ್ಕೇರು ವೆನೆಂದು ಬಯಸುವವನು, ತನ್ನಲ್ಲಿರುವ ಗುಣಗಳ ದೃಷ್ಟಿಯಿಂದಲಂತೂ ಇನ್ನೂ ಅಧೋಗತಿಗೇ ಹೋಗುವನೆಂಬುದರಲ್ಲಿ ಸಂಶಯವಿಲ್ಲ ಹೀಗೆ ಸತ್ವರಜಸ್ತಮೋಗುಣಾದಿಗಳ ಉತ್ಕರ್ಷ ಅಪಕರ್ಷಾದಿಗಳನ್ನನುಸರಿಸಿ ವರ್ಣವ್ಯವಸ್ಥೆಯಾಗತಕ್ಕುದೇ ಸ್ವಾಭಾವಿಕವಾದಮೇಲೆ, ಅದರಂತೆಯೇ

---

* ಈ ವರ್ಣವಿಭಾಗವನ್ನನುಸರಿಸಿ ಏರ್ಪಟ್ಟ ಕರ್ತವ್ಯಗಳನ್ನು ಕುರಿತು ಹೆಚ್ಚು ವಿಚಾರ ಗಳನ್ನು ಗ್ರಂಥಮಾಲೆಯ ೮೭, ೮೮ ನೆಯ ಕುಸುಮಗಳಲ್ಲಿ ಓದಬಹುದು. ಸಂ.

ನಾವು ಇಂದು ನಮ್ಮ ಗುಣಗಳನ್ನು ಬದಲಾಯಿಸಿಕೊಂಡು ಸಾತ್ವಿಕಗುಣ ಸಂಪನ್ನರಾದರೆ ಸಾಲದೆ; ಅಲ್ಲಿ ಜನ್ಮಕ್ಷೇತ್ರದ ಆಧಿಕ್ಯತೆಯೇನು? ದರಿದ್ರರಾಗಿ ಕ್ಷುದ್ರಸ್ಥಿತಿಯಲ್ಲಿದ್ದರೂ ಉನ್ನತವರ್ಣಸ್ಥಮಾತಾಪಿತೃಗಳಿಂದ ಜನ್ಮವೆತ್ತಿದವನು ಮಾತ್ರವೇ ಶ್ರೇಷ್ಠನೋ; ಕನಿಷ್ಠವರ್ಣಸ್ಥಮಾತಾಪಿತೃಗಳಿಂದ ಜನ್ಮವೆತ್ತಿದವನು, ಸ್ನಾನ ಜಪತಪಗಳನ್ನಿಟ್ಟುಕೊಂಡು ಗ್ರಂಥವ್ಯಾಸಂಗ, ಸತ್ಸೇವೆ, ಸದಭ್ಯಾಸ ಮುಂತಾದುವುಗಳನ್ನು ಮಾಡುತಿದ್ದರೆ ಅವನು ಶ್ರೇಷ್ಠನೆನ್ನಿಸಲಾರನೋ, ಎಂದು ಮುಂತಾಗಿ ಯಾರು ಬೇಕಾದರೂ ಆಕ್ಷೇಪಿಸಬಹುದು. ವಿಚಾರಶಕ್ತಿಯು ಉದಯವಾಗಿ, ಪ್ರಗತಿಪರವಾಗಿ ಸಾಗುತ್ತಿರುವ ಸದ್ಯಃ ವ್ಯವಹಾರ ಪ್ರಪಂಚದಲ್ಲಿ ಈ ಬಗೆಯ ಸಕಲ ವಿಚಾರಗಳೂ ಚರ್ಚಿಸಲ್ಪಟ್ಟು ನಿರ್ಧಾರವಾಗತಕ್ಕುದು ಅತ್ಯಾವಶ್ಯಕವಾಗಿದೆ. ಬಾಳೆಯಹಣ್ಣು ಮಾವಿನಹಣ್ಣು ಹಲಸಿನಹಣ್ಣು ಮುಂತಾದುವೆಲ್ಲವೂ ಉತ್ತಮವೇ ಎನ್ನುವುದರಲ್ಲಿ ಸಂಶಯವುಂಟೆ! ಅವುಗಳಲ್ಲಿ ಬಾಳೆಯಹಣ್ಣು, ಉತ್ತಮವಾದ ಕ್ಷೇತ್ರದಲ್ಲಿ ಹೆಚ್ಚು ಗೊಬ್ಬರ ನೀರುಗಳನ್ನು ಪಡೆದು ಅತಿಶಯ ಫಲವತ್ತಾಗಿ ಬೆಳೆದಿರುವುದೆಂದು ಭಾವಿಸೋಣ! ಮಾವಿನಹಣ್ಣು ಅಷ್ಟು ಪ್ರಾಕೃತಿಕ ಸಂಪತ್ತನ್ನು ಪಡೆಯದೆ ಸಾಮಾನ್ಯಸ್ಥಿತಿಯಲ್ಲಿದ್ದೀತೆನ್ನೋಣ. ಆದರೆ, ಉತ್ತಮವಾಗಿ ದಪ್ಪವಾಗಿದ್ದ ಬಾಳೆಯಹಣ್ಣು ಹೇಗಿದ್ದರೂ ಬಾಳೆಯಹಣ್ಣೇ ಹೊರತು, ಮಾವಿನಹಣ್ಣು ಬೇರೆ ಆಗಲಾರದಷ್ಟೆ! ಅದು ಎಂತಹ ಉತ್ತಮಸ್ಥಿತಿಯಲ್ಲಿದ್ದರೂ ಬಾಳೆಯಹಣ್ಣೇ, ಇದು ಎಂತಹ ಹೀನಸ್ಥಿತಿಯಲ್ಲಿದ್ದರೂ ಮಾವಿನಹಣ್ಣೇ! ಅವವುಗಳ ಜನ್ಮತಃ ಪ್ರಾಪ್ತವಾದ ಅವುಗಳ ಸ್ವಾಭಾವಿಕ ಗುಣಗಳೂ, ಅವುಗಳಿಂದ ಪ್ರಾಪ್ತವಾಗುವ ಫಲಗಳೂ ವ್ಯತ್ಯಾಸವಾಗಲಾರವು. ಹಾಗೆಯೇ ಎತ್ತು ಎಷ್ಟು ಪುಷ್ಟವಾದರೂ, ಕುದುರೆ ಎನಿಸಲಾರದು. ಕುದುರೆಯು ಆನೆಯಾಗಲಾರದು. ಎಲ್ಲವೂ ಪಶು ಎಂಬ ಒಂದೇ ವರ್ಗಕ್ಕೇ ಸೇರಿದುವಾದರೂ, ಒಂದಕ್ಕೊಂದಕ್ಕೆ ನೈಸರ್ಗಿಕವಾದ ವ್ಯತ್ಯಾಸವು ಭಗವಾನನಿಂದ ಏರ್ಪಡಿಸಲ್ಪಟ್ಟಿದೆ. ಅದನ್ನು ಬಿಟ್ಟು ಇನ್ನೂ ಸ್ವಲ್ಪ ಸಮೀಪಕ್ಕೆ ಬರೋಣ! ಪರದೇಶದ ಒಂದು ಹಸುವಿನ ತಳಿಯನ್ನು ನಮ್ಮ ದೇಶದ ಹಸುವಿನ ತಳಿಯನ್ನಾಗಿ ರೂಪಿಸಬೇಕೆಂದರೆ, ಜನ್ಮವ್ಯತ್ಯಾಸಗೊಳಿಸದಿದ್ದರೆ ಸಾಧ್ಯವುಂಟೆ! ಪರದೇಶದ ಹಸುವಿನಮೇಲೆ ನಮ್ಮ ದೇಶದ ಹೋರಿಯನ್ನು

ಬಿಟ್ಟು, ಅದರಿಂದ ಉಂಟಾದ ಸಂತಾನದಮೇಲೆ ಪುನಃ ಈ ದೇಶದ ಹೋರಿ ಯನ್ನೇ ಬಿಟ್ಟು, ಹೀಗೆ ನಾಲ್ಕಾರು ತಲಾಂತರಗಳು ಕಳೆದರೂ, ಇನ್ನೂ ಅಲ್ಲಿಯ ಕೆಲವಂಶಗಳ ಚಿನ್ಹೆಗಳು ಆ ಸಂತಾನದಲ್ಲಿ ಇದ್ದೇ ಇರುವುದು ತಪ್ಪದು. ಇದನ್ನು ಕೇವಲ ಉದಾಹರಣೆಯೆಂದು ಭಾವಿಸಬೇಕಲ್ಲದೆ ಸಾಮ್ಯನಿರೂಪಣೆಯೆಂದು ದಯವಿಟ್ಟು ಯಾರೂ ಭಾವಿಸಲಾಗದು. ಜನ್ಮ ಅರ್ಥಾತ್ ಒಂದು ಕ್ಷೇತ್ರದಲ್ಲಿ ಜನ್ಮಿಸುವುದರಿಂದ ಎಂದರೆ ಒಂದು ವ್ಯಕ್ತಿ ಯು ಗರ್ಭವಾಸಮಾಡುವುದರಿಂದ ಒಂದು ಚೇತನದಮೇಲೆ ಉಂಟಾಗುವ ಪರಿಣಾಮವೂ, ಆ ವ್ಯಕ್ತಿಯು ದೇಹರಕ್ತದ ಕಣಗಳಿಂದ ರೂಪಿಸಲ್ಪಡುವ ದೇಹಮನೋಬುದ್ಧಿಗಳಿಂದಲೂ, ಜನ್ಮವಾದಮೇಲೆ ಆ ಕುಟುಂಬದ ನಿಕಟ ಸಂಬಂಧ, ಅಲ್ಲಿಯ ವಾತಾವರಣ ಮುಂತಾದುವುಗಳಿಂದಲೂ ಒಬ್ಬ ವ್ಯಕ್ತಿಯ ಮನಸ್ಸಿನಮೇಲೆ ಆಗುವ ಪರಿಣಾಮ ಮುಂತಾದುವುಗಳೆಲ್ಲವೂ ಒಂದು ಕ್ಷೇತ್ರವನ್ನನುಸರಿಸಿಕೊಂಡು ಉಂಟಾಗುವ ಪ್ರಯೋಜನಗಳಾಗಿ ಪರಿಣ ಮಿಸುತ್ತವೆ. ವರ್ಣಾಂತರದಲ್ಲಿ ಹುಟ್ಟಿದ ಒಬ್ಬನು ಇಹಜನ್ಮದಲ್ಲಿ ಮಾಡಿ ಕೊಳ್ಳುವ ಸದ್ವ್ಯಾಸಂಗ, ಸತ್ಸಹವಾಸ ಮುಂತಾದ ಸಾಧನಗಳೆಲ್ಲವೂ, ಅವ ನಿಗೆ ಮುಂದಿನ ಜನ್ಮಕ್ಕೆ ಉತ್ತಮ ಕ್ಷೇತ್ರ, ಉತ್ತಮ ವಾತಾವರಣ, ಉತ್ತ ಮ ಪರಿಸ್ಥಿತಿಗಳು ಮುಂತಾದುವುಗಳನ್ನು ಸಂಪಾದಿಸಿಕೊಡಲು ಯೋಗ್ಯ ಸಾಮಗ್ರಿಗಳಾಗಿ, ಅವನು—'ನಹಿ ಕಲ್ಯಾಣಕೃತ್ಕಶ್ಚಿದ್ದುರ್ಗತಿಂ ತಾತ ಗಚ್ಛತಿ' - ಎಂಬೀ ಭಗವದ್ವಾಕ್ಯದಂತೆ ಎಂದಿಗೂ ದುರ್ಗತಿಯನ್ನು ಹೊಂ ದದೆ- 'ಶುಚೀನಾಂ ಶ್ರೀಮತಾಂ ಗೇಹೇ ಯೋಗಭ್ರಷ್ಟೋಽಭಿಜಾಯತೇ!' ಎಂದರೆ, ಧರ್ಮ ಶ್ರದ್ಧೆಯುಳ್ಳಸಂಭಾವರ, ಭಾಗ್ಯವಂತರ ಮನೆಯಲ್ಲಿ ಅವನು ಜನ್ಮಹೊಂದುತ್ತಾನೆ. ಅಂತಹ ಶ್ರದ್ಧಾವಂತರ, ಶುಚಿವಂತರ, ಯೋಗಿಗಳ ಕುಲದಲ್ಲಿ ಜನ್ಮಸಿಕ್ಕುವುದು ದುರ್ಲಭ' ಹೀಗೆಂದು ಶ್ರೀ ಕೃಷ್ಣಪರಮಾತ್ಮನು ಅಪ್ಪಣೆ ಕೊಡಿಸಿದ್ದಾನೆ

ನಾಲ್ಕು ವರ್ಣಗಳೂ, ಸ್ವಾಭಾವಿಕವಾಗಿ ತಮಗೆ ಏರ್ಪಟ್ಟ ಮೇಲ್ಕಂ ಡ ಗುಣಧರ್ಮಗಳನ್ನು ಶತಾಂಶ ಪರಿಪಾಲಿಸಿಕೊಂಡಿದ್ದಾಗ ಮಾತ್ರವೇ, ಉತ್ತಮಕ್ಷೇತ್ರ ನೀಚಕ್ಷೇತ್ರಗಳನ್ನು ಕುರಿತು ಹೇಳಿದ ಮೇಲಿನ ವಿವರಣೆಗೆ ಅರ್ಥವಿರುವುದಲ್ಲದೆ, ಈಗಿನಂತೆ ಅಧಃ ಪತಿತವಾಗಿರುವ ಸಮಾಜದ ಸ್ಥಿತಿಯ

ಲ್ಲಿ ಈ ವಿವರಣೆಯು ಕೇವಲ ಹಾಸ್ಯಾಸ್ಪದವಾಗದಿರದು. ಪೂಜಾಸ್ಥಾನವು ಗುಣವೇ ಆದುದರಿಂದ ಯಾವನು ಸದ್ಗುಣಿಯೋ ಅವನ, ಯಾವ ಕ್ಷೇತ್ರೋತ್ಪನ್ನನಾಗಿದ್ದರೂ ಗೌರವಾರ್ಹನು, ಪೂಜಾರ್ಹನು. ಬ್ರಹ್ಮವಂಶೋತ್ಪನ್ನನೆಂದು ರಾವಣನು ಪೂಜಾರ್ಹನಾಗಲಿಲ್ಲ; ದಾಸೀಪುತ್ರನಾದರೂ, ವಿದುರನು ಗೌರವಾರ್ಹನಾಗದಿರಲಿಲ್ಲ- ಅಲ್ಲವೆ ? ಬೆಳ್ಳಿಯ ಹೂಜಿಯಲ್ಲಿ ತುಂಬಿಟ್ಟ ಮಾತ್ರಕ್ಕೆ ಮದ್ಯವು ಕ್ಷೀರವಾಗಲಾರದು, ಹಾಗೆಯೇ - ಮಣ್ಣಿನಪಾತ್ರೆಯಲ್ಲಿ ದೆಯೆಂಬ ಕಾರಣದಿಂದ ಕ್ಷೀರಕ್ಕೆ ಇರುವ ಗೌರವಕ್ಕೆ ಲೋಪವೂ ಬರಲಾರದು. ಸುಕೃತ ವಿಶೇಷದಿಂದ ನಮ್ಮ ಕಥಾನಾಯಕನಂತೆ ಉತ್ತಮ ಪರಿಸ್ಥಿತಿಯಲ್ಲಿ ಜನ್ಮವೆತ್ತಿದವನು, ದುಸ್ಸಾಂಗತ್ಯದಿಂದ ದುಷ್ಟನಾಗತಕ್ಕದೂ, ಹಾಗೆಯೇ ಕಾರಣಾಂತರವಾಗಿ, ಕನಕ ಕಬೀರ ಮುಂತಾದ ಉಜ್ವಲ ಸಾತ್ವಿಕ ತೇಜಸ್ಸಂಪನ್ನರು ನೀಚಪರಿಸ್ಥಿತಿಯಲ್ಲಿ ಜನ್ಮವೆತ್ತಿದರೂ ಉತ್ತಮರಾಗಿ ಪೂಜಾಯೋಗ್ಯರೆನ್ನಿಸುವದೂ ಲೋಕಚರಿತ್ರೆಯಲ್ಲಿ ಮೇಲೆಮೇಲೆ ದೃಷ್ಟಿಗೋಚರವಾಗುತ್ತಿದೆ. ಎಂತೂ, ಗರ್ಭವಾಸವೆಂಬ ಒಂದು ಅವಸ್ಥೆಯು ಚೇತನನ ಗುಣಕರ್ಮಗಳನ್ನು ರೂಪಿಸುವಲ್ಲಿ ಅತಿಶಯ ಭಾಗವನ್ನು ವಹಿಸುತ್ತದೆಂಬ ಸಂಗತಿಯು ನಿಸ್ಸಂಶಯವಾದುದು. ಒಬ್ಬನು ಈ ಜನ್ಮದಲ್ಲಿ ತನ್ನ ಆಶಯ ವಾಸನೆ ಭಾವನೆಗಳಿಂದ ಎಂತಹ ವಾತಾವರಣವನ್ನು ಕಲ್ಪಿಸಿಕೊಳ್ಳುವನೋ, ಅದನ್ನನುಸರಿಸಿದ ವಾತಾವರಣವೂ, ಅದಕ್ಕೆ ಯೋಗ್ಯವಾದ ಸನ್ನಿವೇಶಗಳೂ, ಅವನಿಗೆ ತಪ್ಪದೆ ಪ್ರಾಪ್ತವಾಗುವುವು. ಇದಂತಿರಲಿ-

ಶ್ರೀಮದಧ್ಯಾತ್ಮರಾಮಾಯಣದ ಅಯೋಧ್ಯಾಕಾಂಡದಲ್ಲಿ, ವಾಲ್ಮೀಕಿ ಮಹರ್ಷಿಗಳೇ ಶ್ರೀರಾಮನನ್ನು ಕುರಿತು ತಮ್ಮ ಪುರಾವೃತ್ತವನ್ನು ಹೇಳಿಕೊಂಡ ಒಂದು ಸಂದರ್ಭವಿದೆ. ಅದರಲ್ಲಿ ಅವರು,-'ಶ್ರೀರಾಮಾ, ನಿನ್ನ ನಾಮಮಹಿಮೆಯನ್ನು ನಾನು ಏನೆಂದು ವರ್ಣಿಸಲಿ ! ಆ ನಾಮಪ್ರಭಾವದಿಂದಲೇ ನಾನು ಬ್ರಹ್ಮರ್ಷಿತ್ವವನ್ನು ಹೊಂದಿದೆನು. ನಿನ್ನ ಪವಿತ್ರನಾಮಕೀರ್ತನೆ, ಪಾದಸ್ಮರಣೆ ಇವುಗಳ ಮಹಿಮೆಯಿಂದಲೇ ನನ್ನ ಹೃದಯಸ್ಥ ಸಮಸ್ತ ಕಲ್ಮಷಗಳೂ ನಿವಾರಣೆಯಾಗಿ ನಾನು ಶುದ್ಧನಾದೆನು. ದೇವಾ, ನಿನ್ನ ಮಹಿಮೆಯು ಅಗಾಧವಾದುದು' ಎಂದು ನುಡಿದು, ಸೀತಾಲಕ್ಷ್ಮಣಸಮೇತನಾದ ಶ್ರೀರಾಮನನ್ನು ಅನೇಕವಾಗಿ ಉಪಚರಿಸಿದ್ದಾರೆ. ಅವರು ಅಲ್ಲಿ ಹೇ

ಳಿರುವ ಕಥೆಯನ್ನೇ ಯುಕ್ತರೀತಿಯಿಂದ ಪುಷ್ಟೀಕರಿಸಿ ಇಲ್ಲಿ ಕೊಡುತ್ತೇವೆ.

ಯಮುನಾತೀರದಲ್ಲಿ ಒಂದಾನೊಂದು ಗ್ರಾಮ. ಅಲ್ಲಿ ಒಬ್ಬ ಬಡ ಬ್ರಾಹ್ಮಣನು ಸಾಧ್ವಿಯಾದ ತನ್ನ ಪತ್ನಿಯೊಂದಿಗೆ ವಾಸಮಾಡಿಕೊಂಡಿದ್ದನು. ಆತನು ವೇದಶಾಸ್ತ್ರಪಾರಂಗತನು. ಸದಾಚಾರಸಂಪನ್ನನು, ಸಾಧುಶೀಲನು, ಅತಿಥಿಅಭ್ಯಾಗತರ ಆದರಣೆಯಲ್ಲೂ, ಗುರುದೇವತಾರಾಧನೆಗಳಲ್ಲೂ ಅತ್ಯಂತನಿಷ್ಠೆಯುಳ್ಳವನು. ಆ ದಂಪತಿಗಳಿಗೆ ಬಹುಕಾಲ ಮಕ್ಕಳೇಯಿಲ್ಲದೆ, ಕೊನೆಗೆ ಯೌವನವು ಗಳಿತವಾಗುತ್ತಿದ್ದ ವಯಸ್ಸಿನಲ್ಲಿ ಒಂದು ಪುರುಷಶಿಶು ಜನಿಸಿತು. ಅದು ಇನ್ನೂ ಶೈಶವಾವಸ್ಥೆಯಲ್ಲಿದ್ದಾಗಲೇ, ಆ ಬಡ ಬ್ರಾಹ್ಮಣದಂಪತಿಗಳು ಮೃತ್ಯುವಶರಾಗಲು, ಶಿಶುವು ಪರದೇಶಿಯಾಯಿತು. ಮಾತಾಪಿತೃವಿಹೀನವಾಗಿ ಬರಿಮನೆಯಲ್ಲಿ ಒಂಟಿಯಾಗಿ ಮಲಗಿ ರೋದಿಸುತ್ತಿದ್ದ ಆ ಶಿಶುವಿನ ಆರ್ತಸ್ವರವು ಆ ಮಾರ್ಗವಾಗಿ ಹೋಗುತ್ತಿದ್ದ ಒಬ್ಬ ಕಿರಾತಸ್ತ್ರೀಯ ಗಮನವನ್ನೆಳೆಯಿತು. ಏಕಾಂಗಿಯಾಗಿ, ರಕ್ಷಕರಿಲ್ಲದೆ ರೋದಿಸುತ್ತಿದ್ದ ಆ ಎಳೆಯಮಗುವನ್ನು ಕಂಡು ಆಕೆಯ ಕರುಳು ಮರುಗಲು, ಅವಳು ಅದನ್ನೆತ್ತಿ ಎದೆಗಪ್ಪಿಕೊಂಡು, ಆದರಿಸಿ, ತನ್ನೊಂದಿಗೆ ಕರೆದೊಯ್ದು ತನ್ನ ಮಕ್ಕಳೊಂದಿಗೆ ಪೋಷಿಸಿಕೊಂಡಳು. ಮಗುವು ದಿನದಿನಕ್ಕೆ, ಆ ಕಿರಾತ ಬಾಲಕರೊಂದಿಗೆ ಆಟಪಾಟಗಳಲ್ಲಿ ಬೆರೆದು ನಕ್ಕು ನಲಿಯುತ್ತಾ ಅಭಿವೃದ್ಧಿಯಾಯಿತು. ಮಗುವಿನ ಆಟಪಾಟಗಳು ಆ ಕಿರಾತ ಪಂಗಡದ ಸ್ತ್ರೀ ಪುರುಷರಿಗೆಲ್ಲ ಅತ್ಯಂತ ವಿಸ್ಮಯವನ್ನುಂಟುಮಾಡುವುವು. ಸಮವಯಸ್ಸಿನ ಆ ಕಿರಾತಬಾಲಕರ ಗುಂಪಿನಲ್ಲಿ ಈ ಪರದೇಶಿ ಬಾಲಕನೇ ಮೂರ್ಧನ್ಯನಾಗಿ ಕಂಗೊಳಿಸುತ್ತಿದ್ದನು. ಪ್ರಸನ್ನಮುಖ, ವಿಶಾಲವಾದ ಸ್ವಚ್ಛನೇತ್ರಗಳು, ಆಜಾನುಬಾಹುಗಳು, ಶಂಖದಂತೆ ಗಂಭೀರವಾದ ಕಂಠಧ್ವನಿ, ಇವುಗಳಿಂದ ದೇವಕುಮಾರನಂತೆ ಒಪ್ಪುತ್ತಿದ್ದ ಆ ಬಾಲಕನನ್ನು ಆ ಗುಂಪಿನವರು, ತಮ್ಮ ಅಮೌಲ್ಯನಿಧಿಯೆಂದು ಭಾವಿಸಿ ಹೆಮ್ಮೆಪಡುತ್ತಿದ್ದರು. ಆ ಬಾಲಕನ ತೇಜಸ್ವಿತೆಯೂ, ಸೂಕ್ಷ್ಮಮತಿಯೂ ಎಲ್ಲರನ್ನೂ ಬೆರಗಾಗಿಸುವಂತಿರಲು, ಆ ಕಿರಾತಗುಂಪಿನ ಆಬಾಲವೃದ್ಧರೂ ಆ ಬಾಲಕನ ಇಷ್ಟಕ್ಕೆ ವಿರೋಧವಾಗಿ ನಡೆಯದೆ, ಆತನ ಮಾತಿಗೆ ಮಾರ್ನುಡಿಯದೆ, ಆಜ್ಞಾಧಾರಕರಾಗಿ ಗೌರವಿಸಿಕೊಂಡಿದ್ದರು. ಕಾಲಕ್ರಮದಲ್ಲಿ ಯೌವನಶಾಲಿಯಾದ, ಆ ಬಾ

ಲಕನು, ಆ ಗುಂಪಿಗೇ ಯಜಮಾನನಾಗಿ, ಅವರ ಹಾನಿವೃದ್ಧಿಗಳಿಗೆಲ್ಲ ಕಾರಣಕರ್ತನಾಗಿ, ಸಕಲರನ್ನೂ ದರ್ಪದಿಂದ ನಡೆಯಿಸಿಕೊಳ್ಳತೊಡಗಿದನು. ಪ್ರಾಯಸಮರ್ಥನಾದ ಅವನಿಗೆ ರೂಪವತಿಯರಾದ ಕಿರಾತಯುವತಿಯರೊಂದಿಗೆ ಪಾಣಿಗ್ರಹಣವೂ ಆಯಿತು. ಉತ್ತಮಕ್ಷೇತ್ರದಲ್ಲೇ ಜನ್ಮವನ್ನೆತ್ತಿದವನಾದರೂ, ದುಸ್ಸಾಂಗತ್ಯದಲ್ಲೂ ದುರಾಹಾರ ದುರಾಲಾಪಗಳಲ್ಲೂ ದಿನದ ಅರವತ್ತು ಘಳಿಗೆಯನ್ನೂ ಕಳೆಯುತ್ತಿದ್ದ ಆತನಲ್ಲಿ ದಂಭದರ್ಪಗಳೂ ಕಾಮ ಕ್ರೋಧ ಮದ ಮತ್ಸರ್ಯಾದಿಗಳೂ ಮನೆಮಾಡಿಕೊಂಡುವು. ಪ್ರಾಯಮದವು ಉಕ್ಕೇರುತ್ತಿದ್ದ ಆ ಕಾಲದಲ್ಲಿ ಆತನಿಗೆ ಉತ್ತಮ ಅಧಮ, ಯುಕ್ತ ಅಯುಕ್ತ, ನ್ಯಾಯ ಅನ್ಯಾಯ, ಸಾಧು ಅಸಾಧು ಎಂಬೀ ವಿಚಾರಗಳೇ ತಲೆಯನ್ನು ಹೊಗಲಿಲ್ಲ. ಕಿರಾತ ಕುಲಧರ್ಮವಾದ ಮದ್ಯ ಮಾಂಸಾದಿ ಸೇವನೆಗಳಿಂದ ಸದಾ ಮತ್ತನಾಗಿ ಇದ್ದುಬಿಟ್ಟನು. ಸಂತೃಪ್ತಿಯನ್ನೇ ಕಾಣದ ಕಾಮೋಪಭೋಗರತನಾಗಿ, ತನ್ನಾಪತ್ನಿಯರಲ್ಲಿ ಬೆರೆದು ಪಶುವೃತ್ತಿಯಿಂದ ವಿಹರಿಸುತ್ತಾ ಮುಂಗಾಣದೆ ಕಾಲಕಳೆಯತೊಡಗಿದನು. ತೀರ್ಥಯಾತ್ರೆಗಳಿಗಾಗಿ ಹೋಗುವ ಪಾಂಥರನ್ನು ಮಾರ್ಗದಲ್ಲಿ ತಡೆಗಟ್ಟಿ, ಅವರಬಳಿ ಇದ್ದುದುಬದ್ದುದನ್ನೆಲ್ಲ ಸುಲಿದುಕೊಳ್ಳುವುದೂ, ಅನೇಕ ವೇಳೆಗಳಲ್ಲಿ ನಿಷ್ಕಾರುಣ್ಯದಿಂದ ಅವರ ಶಿರಚ್ಛೇದನಮಾಡಿ ಪ್ರಾಣಕಳೆಯುವುದೂ, ತಮ್ಮ ಬಳಿಯಿದ್ದ ನಗನಾಣ್ಯಗಳನ್ನು ಒಡನೆ ಕೊಟ್ಟುಬಿಡದೆ ಮುಷ್ಕರಮಾಡುವಂಥವರನ್ನೂ, ಪ್ರತಿಭಟಿಸುವವರನ್ನೂ ಕೈಕಾಲುಗಳನ್ನು ಕತ್ತರಿಸಿ, ಕಣ್ಣುಗುಡ್ಡೆಗಳನ್ನು ಕಿತ್ತು, ನಾಲಿಗೆಯನ್ನು ಸೀಳಿ, ಬೆನ್ನ ಚರ್ಮವನ್ನು ಸುಲಿದು, ಹೀಗೆ ಚಿತ್ರಹಿಂಸೆಗೊಳಿಸಿ ಅವರಲ್ಲಿದ್ದ ದ್ರವ್ಯಾಪಹಾರಮಾಡುವುದೂ ಅವನ ನಿತ್ಯಕೃತ್ಯಗಳಾದುವು. ಆತನಿದ್ದ ಸ್ಥಳಕ್ಕೆ ಹತ್ತುಯೋಜನದ ಸುತ್ತಳತೆಯಲ್ಲಿ ಯಾರೊಬ್ಬರ ಜೀವವೂ ಧನಧಾನ್ಯಗಳೂ ಸುರಕ್ಷಿತವಾಗಿರದೆ, ಎಲ್ಲರೂ ಅವನ ಹೆಸರನ್ನು ಕೇಳಿದರೇ ನಡುಗುತ್ತಿರುವಂತಹ ಪರಿಸ್ಥಿತಿಯುಂಟಾಯಿತು. ಹೀಗೆ ಅವನು ಸಕಲರಿಗೂ ಮೃತ್ಯುಸ್ವರೂಪನಾಗಿ ಪರಿಣಮಿಸಿದನು.

ಹೀಗೆ ಕೆಲವುಕಾಲ ಕಳೆಯಿತು. ಆ ಕಿರಾತಾಧಿಪನು ದಂಗೆದರೋಡೆಗಳಲ್ಲಿ ನಿಸ್ಸೀಮನಾದನು. ಇತ್ತ ಮನೆಯಲ್ಲಿ ಮಕ್ಕಳುಮರಿಗಳ ಸಂಸಾರವೂ, ಬಂಧುವರ್ಗವೂ ಹೆಚ್ಚಾಗತೊಡಗಿತು. ಕುಟುಂಬರಕ್ಷಣೆಗಾಗಿ, ಈ

ಬಗೆಯ ದುಷ್ಕರ್ಮಗಳನ್ನು ನೆಲೆಯಿಲ್ಲದೆ ಮಾಡಿಮಾಡಿ ಅವರ ಪೋಷಣೆ ಗಾಗಿ ಧನಧಾನ್ಯಾದಿಗಳನ್ನು ಒದಗಿಸುವ ಕಾರ್ಯದಲ್ಲೇ ಸದಾ ನಿರತನಾ ಗಿದ್ದನು. ಅವನ ಬೇಟೆಯಲ್ಲಿ ಸತ್ತ ಮೃಗಪಕ್ಷಿಗಳಿಗೆ ಮಿತಿಯಿಲ್ಲ. ಅವನ ಹಾವಳಿಯಿಂದ ನಿರ್ಗತಿಕರಾಗಿ ಸಂಕಟಕ್ಕೀಡಾದ ಕುಟುಂಬಗಳಿಗೆ ಲೆಖ್ಖ ವಿಲ್ಲ. ಅವನಿಂದ ಚಿತ್ರಹಿಂಸೆಗೊಳಗಾಗಿ ತಮ್ಮ ಸರ್ವಸ್ವವನ್ನೂ ಕೊನೆಗೆ ಪ್ರಾಣವನ್ನೂ ನೀಗಿಕೊಂಡವರೆಷ್ಟೋ ಮಂದಿ. ಸಾಧುಸಜ್ಜನರ ಪಾಲಿಗೆ ಯಮನಂತಿದ್ದ ಅವನನ್ನು ಎಷ್ಟು ಮಂದಿ ಶಪಿಸಿದರೋ, ಎಷ್ಟು ಮಂದಿ ಸ್ತ್ರೀಯರು ಅವನು ನಾಶವಾಗಲೆಂದು ನೆಟ್ಟಿಗೆಗಳನ್ನು ಮುರಿದರೋ ಹೇಳು ವರಾರು! ಅವನ ಪಾಪಪಾತ್ರೆಯು ತುಂಬಿ ಉಕ್ಕಿತು; ಅವನ ಪಾಪಕಾರ್ಯ ಗಳಿಗೆ ಕೊನೆಮೊದಲಿಲ್ಲವಾಯಿತು.

ಹೀಗೆ ಹಲವು ಕಾಲಕಳೆದ ತರುವಾಯ ಒಂದುದಿನ, ಅವನು ಮಾರ್ಗ ಸ್ಥರಿಗಾಗಿ ಹಾದಿಕಟ್ಟಿ ಕುಳಿತಿರುವ ಸಮಯದಲ್ಲಿ ಆ ಮಾರ್ಗವಾಗಿ ಪ್ರಯಾ ಣಮಾಡಿಕೊಂಡು ಬರುತ್ತಿದ್ದ ಸಪ್ತರ್ಷಿಗಳು ಆತನ ದೃಷ್ಟಿಗೆ ಗೋಚರ ರಾದರು. ಆ ದಿನ ಎಷ್ಟು ಹೊತ್ತಾದರೂ, ಒಂದು ಮೃಗವೂ ಕಣ್ಣಿಗೆ ಬೀಳದೆ, ಧನಧಾನ್ಯಯುತನಾದ ಯಾವನೊಬ್ಬ ವ್ಯಕ್ತಿಯೂ ಲಭಿಸದೆ ಹಸಿವುಬಾಯಾರಿಕೆಗಳಿಂದ ಬಳಲಿ ಕುಳಿತಿದ್ದ ಅವನು, ಆ ಸಪ್ತರ್ಷಿಗಳನ್ನು ಕಂಡೊಡನೆಯೇ, ಹಸಿದ ಹುಲಿಯಂತೆ ಅವರಮೇಲೆ ಹಾರಿಬಿದ್ದು, ಅವರ ದಂಡ ಕಮಂಡಲು, ಜಪಸರ ಪಾದುಕೆ, ಕೃಷ್ಣಾಜಿನಾದಿ ಸಮಸ್ತ ಸಾಮಗ್ರಿ ಗಳನ್ನೂ ಕಸಿದುಕೊಳ್ಳಲುದ್ಯುಕ್ತನಾದನು. ಅವನ ದುರುದ್ದೇಶವನ್ನು ಕಂಡ ಆ ಸಾಧುವರೇಣ್ಯರು, ತಮ್ಮ ಜ್ಞಾನದೃಷ್ಟಿಯಿಂದ ಅವನ ಪೂರ್ವೋ ತ್ತರವನ್ನೆಲ್ಲ ಅರಿತವರಾಗಿ:— ' ಎಲೋ ದ್ವಿಜಾಧಮ, ಇದೇನು ನೀನು ಮಾಡತೊಡಗಿದ ಈ ಕಾರ್ಯವು? ಕೇವಲ ಮುನಿಗಳಿಗೆ ಮಾತ್ರವೇ ಉಪ ಯೋಗವಾಗುವ ಈ ವಸ್ತುಗಳಿಂದ ನಿನಗೇನು ಪ್ರಯೋಜನ? ಹೀಗೆ ಮಾ ರ್ಗಕಟ್ಟಿ ಕುಳಿತು ಪ್ರಯಾಣಿಕರನ್ನು ಹಿಂಸಿಸುವ ಪ್ರಯತ್ನದಲ್ಲಿ ಯಾವ ಉದ್ದೇಶದಿಂದ ತೊಡಗಿದ್ದೀಯೆ? " ಎಂದು ಪ್ರಶ್ನಿಸಿದರು. ಅವರ ಸೌಮ್ಯ ರೂಪವೂ ಮೃದುಭಾಷಣವೂ, ಆತನಲ್ಲಿ ಒಂದು ಬಗೆಯ ವ್ಯತ್ಯಾಸವನ್ನುಂ ಟುಮಾಡಲು, ಅವನು ತನ್ನ ದಾಂಡಿಗ ವೃತ್ತಿಯನ್ನು ಬಿಟ್ಟು ನಿಂತು ಅವ

ರನ್ನು ಕುರಿತು— 'ನನಗೆ ಹೆಂಡಿರೂ ಮಕ್ಕಳೂ ಬಹುಮಂದಿಯಿದ್ದಾರೆ. ಆ ದೊಡ್ಡ ಪರಿವಾರವನ್ನು ಸಂರಕ್ಷಣೆಮಾಡಲು, ನಾನು ನಿತ್ಯವೂ ಗಿರಿಕಾನನ ಗಳ ಈ ಪ್ರಾಂತದಲ್ಲಿ ಸಂಚಾರಮಾಡಿ, ನನ್ನ ಕುಲಧರ್ಮವಾದ ಈ ವೃತ್ತಿ ಯಿಂದ ದ್ರವ್ಯಸಂಪಾದನೆಮಾಡುತ್ತೇನೆ. ಹಾಗಲ್ಲದಿದ್ದರೆ ನಾನಿನ್ನೇನು ಮಾಡಲಿ?'' ಎಂದನು. ಆ ಮಹಾನುಭಾವರು ಆತನ ಸ್ಪಷ್ಟವಾಕ್ಯಗಳಿ ಗಾಗಿ ಕೌತುಕಪಟ್ಟು, ಗಹಗಹಿಸಿ ನಕ್ಕು,— 'ಅಯ್ಯಾ, ನೀನು ಹೀಗೆ ಮಿತಿ ಯಿಲ್ಲದೆ ಪ್ರಾಣಿಹಿಂಸೆಮಾಡಿ ಧನಧಾನ್ಯಾದಿಗಳನ್ನು ಸಂಗ್ರಹಿಸಿ ಅವರ ಪೋಷಣೆಗೆಂದು ಒದಗಿಸುತ್ತಿರುವೆಯಲ್ಲಾ, ಈ ನಿನ್ನ ವೃತ್ತಿಯಿಂದ ನಿನಗೆ ಪ್ರಾಪ್ತವಾಗುತ್ತಿರುವ ಅಗಾಧ ಪಾಪದಲ್ಲಿ, ನಿನ್ನ ಪತ್ನಿಯಾಗಲೀ, ಪುತ್ರ ರಾಗಲೀ ಅಥವ ಇತರ ಬಾಂಧವರು ಯಾರೇ ಆಗಲಿ ಏನಾದರೂ ಭಾಗ ವನ್ನು ವಹಿಸುತ್ತಾರೋ, ಅಥವ ಆ ಪಾಪಕ್ಕೆಲ್ಲ ನೀನೊಬ್ಬನೇ ಉತ್ತರ ವಾದಿಯಾಗಬೇಕೋ. ಇದನ್ನು ಕುರಿತು ಯೋಚಿಸಿರುವೆಯಾ?'' ಎಂದು ನುಡಿದರು.

ಅವನ ಜನ್ಮಾರಭ್ಯ ಈವರೆಗೂ, ಅವನೆದುರಿಗೆ ನಿಂತು ಅಷ್ಟು ಮಾತು ಗಳನ್ನಾಡಿದ್ದವರೇ ಇರಲಿಲ್ಲ. ಇನ್ನು ಪುಣ್ಯಪಾಪಗಳ ವಿಚಾರದಲ್ಲಿ ಅವ ನಿಗೆ ತಿಳಿಯಹೇಳುವವರಾರು? ಈಗ ಈ ಸಪ್ತಋಷಿಗಳು ಹೇಳಿದ ವಿಚಾ ರವು ಕಾಲಕರ್ಮಯೋಗದಿಂದ ಅವನ ಮನಸ್ಸಿಗೆ ತಗುಲಿತು. ಒಡನೆ ಅವ ನು-'ಓಹೋ! ಅದಕ್ಕೇನ, ನನ್ನ ಹೆಂಡತಿಯರಿದ್ದಾರೆ, ಮಕ್ಕಳಿದ್ದಾರೆ. ಅವ ರೆಲ್ಲರಿಗೂ ನನ್ನಮೇಲೆ ಅತಿಶಯಪ್ರೇಮವಿದೆ. ಅವರೇ ನನ್ನ ಕಷ್ಟಸುಖಗ ಳೆಲ್ಲೆಲ್ಲ ನನ್ನನ್ನು ರಕ್ಷಿಸತಕ್ಕವರು. ನನ್ನೀ ಕೃತ್ಯಗಳಿಂದ ಒಂದುವೇಳೆ ಪಾಪವೆಂಬುದು ಬರುವಂತಿದ್ದ ಪಕ್ಷದಲ್ಲಿ, ಆ ನನ್ನ ಪ್ರೀತಿಯ ಪತ್ನೀಪುತ್ರ ರು ಭಾಗವಹಿಸಲಾರರೇ? ಅಗತ್ಯವಾಗಿ ವಹಿಸಿಯೇ ವಹಿಸುವರು.' ಎಂ ದನು. ಅದನ್ನು ಕೇಳಿದ ಆ ಮಹರ್ಷಿಗಳು ಹಸನ್ಮುಖದಿಂದ - 'ಅಯ್ಯಾ ಬ್ರಹ್ಮಬಂಧುವೇ, ಹಾಗಾಗುವಂತಿದ್ದರೆ ಬಹು ಸಂತೋಷ. ನಾವು ಇಲ್ಲೇ ಇರುತ್ತೇವೆ. ನೀನು ಒಡನೆ ಮನೆಗೆಹೋಗಿ, ಆ ಸಂಗತಿಯನ್ನು ಮಾತ್ರ, ನಿನ್ನ ಹೆಂಡಿರು ಮಕ್ಕಳನ್ನು ಕೇಳಿ ತಿಳಿದುಕೊಂಡು ಬಂದುಬಿಡು,' ಎಂದು ನುಡಿದರು. -- 'ಇದೇನು ಈ ಸಾಮಾನ್ಯವಿಚಾರವನ್ನು ಈ ಜೋಗಿಗಳು

ಇಷ್ಟು ಅಗಾಧವಾಗಿ ತಿಳಿದುಕೊಂಡಿದ್ದಾರೆಯಲ್ಲ. ಇದನ್ನು ವಿಮರ್ಶಿಸಬೇಕು.' ಎಂದು ಆತನ ಮನಸ್ಸಿನಲ್ಲಿ ಒಂದು ಆಸೆಯುದಯಿಸಿತು. ಒಡನೆ ಅವರನ್ನು ಅಲ್ಲೇ ಇರಹೇಳಿ, ತನ್ನ ಮನೆಗೆ ಹೊರಟನು. ಅತ್ತ ಮನೆಯಲ್ಲಿ ಆ ದಿನ ಮಧ್ಯಾಹ್ನದ ಅಡಿಗೆಗೆ ಯಾವ ಯಾವ ನವೀನ ಮೃಗಪಕ್ಷಿಗಳ ರುಚಿರುಚಿಯಾದ ಮಾಂಸವನ್ನು ತರುವನೋ, ಎಂತಹ ನೂತನ ವಸ್ತ್ರಾಭರಣಗಳನ್ನು ದೋಚಿಕೊಂಡು ಬರುವನೋ ಎಂದು ಬೆಟ್ಟದಷ್ಟು ಆಸೆಯನ್ನಿಟ್ಟುಕೊಂಡು ಎದುರುನೋಡಿಕೊಂಡಿದ್ದ, ಮಕ್ಕಳೂ ಹೆಂಡಿರೂ, ಆತನು ಅಂದು ಬರೀಕೈಲಿ ಬಂದುದನ್ನು ಕಂಡು, ನಿರಾಶರಾಗಿ ಎಲ್ಲಿದ್ದವರಲ್ಲೇ ನಿಂತುಬಿಟ್ಟರು. ನಿತ್ಯವೂ ತಾನು ಬರುವ ವೇಳೆಗೆ ಹಸನ್ಮುಖದಿಂದ ಎದುರಿಗೆ ಬಂದು ಆದರಿಸಿ, ಮೃದುನುಡಿಗಳಿಂದ ಉಪಚರಿಸುತ್ತಿದ್ದ ಪತ್ನಿಯರಾಗಲೀ, ಮುದ್ದುಮುದ್ದು ಮಾತುಗಳಿಂದ ತನ್ನನ್ನು ಆಲಂಗಿಸಿ ಆಪ್ಯಾಯನವನ್ನುಂಟುಮಾಡುತ್ತಿದ್ದ ಮಕ್ಕಳಾಗಲೀ ಆದಿನ ಹತ್ತಿರಕ್ಕೆ ಬಾರದಿದ್ದುದು ಆತನಿಗೆ ವಿಚಿತ್ರವೆನ್ನಿಸಿತು. ಆದರೆ ಅದನ್ನು ಅಷ್ಟಾಗಿ ಗಮನಿಸದೆ, ಎಲ್ಲರನ್ನೂ ತನ್ನ ಬಳಿಗೆ ಕರೆದು - 'ಎಲ್ಲೈ, ನಾನು ದಿನವೂ ನಿಮ್ಮಗಳ ಪೋಷಣೆಗಾಗಿ ಎಷ್ಟೋ ಪ್ರಾಣಿಗಳನ್ನು ಕೊಂದೂ, ಎಷ್ಟೋಮಂದಿ ಬಡಜನರನ್ನೂ ಸಾಧುಗಳನ್ನೂ ಮತ್ತು ಪ್ರಯಾಣಿಕರನ್ನೂ ಚಿತ್ರಹಿಂಸೆಗೊಳಿಸಿ ಅವರ ಸರ್ವಸ್ವವನ್ನೂ ತಂದೂ ಪೋಷಿಸುತ್ತಿರುವೆನಲ್ಲಾ,-ಇದರಿಂದ ನನಗೆ ಪ್ರಾಪ್ತವಾಗುವ ಪಾಪದಲ್ಲಿ ನಿಮ್ಮಲ್ಲಿ ಯಾರಾದರೂ, ಭಾಗವಹಿಸುತ್ತೀರಾ?' ಎಂದು ಪ್ರಶ್ನೆಮಾಡಿದನು. ಆ ದಿನದವರೆಗೆ ಆ ಮನೆಯಲ್ಲಿ ಪಾಪಪುಣ್ಯಸಂಬಂಧವಾದ ಆ ಬಗೆಯ ಮಾತುಕಥೆಯೇ ಇಲ್ಲದೆ, ಅಂದು ಆತನು ಕೇಳಿದ ಆ ಪ್ರಶ್ನೆಯು ಅಪಹಾಸ್ಯವಾಗಿ ತೋರಿ, ಆ ಸ್ತ್ರೀಯರು ಒಂದು ಪಕ್ಕಕ್ಕೆ ತಿರುಗಿಕೊಂಡು, ಮುಸಿ ಮುಸಿ ನಗತೊಡಗಿದರು. ಮಕ್ಕಳಿಗಂತೂ ಆ ವಿಚಾರವೇನೆಂಬುದೇ ತಿಳಿಯಲಿಲ್ಲ. ಅವನ ಅತ್ತೆ ಮಾವಂದಿರೂ - ಪೋಷಕರಾಗಿದ್ದ ವೃದ್ಧ ಕಿರಾತ ದಂಪತಿಗಳೂ, ಆ ಪ್ರಶ್ನೆಯನ್ನು ಕೇಳಿ ಅಸಡ್ಡೆಯಿಂದ, - 'ಇದೇನಿದು? ಮಧ್ಯಾಹ್ನವಾಗಿದೆ. ಮಕ್ಕಳೆಲ್ಲರೂ ಉಪವಾಸದಿಂದ ಕಂಗಾಲಾಗಿವೆ. ಎಲ್ಲರ ಹೊಟ್ಟೆಗೂ ಬೇಕಾಗುವ ದವಸಧಾನ್ಯಗಳನ್ನು ತಂದು ಹಾಕದೆ, ಹಿಂಸೆಯೋ ಪಾಪವೋ, ಆ ವಿಚಾರವನ್ನೆಲ್ಲಾ ಮನೆಯವರೆದು

ರಿಗೆ ಹೇಳಿಕೊಂಡು ಕುಳಿತರೆ ಯಾರೇನು ಮಾಡುತ್ತಾರೆ? ಅದಕ್ಕೆಲ್ಲಾ ನಾವು ಬಾಧ್ಯಸ್ಥರೇ! ನಾವೇನು ಮಾಡೋಣ! ಯಾರ ಪಾಪಕ್ಕೆ ಯಾರು ಹೊಣೆ? ' ಎಂದು ಆಕ್ಷೇಪಿಸಿದರು. ಆ ಮಾತುಗಳನ್ನು ಕೇಳಿಯೂ, ಸ್ತ್ರೀಯರ ಆ ಚರ್ಯೆಯನ್ನು ನೋಡಿಯೂ, ಬೇಸರಗೊಂಡಿದ್ದ ಆ ಕಿರಾತಾಧಿಪನು, ಮುನಿಗಳಮಾತಿನ ಸತ್ಯತೆಯನ್ನು ಕಂಡು, ತನ್ನ ಪತ್ನಿಯರಲ್ಲಿ ಒಬ್ಬೊಬ್ಬರನ್ನಾಗಿ ಬಳಿಗೆ ಕರೆದು-'ನನ್ನ ಪಾಪ ಫಲದಲ್ಲಿ ನೀನು ಭಾಗಿಯಾಗುವೆಯಾ? ನೀನು ಭಾಗಿಯಾಗುವೆಯಾ' ಎಂದು ಪ್ರಶ್ನಿಸಲಾರಂಭಿಸಿದನು. ಅವರೆಲ್ಲರೂ, ಒಬ್ಬರಾದ ಮೇಲೊಬ್ಬರಂತೆ ಬಂದು-'ನನಗೇನೂ ಕಾರಣವಿಲ್ಲ. ನನ್ನನ್ನು ಕೈಹಿಡಿದ ನೀವು ನನ್ನನ್ನು ಅನ್ನವಸ್ತ್ರಗಳನ್ನಿತ್ತು ಪೋಷಿಸಲು ಬಾಧ್ಯಸ್ಥರಲ್ಲದೆ, ನೀವು ಪಾಪಮಾಡಿ ಸಂಪಾದಿಸುತ್ತೀರೋ, ಎಲ್ಲಿಂದ ತರುತ್ತೀರೋ ಆ ಯೋಚನೆಯೆಲ್ಲಾ ನನಗೇತಕ್ಕೆ? ' ಎಂದು ನುಡಿದು ಬಿಟ್ಟರು. ಪ್ರಬುದ್ಧರಾದ ಮಕ್ಕಳಿಂದಲೂ ಅದೇ ಪ್ರತ್ಯುತ್ತರವೇ ಬಂದಿತು- ಅಂದು ತನಗಿದ್ದ ಅಷ್ಟು ದೊಡ್ಡಪರಿವಾರದಲ್ಲಿ ಎಲ್ಲರೂ ತನ್ನ ಸಂಪಾದನೆಯಲ್ಲಿ ಭಾಗವಹಿಸಿ ತಿಂದುಂಡು ಸುಖಿಸಲು ಮಾತ್ರ ಬಾಧ್ಯಸ್ಥರಲ್ಲದೆ, ತನ್ನ ಪಾಪರಾಶಿಯಲ್ಲಿ ಭಾಗವಹಿಸಲು ಒಬ್ಬರೂ ಸಿದ್ಧರಾಗಲಾರರೆಂಬುದು ಸ್ಪಷ್ಟವಾಯಿತು. ಅವರೆಲ್ಲರೂ ತನ್ನವರು, ತಾನು ಅವರ ಯಜಮಾನ ಎಂಬ ಮುಂತಾದ ಯೋಚನೆಯು ಮನಸ್ಸಿನಿಂದ ದೂರವಾಯಿತು. ತನಗೆ ತಾನೇ ಆಗಬೇಕಲ್ಲದೆ, ಬೇರೊಬ್ಬರು ತನಗಾಗಿ ಏನೂ ಮಾಡಲಾರರೆಂಬುದು ಮನಸ್ಸಿಗೆ ತಟ್ಟಿತು. ಒಡನೆ ನಕಲವನ್ನೂ ತ್ಯಜಿಸಿ ನೇರವಾಗಿ ಹೊರಟು ತಾನು ಆ ಸಪ್ತರ್ಷಿಗಳನ್ನು ಬಿಟ್ಟುಬಂದಿದ್ದ ಸ್ಥಳಕ್ಕೆ ನಡೆದು ಅವರನ್ನು ಸಂಧಿಸಿದನು. ಅವರನ್ನು ಕಂಡೊಡನೆಯೇ ಧರೆಯಮೇಲೆಬಿದ್ದು ದೀರ್ಘದಂಡನಮಸ್ಕಾರಮಾಡಿ,—'ಮುನಿವರ್ಯರೇ ಪಾಪಿಯಾದ ನನ್ನನ್ನು ಕಾಪಾಡಿರಿ' ಎಂದು ನುಡಿದನು. ದಯಾಮಯರಾದ ಆ ಮಹರ್ಷಿಗಳು, ಅವನ ಮನೆಯಲ್ಲಿ ಏನು ಉತ್ತರ ಬಂದೀತೆಂಬುದನ್ನು ಮೊದಲೇ ಅರಿತಿದ್ದವರಾದುದರಿಂದ- ಅವನ ತಲೆಯಮೇಲೆ ಕೈಯಿಟ್ಟು 'ಶ್ರೇಯೋಸ್ತು' ಎಂಬೊಂದು ನುಡಿಯಿಂದ ಆಶೀರ್ವದಿಸಿದರು. ಅವರ ಕರುಣಾಕಟಾಕ್ಷಕ್ಕೆ ಪಾತ್ರನಾದೊಡನೆಯೇ ಪಶುಘಾತಕಿಯೂ, ಮಹಾ ನಿಷ್ಕರುಣಿಯೂ ಆದ ಆತನ

ಹೃದಯವು ಮಾರ್ದವ ಸ್ವಭಾವವನ್ನು ಹೊಂದಿ, ತನ್ನ ಅಗಾಧ ಪಾಪಗಳಿಗಾಗಿ ಪಶ್ಚಾತ್ತಾಪಪಡತೊಡಗಿತು. ಒಡನೆ ಕಣ್ಣುಗಳಿಂದ ಧಾರಾಕಾರವಾಗಿ ನೀರು ಸುರಿಯುತ್ತಿರಲು, ಮತ್ತೆ ಮತ್ತೆ ಆ ಮುನಿಪ್ರೋತ್ತಮರ ಪಾದಗಳಿಗೆ ನಮಸ್ಕರಿಸುತ್ತಾ, - 'ಅಹೋ, ಅಗಾಧ ದುಷ್ಕರ್ಮಿಯಾದ ನನಗೆ ಮುಂದೆ ಮಾರ್ಗವೇನು? ನಾನು ಹೇಗೆ ಉದ್ಧಾರವಾದೇನು? ನನ್ನನ್ನು ರಕ್ಷಿಸುವವರಾರು? ಅಯ್ಯೋ ಎಷ್ಟು ಪ್ರಾಣಿಗಳನ್ನು ಹಿಂಸಿಸಿದೆನು! ಎಷ್ಟು ಮಂದಿ ಸಾಧುಗಳನ್ನು ಚಿತ್ರಹಿಂಸೆಗೊಳಿಸಿದೆನು! ಹೇಳಲಾಗದ ಎಂತೆಂತಹ ಪಾಪಗಳನ್ನು ಮಾಡಿ ನರಕಭಾಜನನಾದೆನಲ್ಲ- ನನಗಿನ್ನೇನುಗತಿ? ' ಎಂದು ಹಂಬಲಿಸತೊಡಗಿದನು. ಅವನ ಪಶ್ಚಾತ್ತಾಪವನ್ನು ಕಂಡ ಆ ಮುನಿಗಳು - 'ಮಗೂ ವ್ಯಸನಪಡಬೇಡ. ಇಲ್ಲಿ ಬಾ' ಎಂದು ನುಡಿದು ಅವನಿಗೆ — 'ಶ್ರೀ ರಾಮಾ, ಪರಮಪಾವನಕರವಾದ ನಿನ್ನ ನಾಮವನ್ನು ಉಚ್ಚರಿಸೆಂದು ಹೇಳಿದರು. ಆದರೆ, ಮಹಾಪಾಪಗಳಿಂದಲೂ, ಮದ್ಯಮಾಂಸಾದಿಗಳ ಸೇವನೆಯಿಂದಲೂ ದುಷ್ಟವಾಗಿ ಕೊಬ್ಬಿಹೋಗಿದ್ದ ಅವನ ಆ ನಾಲಿಗೆಯಲ್ಲಿ, ಆ ಸ್ವರ್ಗೀಯನಾಮದ ಉಚ್ಚಾರವು ಹೊರಡಲು ಸಾಧ್ಯವೇ? ಆಗಲಾ ಸಾಧುವರ್ಯರು, ಅವನನ್ನು ಕರೆದೊಯ್ದು ಸಮೀಪದಲ್ಲೇ ಇದ್ದ - ಎರಡುಮರಗಳ ಮಧ್ಯದಲ್ಲಿ ಕುಳ್ಳಿರ ಹೇಳಿ- 'ಅಯ್ಯಾ, ಅದೋ ನೋಡು, ಅಲ್ಲೊಂದು ಮರವಿದೆ, ಇಲ್ಲೊಂದು ಮರವಿದೆ. ಅವುಗಳ ಹೆಸರುಗಳನ್ನು ಉಚ್ಚರಿಸು' ಎಂದು ನುಡಿದರು. ವ್ಯಾಧನು - 'ಮರಾ, ಮರಾ,' ಎಂದನು. ಒಡನೆ ಆ ಮುನಿಗಳು - 'ಹಾಗೆಯೇ ಮರಾ, ಮರಾ, ಮರಾ' ಎಂಬದಾಗಿ ನುಡಿಯುತ್ತಿರು, ಎಂದರು. ಅವನು 'ಮರಾ ಮರಾ ಮರಾ ಮರಾ ಮರಾ' ಎಂದು ಹಲವುಬಾರಿ ಉಚ್ಚರಿಸಿದನು. ಆ ಉಚ್ಚಾರಣೆಯು, ಕ್ರಮವಾಗಿ 'ರಾಮ ರಾಮ ರಾಮ ರಾಮ ರಾಮ' ಎಂಬ ರೂಪವನ್ನು ಹೊಂದಿತು. ಆಗಲಾ ಮುನಿಪ್ರೋತ್ತಮರು-'ಮಗೂ' ಪಾಪವಿಧ್ವಂಸನಗೊಳಿಸುವಲ್ಲಿ ಶ್ರೀರಾಮನಾಮಕ್ಕೆ ಸಮಾನವಾದ ಮತ್ತಾವ ಸಾಧನವನ್ನೂ ನಾವು ಕಂಡುದಿಲ್ಲ. ಇಗೋ ಈ ರಾಮನಾಮವನ್ನು ಏಕನಿಷ್ಠೆಯಿಂದ ಜಪಿಸುತ್ತಾ ಇಲ್ಲಿ ಕುಳಿತಿರು, ಮುಂದೆ ಕ್ರಮವಾಗಿ ಶ್ರೀರಾಮನ ದಿವ್ಯರೂಪವು ದರ್ಶನಕ್ಕೆ ಬರುವುದು. ರಾಮಪಾದದರ್ಶನವೂ ರಾಮನಾಮಜಪವೂ ನಿನಗೆ ಸಕಲ ಸಿದ್ಧಿಗಳನ್ನೂ ದೊರ

ಕೆಸಿ ಕೊಡುವುವು ನಾವು ಪುನಃ ಬರುವವರೆಗೂ ಹೀಗೆಯೇ ಕುಳಿತಿರು, ಎಂದು ನುಡಿದು ಆಶೀರ್ವದಿಸಿ ಹೊರಟುಹೋದರು.

—'ಶ್ರೀರಾಮಭದ್ರಾ, ಮುಂದಿನ ಕಥೆಯನ್ನು ಲಾಲಿಸು. ಸಪ್ತರ್ಷಿಗಳಿಂದ ಹೇಳಲ್ಪಟ್ಟಂತೆ ನಿಯಮಿತನಾಗಿ ಕುಳಿತ ಆ ವ್ಯಾಧನು, ಏಕಾಗ್ರಚಿತ್ತವೃತ್ತಿಯಿಂದ ಶ್ರೀ ರಾಮನಾಮ ಜಪದಲ್ಲಿ ನಟ್ಟ ಮನಸ್ಸುಳ್ಳವನಾಗಿ ಎಷ್ಟುಕಾಲ ಕುಳಿತಿದ್ದನೋ ಬಲ್ಲವರಾರು? ಅತ್ತಿತ್ತ ಕದಲದೆ, ಆಹಾರಪಾನೀಯಾದಿಗಳಿಗಾಗಿಯೂ ಮೇಲಕ್ಕೇಳದೆ ಕೇವಲ ಮರದ ತುಂಡಿನಂತೆ ಕುಳಿತು, ಅಂತಃಕರಣದಲ್ಲಿ ಮಾತ್ರ ಶ್ರೀರಾಮನ ಪಾದದರ್ಶನಮಾಡುತ್ತಲೂ ಶ್ರೀರಾಮನ ದಿವ್ಯನಾಮವನ್ನು ಜಪಿಸುತ್ತಲೂ ಇದ್ದ ಆತನ ದೇಹದಮೇಲೆ ಒಂದು ಹುತ್ತವು ಬೆಳೆಯಿತು. ಆತನ ದೇಹವಾದರೋ ಕೇವಲ ಅಸ್ಥಿಮಯವಾಗಿ ನಿಂತಿತು. ಹಾಗೆ ಯುಗಾಂತರಗಳು ಕಳೆದ ತರುವಾಯ, ಆ ಮಹಾನುಭಾವರಾದ ಸಪ್ತರ್ಷಿಗಳು ಮತ್ತೊಮ್ಮೆ ಆ ಸ್ಥಳಕ್ಕೆ ಬಂದು-ಹೊರಕ್ಕೆ ಬಾರೆಂದು ತಮ್ಮ ಅಮೃತವಾಣಿಯಿಂದ ಕೂಗಿದರು. ಒಡನೆ ಆ ಹುತ್ತವನ್ನು ಭೇದಿಸಿಕೊಂಡು,-ಶ್ರೀ ರಾಮಾ ನಾನು ಹೊರಕ್ಕೆ ಬಂದೆನು. ನಿನ್ನ ಪಾದ ಮಹಿಮೆಯಿಂದ ಸಕಲ ಪಾಪಗಳನ್ನೂ ಕಳೆದುಕೊಂಡು, ಪುನರ್ಜನ್ಮಹೊಂದಿ, ಇಗೋ ನಾನು ಲೋಕಕ್ಕೇ ನಿನ್ನ ದಿವ್ಯನಾಮ ಪ್ರಭಾವವನ್ನು ತಿಳಿಸಬಲ್ಲ ಅತಿಶಯ ಉತ್ಕೃಷ್ಟ ಉದಾಹರಣೆಯಾಗಿ ಪರಿಣಮಿಸಿದ್ದೇನೆ. ವಲ್ಮೀಕದಿಂದ ಉದ್ಭವನಾದುದನ್ನು ಕಂಡು ಆ ಮುನಿಪೋತ್ತಮರು ನನ್ನನ್ನು ವಾಲ್ಮೀಕಿ ಎಂದು ಸಂಬೋಧಿಸಿ, ನನಗೆ ಪ್ರಾಪ್ತವಾದ ಶ್ರೇಯಸ್ಸಿಗಾಗಿ ನನ್ನನ್ನು ಅಭಿನಂದಿಸಿ ಹೊರಟುಹೋದರು. ಅಂದಿನಿಂದ ನಾನು ಇಲ್ಲೇ ಒಂದು ಆಶ್ರಮ ನಿರ್ಮಾಣಮಾಡಿಕೊಂಡು, ನಿನ್ನ ಪಾದಧ್ಯಾನಾಸಕ್ತನಾಗಿ ವಾಸವಾಗಿದ್ದೇನೆ' ಎಂದು ವಿಜ್ಞಾಪಿಸಿ, ಪೂಜಿಸಿದರು. ಸ್ಕಾಂದ ಪುರಾಣೋಕ್ತವಾದ ಕಥೆಗೂ, ಈ ಕಥೆಗೂ ಅಲ್ಪ ಸ್ವಲ್ಪ ವ್ಯತ್ಯಾಸವು ಕಂಡುಬರುತ್ತಿರುವುದಾದರೂ ಅವರು ವಲ್ಮೀಕೋದ್ಭವರೆಂಬ ವಿಷಯದಲ್ಲೂ ಬ್ರಾಹ್ಮಣ ಕ್ಷೇತ್ರೋತ್ಪನ್ನರೆಂಬ ವಿಷಯದಲ್ಲೂ ಎರಡೂ ಏಕಾಭಿಪ್ರಾಯಪಡುತ್ತಿವೆ. ಹೀಗೆ ಶ್ರೀ ರಾಮನಾಮಪಾರಾಯಣ ಪ್ರಭಾವದಿಂದ

ಮಹಾ ಪಾಪಿಯಾಗಿದ್ದ ಕಿರಾತಾಧಿಪನು .ವಾಲ್ಮೀಕಿ ಮುನಿಪೋತ್ತಮನಾಗಿ ಪರಿಣಾಮಿಸಿದನು.



## ಅಧ್ಯಾಯ ೪ "ಶ್ರೀರಾಮಾಯಣ ಗ್ರಂಥರಚನೆ"

ಶ್ರೀ ರಾಮನಾಮ ಮಹಿಮೆಯಿಂದ ಮೇಲ್ಕಂಡಂತೆ ಉದ್ಧೃತರಾದ ಮೇಲೆ ಶ್ರೀವಾಲ್ಮೀಕಿ ಮಹರ್ಷಿಗಳು, ಪರಮ ಸಂತುಷ್ಟರಾಗಿ ಒಂದು ಆಶ್ರಮವನ್ನು ರಚಿಸಿಕೊಂಡು ಸುಖವಾಗಿ ವಾಸಮಾಡಿಕೊಂಡಿದ್ದರು. ಮಹಾ ತಪಸ್ವಿಗಳಾದ ಅವರಿಗೆ ವೇದ ವೇದಾಂಗಗಳೊಡನೆ ಸಕಲ ಶಾಸ್ತ್ರಾರ್ಥ ರಹಸ್ಯಗಳೂ ಕರತಲಾಮಲಕದಂತೆ ಜ್ಞಾನದೃಷ್ಟಿಗೆ ಗೋಚರವಾದುವು. ಲೋಕಕ್ಕೇ ಅದ್ಭುತವೆನ್ನಿಸುವಂತಹ ತಪಸ್ವಿಗಳೂ, ಜ್ಞಾನಪೂರ್ಣರೂ ಆದ ಆ ಮಹಾತ್ಮರು ಪರಮಾತ್ಮ ತತ್ವವನ್ನು ಅರಿತ ಮಹಾನುಭಾವರಾದುದರಿಂದ ಕೇವಲ ಪರತಂತ್ರರಾಗಿ, ಭಗವದಿಚ್ಛಾನುವರ್ತಿಗಳಾಗಿ ವಾಸಿಸುತ್ತಾ, ಲೋಕಾನುಗ್ರಹಾರ್ಥವಾಗಿ ತಪಸ್ಸ್ವಾಧ್ಯಾಯನಿರತರಾಗಿದ್ದರು.

ಹೀಗಿರುವಲ್ಲಿ ವಾಲ್ಮೀಕರು ಒಂದಾನೊಂದುದಿನ ಪ್ರಾತರಾಹ್ನಿಕಾದಿಗಳನ್ನು ಮುಗಿಸಿಕೊಂಡು ಸಂತೋಷಚಿತ್ತರಾಗಿ ಕುಳಿತಿರಲು, ಅಕಸ್ಮಾತ್ತಾಗಿ ಆಶ್ರಮದ್ವಾರದಲ್ಲಿ ನಾರದ ಮಹರ್ಷಿಗಳ ದರ್ಶನವಾಯಿತು. ಬ್ರಹ್ಮಮಾನಸಪುತ್ರರಾದ ನಾರದರನ್ನು ಕಂಡೊಡನೆಯೇ ವಾಲ್ಮೀಕರು ಭಯಭಕ್ತಿಪುರಸ್ಸರವಾಗಿ ಇದಿರೆದ್ದು ಗೌರವಪೂರ್ವಕವಾಗಿ ಒಳಕ್ಕೆ ಕರೆತಂದು, ಆಸನ ಅರ್ಘ್ಯಪಾದ್ಯಾದಿಗಳನ್ನೂ, ಕಂದಮೂಲ ಫಲಾದಿಗಳನ್ನೂ ಸಮರ್ಪಿಸಿ, ಮೃದುಮಧುರ ವಚನಗಳಿಂದ ಉಪಚರಿಸಿದರು. ನಾರದರು ಪರಮ ಸಂತುಷ್ಟರಾಗಿ ವಾಲ್ಮೀಕರನ್ನು ಕುರಿತು- 'ಮುನಿಪೋತ್ತಮರೇ ನಿಮ್ಮ ಆದರಾತಿಥ್ಯಗಳಿಂದ ನಮ್ಮ ಆಯಾಸವೆಲ್ಲವೂ ಪರಿಹಾರವಾಯಿತು. ಮಹಾ ತಪಸ್ಸಂಪನ್ನರೂ, ಪರಮ ರಾಮಭಕ್ತರೂ ಆದ ನಿಮ್ಮ ಬಳಿ ಒಂದು ಕಾರ್ಯಾರ್ಥವಾಗಿ ಬಂದೆನು,'' ಎನ್ನುತ್ತಿರುವಷ್ಟರಲ್ಲೇ-ವಾಲ್ಮೀಕರು, ತಮ್ಮ

ಪ್ರಶಂಸಾಪರವಾದ ಆ ಮಾತನ್ನು ಅಷ್ಟಾಗಿ ಗಮನಿಸದೆಯೇ,— 'ಬ್ರಹ್ಮ ಮಾನಸಪುತ್ರರಾದ ನಾರದ ಮಹರ್ಷಿಗಳೇ, ತ್ರಿಲೋಕ ಸಂಚಾರಿಗಳೂ, ಮಹಾಮಹಿಮರೂ ಆದ ನಿಮ್ಮನ್ನು ಒಂದಾನೊಂದು ವಿಚಾರದಲ್ಲಿ ಪ್ರಶ್ನೆ ಮಾಡಬೇಕೆಂದು ಬಹುದಿನಗಳಿಂದಲೂ ಇದಿರುನೋಡುತ್ತಿದ್ದೆನು. ಆ ನನ್ನ ಮನೋಭಿಲಾಷೆಯು ಇಂದು ಪೂರ್ಣವಾಗುವಂತಿರುವುದು.' ಎಂದು ನುಡಿದು, *-' ಮಹರ್ಷೇ ಈ ಕಾಲದಲ್ಲಿ ಭೂಲೋಕದಲ್ಲಿ ಸಕಲ ಸದ್ಗುಣ ಸಂಪನ್ನನಾದವನಾವನು? ನಿಜವಾದ ವೀರ್ಯವು ಯಾವನಲ್ಲಿರುವುದು, ನಡೆಯಿಸಬೇಕಾದ ಧರ್ಮಗಳನ್ನೂ ಬಿಡಬೇಕಾದ ಅಧರ್ಮಗಳನ್ನೂ ಚೆನ್ನಾಗಿ ಬಲ್ಲವನಾವನು? ಇತರರು ತನಗೆ ಮಾಡಿದ ಎಳ್ಳಷ್ಟು ಉಪಕಾರವನ್ನು ಬೆಟ್ಟದಂತೆ ಭಾವಿಸಿ ಅದನ್ನು ಎಂದೆಂದಿಗೂ ಮರೆಯದಂತೆ ಸ್ಮರಿಸುತ್ತಲೂ, ಅವರು ತನಗೆ ಎಷ್ಟೇ ಅಪಕಾರಮಾಡಿದ್ದರೂ, ಅದನ್ನು ಕುರಿತು ಗಮನಿಸದೆಯೂ ಇರುವಂತಹ ಶ್ರೇಷ್ಠ ಗುಣವು ಯಾರಲ್ಲಿರುವುದು? ಎಂತಹ ವಿಪತ್ತುಗಳು ಬಂದರೂ ಸುಳ್ಳಾಡದವನೂ, ಮನಸ್ಸಿಗೆ ಸೂಕ್ತವೆಂದು ತೋರಿದ ಕಾರ್ಯವನ್ನು ದೃಢಸಂಕಲ್ಪದಿಂದ ನೆರವೇರಿಸುವಂತಹ ಧೀರನೂ, ಲೇಶಮಾತ್ರವೂ ಲೋಪವಿಲ್ಲದಂತೆ,ತನ್ನ ಕುಲಕ್ರಮಾಗತ ಆಚಾರಗಳನ್ನು ನಡೆಯಿಸುವ ಶ್ರದ್ಧಾವಂತನೂ ಯಾವನಿದ್ದಾನೆ? ಮಹರ್ಷೇ, ಸರ್ವದಾ ಪ್ರಾಣಿಮಾತ್ರಕ್ಕೆ ಕ್ಷೇಮವನ್ನೇ ಬಯಸುತ್ತಿರುವ ಮಹಾನುಭಾವನೂ, ಸಕಲ ಶಾಸ್ತ್ರಾರ್ಥಗಳನ್ನೂ ಸಾಂಗವಾಗಿ ಅಭ್ಯಸಿಸಿದವನೂ, ಇತರರಿಂದ ಸಾಧ್ಯವಿಲ್ಲದ ಮಹತ್ಕಾರ್ಯಗಳನ್ನಾದರೂ ಸಾಧಿಸುವ ಧೀರನೂ ಈ ಕಾಲದಲ್ಲಿ ಯಾರು? ಸೌಮ್ಯವಾದ ದರ್ಶನವುಳ್ಳವನೂ, ನಿಶ್ಚಲವಾದ ಧೈರ್ಯವುಳ್ಳವನೂ, ಮೀರಿಬರುವ ಕೋಪವನ್ನೂ ತಡೆವ ಸಾಮರ್ಥ್ಯವುಳ್ಳವನೂ ಈಗ ಇರುವನೇ! ದಿವ್ಯ ದೇಹಕಾಂತಿಯಿಂದ ಒಪ್ಪುತ್ತಾ, ನೋಡುವವರ ಮನಸ್ಸಿಗೆ ಆಹ್ಲಾದವನ್ನುಂಟುಮಾಡುವಂತಹ ಪ್ರಸನ್ನ ರೂಪವು ಯಾವ ಮಹಾನುಭಾವನಿಗುಂಟು? ಇತರರ ಗುಣಗಳನ್ನು ಸಹಿಸದೆ, ಅವುಗಳಲ್ಲಿ ದೋಷವನ್ನಾರೋಪಿಸುವ ದುರ್ಗುಣವು ಯಾವನಲ್ಲಿ ನಿಶ್ಶೇಷವಾಗಿರುವುದು? ಯಾವನ ಕೋಪಕ್ಕೆ ದೇವತೆಗಳೂ

---

* ಕೋನ್ವಸ್ಮಿನ್ ಸಾಂಪ್ರತೇ ಲೋಕೇ ಗುಣವಾನ್ ಕಶ್ಚ ವೀರ್ಯವಾನ್
ಧರ್ಮಜ್ಞಶ್ಚ ಕೃತಜ್ಞಶ್ಚ ಸತ್ಯವಾಕ್ಯೋ ದೃಢವ್ರತಃ

ಭಯಪಡುವರು ? ನಾರದಮಹರ್ಷೀ, ಅಂತಹ ಮಹಾ ಪುರುಷನು ಯಾವ ನಾದರೂ ಇದ್ದರೆ ಅವನ ವಿಚಾರವನ್ನು ತಿಳಿಯಬೇಕೆಂದು ಬಹು ಕುತೂಹಲವಿರುವುದು! ಅದನ್ನು ತಿಳಿದು ಹೇಳಲು ಶ್ರಿಕಾಲಜ್ಞರೂ, ತ್ರಿಲೋಕ ಸಂಚಾರಿಗಳೂ ಆದ ನೀವೊಬ್ಬರೇ ಸಮರ್ಥರು. ಆದುದರಿಂದ ದಯೆಯಿಟ್ಟು ಹೇಳಬೇಕು" ಎಂದು ಪ್ರಾರ್ಥಿಸಿದರು. ಆಗ ನಾರದರು,- 'ಮಹರ್ಷಿವರ್ಯನೇ ಕೇಳು. ನೀನು ಈಗ ಕೇಳಿದ ಸಮಸ್ತ ಗುಣಗಳೂ ಒಬ್ಬನೇ ಮನುಷ್ಯನಲ್ಲಿ ಸೇರಿರುವುದು ಅಪೂರ್ವ. ಆದರೂ ಸಾಂಪ್ರತ ಕಾಲದಲ್ಲಿ ಲೋಕದಲ್ಲಿ ಒಬ್ಬ ಮಹಾಪುರುಷನು ಲೋಕಾನುಗ್ರಹಾರ್ಥವಾಗಿ ಜನಿಸಿರುವನು. ಆತನು ಇಕ್ಷ್ವಾಕುವಂಶದಲ್ಲಿ ದಶರಥನಿಗೆ ಪುತ್ರನಾಗಿರುವನು. ಮಹಾ ವೀರ್ಯವುಳ್ಳವನು. ನಿಯತಾತ್ಮನು. ಅದ್ಭುತವಾದ ದೇಹಕಾಂತಿಯುಳ್ಳವನು. ಧೈರ್ಯಶಾಲಿಯು. ವಿಪತ್ತಿನಲ್ಲಾಗಲೀ ಸಂಪತ್ತಿನಲ್ಲಾಗಲೀ ಕಲಕಿಹೋಗದಂತಹ ದೃಢಚಿತ್ತವುಳ್ಳವನು. ಆತನು ಅಂತರಿಂದ್ರಿಯಗಳನ್ನು ನಿಗ್ರಹಿಸಿದವನು. ನ್ಯಾಯಶೀಲನು. ನೀತಿಕುಶಲನು. ಪ್ರಶಸ್ತವಾದ ವಾಕ್ಪ್ರೌಢಿಮೆಯುಳ್ಳವನು. ಮಹಾ ಭಾಗ್ಯಶಾಲಿಯು, ವಿಶೇಷವಾದ ಶತ್ರುನಾಶಕ ಸಾಮರ್ಥ್ಯವುಳ್ಳವನು.'' ಎಂದು ಮುಂತಾಗಿ, ಸಂಕ್ಷೇಪವಾಗಿ ಶ್ರೀರಾಮನ ಆದ್ಯಂತ ಚರಿತ್ರೆಯನ್ನೂ ವಿವರಿಸಿದನು. ಲೋಕಾನುಗ್ರಹಾರ್ಥವಾಗಿ ಅವತರಿಸಿದ ಸಾಕ್ಷಾದ್ವಿಷ್ಣುಮೂರ್ತಿಯ ಮಹಾಮಹಿಮೋಪೇತವಾದ ಆ ಚರಿತ್ರಶ್ರವಣವು, ಮಹಾ ಸಂಯಮಿಯೂ, ತಪಸ್ವಿದ್ಧರೂ ಆದ ಅವರ ಮನಸ್ಸಿನ ಮೇಲೆ ವಿಶೇಷವಾದ ಪರಿಣಾಮವನ್ನುಂಟುಮಾಡಿತು. ವಾಲ್ಮೀಕಿ ಮಹರ್ಷಿಯು ಪ್ರಸನ್ನಚಿತ್ತದಿಂದ ಆ ವೃತ್ತಾಂತವನ್ನು ಸಾಂಗವಾಗಿ ಕೇಳಿ, ಸಂತೋಷದಿಂದ ನಾರದರನ್ನು ಯಥೋಚಿತವಾಗಿ ಪೂಜಿಸಲು ಅವರು ಸಂತುಷ್ಟರಾಗಿ ಸತ್ಯಲೋಕವನ್ನು ಕುರಿತು ಪ್ರಯಾಣಮಾಡಿದರು. ಆ ದಿನ ವಾಲ್ಮೀಕರ ಮನಸ್ಸು ಮಹದಾನಂದ ಭರಿತವಾಗಿದ್ದಿತು.

ಆ ವೇಳೆಗೆ ಮಧ್ಯಾಹ್ನ ಕಾಲವಾಗಿದ್ದುದರಿಂದ ವಾಲ್ಮೀಕರು, ತಮ್ಮ ಶಿಷ್ಯನಾದ ಭರದ್ವಾಜನನ್ನೂ ಜೊತೆಗೆ ಕರೆದುಕೊಂಡು, ತಮಸಾನದಿಯ ತೀರಕ್ಕೆ ಸ್ನಾನಕ್ಕಾಗಿ ಹೊರಟರು. ಮಾರ್ಗದಲ್ಲಿ ಮನೋಹರವಾದ ವೃಕ್ಷಲತೆಗಳನ್ನು ನೋಡುತ್ತಲೂ, ಮೃಗಪಕ್ಷಿಗಳ ಕಲಕಲ ಧ್ವನಿಯನ್ನು ಕೇಳಿ

ಸಂತೋಷಪಡುತ್ತಲೂ ಪ್ರಯಾಣಮಾಡುತ್ತಿದ್ದ ಅವರಿಗೆ, ಒಂದು ಮರದ ಮೇಲೆ ಕುಳಿತು, ಅತಿ ಸ್ನೇಹದಿಂದ ಮನೋಹರವಾದ ಧ್ವನಿ ಮಾಡುತ್ತ ವಿಹಾರಮಾಡುತ್ತಿದ್ದ ಎರಡು ಕ್ರೌಂಚ ಪಕ್ಷಿಗಳು ದೃಷ್ಟಿಗೋಚರವಾದುವು. ಹಾಗೆ ಅವುಗಳನ್ನು ಅವರು ನೋಡುತ್ತಿದ್ದಂತೆಯೇ, ಪಾಪಾತ್ಮನಾದ ಒಬ್ಬ ಬೇಡನು ಬಾಣ ಪ್ರಯೋಗಮಾಡಿ, ಅವುಗಳಲ್ಲಿ ಒಂದಾದ ಗಂಡು ಹಕ್ಕಿಯನ್ನು ಕೆಳಕ್ಕೆ ಕೆಡಹಿದನು. ಕ್ರೂರವಾದ ಬಾಣವು ಎದೆಯಲ್ಲಿ ನಟ್ಟುದರಿಂದ ಆ ಪಕ್ಷಿಯು ದೇಹವೆಲ್ಲ ರಕ್ತಮಯವಾಗಿ ಅದು ಭೂಮಿಯಲ್ಲಿ ಬಿದ್ದು, ಮಹಾ ಸಂಕಟಕ್ಕೀಡಾಗಿ ಹೊರಳುತ್ತಾ, ಅಸಹ್ಯ ವೇದನೆಯನ್ನನುಭವಿಸಿ ಪ್ರಾಣಬಿಟ್ಟಿತು. ತನ್ನ ಪುರುಷನಿಗೆ ಪ್ರಾಪ್ತವಾದ ಆ ಮರಣಸ್ಥಿತಿಯನ್ನು ಕಂಡು, ಹೆಣ್ಣು ಹಕ್ಕಿಯು ಅತ್ಯಂತ ಕಾತರಸ್ವರದಿಂದ ಅರಚಿಕೊಳ್ಳುತ್ತಿತ್ತು. ಈ ದೃಶ್ಯವು ಮಹಾ ದಯಾಸ್ವಭಾವದ ವಾಲ್ಮೀಕರ ಹೃದಯವನ್ನು ಕಲಕಿಬಿಟ್ಟಿತು. ಅವರು ಅತ್ಯಂತ ಮರುಕದಿಂದಲೂ ದುಃಖದಿಂದಲೂ, ಅಂತಹ ಪಾಪಕಾರ್ಯವನ್ನಾಚರಿಸಿ, ನಿಷ್ಕಾರಣವಾಗಿ ಸಾಧುವಾದ ಆ ಪಕ್ಷಿಗೆ ತೊಂದರೆಯನ್ನುಂಟುಮಾಡಿದ ಆ ನಿಷಾದನನ್ನು ನುಂಗಿಬಿಡುವವರಂತೆ ನೋಡಿದರು. ಆ ಸಂದರ್ಭದಲ್ಲಿ ಬಹು ನೊಂದ ಅವರ ಹೃದಯದಿಂದ ಒಂದು ಧ್ವನಿಯು ಉದ್ಭವಿಸಿ, ಅವರ ವದನದ್ವಾರದಿಂದ ಹೊರಬಿದ್ದಿತು—* 'ಎಲೈ ನಿಷಾದನೇ! ಮೋಹದಿಂದ ಮೈಮರೆತಿದ್ದ ಈ ಪಕ್ಷಿದಂಪತಿಗಳಲ್ಲಿ ಒಂದನ್ನು ನೀನು ಕೊಂದುದರಿಂದ, ಇನ್ನು ಅನೇಕ ಸಂವತ್ಸರಗಳವರೆಗೆ ಸ್ಥಿರವಾಗಿ ಬದುಕಲಾರೆ' ಎಂದು ಅಕಸ್ಮಾತ್ತಾಗಿ ಅವರು ಬಾಯಿಂದ ನುಡಿದುಬಿಟ್ಟರು. ಒಡನೆ ತಾವು ನುಡಿದ ಆ ಶಾಪವಾಕ್ಯಕ್ಕಾಗಿ ಅವರ ಮನಸ್ಸಿನಲ್ಲಿ ಬಹು ಪಶ್ಚಾತ್ತಾಪವುಂಟಾಯಿತು.— 'ಆಹಾ ಇದೇನು ನಾನು ಹೇಳಿದುದು? ಈ ದಿನ ದುಃಖಾತಿಶಯದಿಂದ ಕಳವಳಗೊಂಡಿರುವ ನನಗೆ ಏನೂ ತೋರದಂತೆ ಇದೆಯಲ್ಲಾ!'' ಎಂದುಕೊಂಡರು. ಸ್ವಲ್ಪಕಾಲ ಹಾಗೆಯೇ ಕಳೆಯಲು, ತಮ್ಮ ಮನಸ್ಸನ್ನು ಒಂದು ಸ್ತಿಮಿತಕ್ಕೆ ತಂದುಕೊಂಡು, ಸಮೀಪದಲ್ಲಿದ್ದ ಶಿಷ್ಯನನ್ನು ಕುರಿತು— 'ವತ್ಸಾ, ಆ ಕ್ರೌಂಚಪಕ್ಷಿಯ ವಿಚಾರದಲ್ಲಿ

---

* ಮಾನಿಷಾದ ಪ್ರತಿಷ್ಠಾಂ ತ್ವಮಗಮಃ ಶಾಶ್ವತೀಃ ಸಮಾಃ
ಯತ್ಕ್ರೌಂಚ ಮಿಥುನಾದೇಕ ಮವಧೀಃ ಕಾಮಮೋಹಿತಂ

ನಾನು ದುಃಖಾತಿಶಯದಿಂದ ಹೇಳಿದ ಈ ಮಾತು, ಲಯಬದ್ಧವಾಗಿ ನಾಲ್ಕು ಪಾದಗಳಿಂದ ಕೂಡಿರುವುದು. ಒಂದೊಂದು ಪಾದಕ್ಕೆ ಸಮಪ್ರಮಾಣದ ಅಕ್ಷರಗಳಿದ್ದು ಇದು ತಾಳಬದ್ಧವಾಗಿ, ಶ್ರುತಿಯೊಡಗೂಡಿ ಹಾಡುವುದಕ್ಕೂ ಯೋಗ್ಯವಾಗಿರುವಂತೆ ತೋರುವುದು. ಇದೊಂದು ವೃತ್ತವೆಂಬ ವಿಷಯ ದಲ್ಲಿ ಸಂದೇಹವಿಲ್ಲ. ಇದೇನಾಶ್ಚರ್ಯವು! ನನ್ನ ಬಾಯಿಂದ ಅಕಸ್ಮಾತ್ತಾಗಿ ಇಂತಹ ವಾಕ್ಯವು ಹೊರಟುಬಿಟ್ಟಿತಲ್ಲಾ' ಎಂದು ನುಡಿದರು. ಈ ವಿಚಾ ರವು ಆ ಗುರುಶಿಷ್ಯರಿಬ್ಬರಿಗೂ ಕೌತುಕವೆನ್ನಿಸಿರಲು, ಅವರು ಪುನಃ ಪುನಃ ಆ ವಿಚಾರವಾಗಿಯೇ ಮಾತನಾಡಿಕೊಳ್ಳುತ್ತಾ, ಸ್ನಾನಾದಿಗಳನ್ನು ತೀರಿಸಿ ಕೊಂಡು ಆಶ್ರಮಕ್ಕೆ ಬಂದು, ದೇವಪೂಜಾದಿ ನಿತ್ಯಕೃತ್ಯಗಳನ್ನೆಲ್ಲಾ ನೆರೆ ವೇರಿಸಿಕೊಂಡು ಸಂತೋಷದಿಂದಿದ್ದರು.

ಹೀಗೆ ಆ ವಿಚಾರದಲ್ಲೇ ಮಗ್ನವಾದ ಮನಸ್ಸುಳ್ಳರಾಗಿ ವಾಲ್ಮೀಕಿ ಮಹರ್ಷಿಗಳು ಅಂತರ್ಮುಖಿಗಳಂತೆ ಇರುತ್ತಿರಲು, ತರುವಾಯ ಸ್ವಲ್ಪ ಹೊತ್ತಿನೊಳಗಾಗಿಯೇ ಅವರ ಆಶ್ರಮವು, ಒಂದು ದಿವ್ಯ ತೇಜಸ್ಸಿನಿಂದ ಪ್ರಕಾಶಿತವಾಯಿತು. ಅದು ಏನೆಂದು ವಾಲ್ಮೀಕರು ಅಪ್ರತಿಭರಾಗಿ ನೋ ಡುತ್ತಿದ್ದಂತೆಯೇ ಅಲ್ಲಿ ಕಮಲಾಸನನಾದ ಸೃಷ್ಟಿಕರ್ತ ಬ್ರಹ್ಮದೇವನು ಚತು ರ್ವದನಗಳಿಂದಲೂ ದೃಷ್ಟಿಗೆ ಗೋಚರನಾದನು. ವಾಲ್ಮೀಕರು ಅಪೂರ್ವ ವಾದ ಆ ಬ್ರಹ್ಮದೇವನ ಮೂರ್ತಿಯನ್ನು ಕಂಡೊಡನೆಯೇ ಭಯಭಕ್ತಿಗಳಿಂ ದ ಮೇಲಕ್ಕೆದ್ದು, ಬಾಯಿಂದ ಮಾತೇ ಹೊರಡದಿರಲು ಧೀರ್ಘದಂಡವತು ನಮಸ್ಕಾರಮಾಡಿ, ಅರ್ಘ್ಯಪಾದ್ಯಾದಿಗಳಿಂದ ಸತ್ಕಾರಮಾಡಿದರು. ಬ್ರಹ್ಮದೇ ವನು, ವಿಧ್ಯುಕ್ತವಾದ ಆ ಸೇವೆಯಿಂದ ಸಂತುಷ್ಟನಾಗಿ, ಅಲ್ಲೇ ನಿಂತಿದ್ದ ವಾಲ್ಮೀಕರನ್ನು ಕುಳಿತುಕೊಳ್ಳಲು ಹೇಳಲು, ವಾಲ್ಮೀಕರೂ ಬ್ರಹ್ಮದೇವನ ಬಳಿಯಲ್ಲೇ ಆಸನದಮೇಲೆ ಕುಳಿತುಕೊಂಡರು. ಬ್ರಹ್ಮದೇವನ ಸಾನ್ನಿಧ್ಯ ದಲ್ಲಿದ್ದರೂ ಅವರ ಮನಸ್ಸು, ಆದಿನ ಪ್ರಾತಃಕಾಲ ತಾವು ಕಂಡಿದ್ದ ದೃಶ್ಯ ವನ್ನೇ ಪುನಃಪುನಃ ಸ್ಮರಿಸಿಕೊಳ್ಳುತ್ತ,- 'ಅಕ್ಕಟಾ, ಪಾಪಿಯಾದ ಆ ಬೇ ಡನು, ನಿಷ್ಕಾರಣವಾಗಿ ಆ ಬಡ ಕ್ರೌಂಚ ಪಕ್ಷಿಯನ್ನು ಘಾತಿಸಿದನಲ್ಲಾ-- ಎಂದು ಮರುಕಗೊಳ್ಳುತ್ತಲಿತ್ತು. ಆಗ ಬ್ರಹ್ಮದೇವನು- 'ಎಲೈ ಋಷಿಯೇ ಚಿಂತಿಸಬೇಡ. ನಿನ್ನ ಬಾಯಿಂದ ಅಕಸ್ಮಾತ್ತಾಗಿ ಹೊರಟಿತೆಂಬ ಆ ವಾಕ್ಯ

ವು ಶ್ಲೋಕವೆಂದು ತಿಳಿ. ಅದು ನನ್ನ ಸಂಕಲ್ಪಾನುಸಾರವಾಗಿಯೇ ಹೊರಟುದಾಗಿದೆ. ಆ ಶ್ಲೋಕರೂಪವಾಗಿ - ಅದೇ ಛಂದಸ್ಸಿನಿಂದಲೇ ನೀನು ಶ್ರೀರಾಮ ಚರಿತ್ರೆಯೆಲ್ಲವನ್ನೂ ಸಮಗ್ರವಾಗಿ ರಚಿಸು. ನಾರದಮಹರ್ಷಿಯು ನಿನಗೆ ಹೇಗೆ ಉಪದೇಶಿಸಿದನೋ ಆ ಕ್ರಮದಿಂದಲೇ ಶ್ರೀರಾಮನ ದಿವ್ಯಚರಿತ್ರೆಯು ಲೋಕಾನುಗ್ರಹಾರ್ಥವಾಗಿ ನಿನ್ನಿಂದ ರಚಿತವಾಗಲಿ! ಶ್ರೀ ರಾಮಲಕ್ಷ್ಮಣರೂ, ಸೀತಾದೇವಿಯೂ, ಭರತಾದಿಗಳೂ, ರಾಕ್ಷಸರೂ ಪ್ರತ್ಯಕ್ಷ ಪರೋಕ್ಷಗಳಲ್ಲಿ ನಡೆಸಿದ ಸಮಸ್ತ ಕಾರ್ಯಗಳೂ ನಿನಗೆ ಚೆನ್ನಾಗಿ ಗೋಚರಿಸುವುವು. ನೀನು ರಚಿಸುವ ಕಾವ್ಯವು ನಿರ್ದೋಷವಾಗಿರಲಿ! ಆ ಚರಿತ್ರಪಠನವು ಸರ್ವ ಪಾಪನಿವಾರಕವಾಗಿರಲಿ; ಮತ್ತು ಈ ಭೂಮಿಯಲ್ಲಿ ನದಿಗಳೂ ಬೆಟ್ಟಗಳೂ ಎಂದಿನವರೆಗೆ ಸ್ಥಿರವಾಗಿರುವುವೋ, ಅಂದಿನವರೆಗೆ ಈ ಚರಿತ್ರವು ಲೋಕದಲ್ಲಿ ಪ್ರಸಿದ್ಧವಾಗಿರುವುದು. ಹಾಗೆ ನಿನ್ನಿಂದ ರಚಿತವಾಗುವ ರಾಮಾಯಣ ಗ್ರಂಥವು ಪ್ರಚಾರದಲ್ಲಿರುವವರೆಗೂ ನೀನು ನನ್ನಿಂದ ಸೃಷ್ಟಿಸಲ್ಪಟ್ಟಿರುವ ಮೇಲಿನ ಮತ್ತು ಕೆಳಗಿನ ಲೋಕಗಳಲ್ಲೆಲ್ಲ ತಡೆಯಿಲ್ಲದೆ ಸಂಚರಿಸಲು ಶಕ್ತನಾಗಿರುವೆ. ಕೊನೆಯಲ್ಲಿ ನನ್ನೊಂದಿಗೆ ಮುಕ್ತನಾಗುವೆ'' ಎಂದು ಹೇಳಿ, ಆಶೀರ್ವದಿಸಿ, ಒಡನೇ ಅಂತರ್ಧಾನ ಹೊಂದಿದನು.

ಆ ದಿನ ಪ್ರಾತಃಕಾಲದಿಂದ ನಡೆದುಬಂದ ಒಂದೊಂದು ವಿಚಾರವೂ ವಾಲ್ಮೀಕಿಮುನೀಶ್ವರರಿಗೆ ಅತ್ಯಂತ ವಿಸ್ಮಯವನ್ನುಂಟುಮಾಡುವುದೇ ಆಗಿದ್ದಿತು. ಬ್ರಹ್ಮದೇವನು, ಶ್ರೀರಾಮ ಚರಿತ್ರರಚನೆಗೆ ಅಪ್ಪಣೆಕೊಟ್ಟು ಹೊರಟುಹೋದ ತರುವಾಯ ವಾಲ್ಮೀಕರು ಪರಮ ಸಂತುಷ್ಟಾಂತರಂಗವುಳ್ಳವರಾಗಿ, ತಾವು ಆ ದಿನ ಪ್ರಾತಃಕಾಲ ರಚಿಸಿದ್ದ ಆ ಶ್ಲೋಕವನ್ನೇ ಪುನಃಪುನಃ ಉಚ್ಚರಿಸಿಕೊಳ್ಳುತ್ತಲಿದ್ದರು. ಮೇಲೆಮೇಲೆ ಅವರ ಮನಸ್ಸು ಹೆಚ್ಚು ಪ್ರಸನ್ನವಾಗಿ, ಅವರ ವದನದಿಂದ ಶ್ಲೋಕರಚನೆಯು ನಿರರ್ಗಳವಾಗಿ ಆಗತೊಡಗಿತು. ಮೃದುಮಧುರವಾದ ಪದಸಮೂಹವೂ, ದ್ರಾಕ್ಷಾದಿ ಪಾಕವೂ, ಅರ್ಥಗಾಂಭೀರ್ಯವೂ ಒಪ್ಪುತ್ತಿರಲು, ಮನೋಹರವಾದ ವೃತ್ತಗಳು ಅವರಿಂದ ಒಡನೆ ರಚಿತವಾದುವು. ಶ್ರೀರಾಮ ಜನನದಿಂದ ರಾವಣ ವಧಾನಂತರ ಶ್ರೀರಾಮ ಪಟ್ಟಾಭಿಷೇಕದವರೆಗಿನ ಕಥಾಸಂಗ್ರಹವು ನೂರು

ಶ್ಲೋಕಗಳಲ್ಲಿ ಸುಲಕ್ಷಣವಾಗಿ ರಚನೆಯಾಯಿತು. ಲಕ್ಷಣ ಬದ್ಧವಾದ ಪದ ಪ್ರಯೋಗಗಳೂ, ಮನೋಹರವಾದ ಅರ್ಥವಿಶೇಷಗಳೂ, ಆ ಕವಿತೆಯನ್ನು ಭೂಲೋಕಕ್ಕೇ ಒಂದು ವರಪ್ರಸಾದವನ್ನಿಸಿದುವು. ವಾಲ್ಮೀಕರು, ಪರಮಾನಂದಗೊಂಡು, ಅದನ್ನು ಶಿಷ್ಯರಿಗೆ ಕೇಳಿಸಿದರು. ಅವರ ರಚನಾ ಮಾಧುರ್ಯವು ಶಿಷ್ಯರಿಗೂ ಪರಮ ಸಂತೋಷವನ್ನುಂಟುಮಾಡಿತು.

ಆದರೆ ಅಷ್ಟುಮಾತ್ರದಿಂದಲೇ ಅವರು ತೃಪ್ತರಾಗಲಿಲ್ಲ. ಶ್ರೀರಾಮಚರಿತ್ರೆಯಲ್ಲಿ ಅದಕ್ಕಿಂತಲೂ ಹೆಚ್ಚಾಗಿ ತಿಳಿಯಬೇಕಾದ ವಿಚಾರಗಳಿರುವುವೇನೋ ಎಂಬ ಕೌತುಕವು ಅವರ ಮನಸ್ಸನ್ನು ಆವರಿಸಿತು. ಒಡನೆ ಅವರು ಶುಚಿರ್ಭೂತರಾಗಿ, ಆಚಮನಮಾಡಿ ಪೂರ್ವಾಭಿಮುಖವಾಗಿ ಕುಳಿತು ಧ್ಯಾನತತ್ಪರರಾದರು. ಕೇವಲ ನಮ್ರತೆಯಿಂದ ಭಗವತ್ಪ್ರಸಾದಾಪೇಕ್ಷೆಯಿಂದ ಕೈಜೋಡಿಸಿಕೊಂಡು ಏಕಾಗ್ರ ಚಿತ್ತದಿಂದ ಚಿಂತಿಸುತ್ತಾ ಕುಳಿತ ಅವರಿಗೆ, ಬ್ರಹ್ಮದೇವನ ವರಪ್ರಸಾದ ಮಹಿಮೆಯಿಂದ ಶ್ರೀರಾಮ ಲಕ್ಷ್ಮಣರೂ, ಸೀತೆಯೂ, ದಶರಥ ಕೌಸಲ್ಯೆಯರೂ ಪ್ರತ್ಯಕ್ಷ ಪರೋಕ್ಷಗಳಲ್ಲಿ ಏನೇನು ಕಾರ್ಯಗಳನ್ನು ನಡೆಯಿಸಿದ್ದರೋ ಅವೆಲ್ಲವೂ ಪುನರಾವೃತ್ತಿಗೊಂಡಂತೆ ಸ್ಪಷ್ಟವಾಗಿ ಗೋಚರಿಸಿದುವು. ಶ್ರೀರಾಮನು ಬಾಲ್ಯದಲ್ಲಿ ತಮ್ಮಂದಿರೊಂದಿಗೆ ಆಡಿದ ಆಟಪಾಟಗಳೂ, ನಂತರ ಲಕ್ಷ್ಮಣನೊಂದಿಗೆ ವಿಶ್ವಾಮಿತ್ರರನ್ನು ಹಿಂಬಾಲಿಸಿ ನಡೆದು, ತಾಟಕಿಯನ್ನು ವಧಿಸಿ, ಮಾರೀಚ ಸುಬಾಹುಗಳನ್ನು ಭಂಗಿಸಿ ಯಾಗಸಂರಕ್ಷಣೆ ಮಾಡಿದುದೂ, ಶಿವಧನುರ್ಭಂಜನಮಾಡಿ ಸೀತಾದೇವಿಯಿಂದ ಪುಷ್ಪಮಾಲಿಕೆಯನ್ನು ಗ್ರಹಿಸಿ, ಆಕೆಯ ಪಾಣಿಗ್ರಹಣ ಮಾಡಿದ ಮನೋಹರ ವೃತ್ತಾಂತವೂ ಅವರಿಂದ ದರ್ಶಿಸಲ್ಪಟ್ಟುವು. ತರುವಾಯ ಪರಶುರಾಮ ಗರ್ವಭಂಗ, ಅಯೋಧ್ಯಾಪುರವಾಸ, ಯೌವರಾಜ್ಯಾಭಿಷೇಕ ಪ್ರಯತ್ನ, ಅದಕ್ಕೆ ಕೈಕೇಯಿಯಿಂದ ಘಟಿಸಿದ ವಿಘ್ನ-ಆಮೇಲೆ ಸೀತಾರಾಮ ಲಕ್ಷ್ಮಣರು ನಾರುಬಟ್ಟೆಯನ್ನುಟ್ಟು ವನಾಭಿಮುಖವಾಗಿ ಪ್ರಯಾಣಮಾಡಿದುದು ಮುಂತಾದ ವಿಚಾರಗಳೂ ಕರತಲಾಮಲಕವಾಗಿ ಗೋಚರಿಸಿದುವು. ವಾಲ್ಮೀಕಿ ಮುನೀಶ್ವರರು ಧ್ಯಾನಮಗ್ನರಾಗಿ ಕುಳಿತಿದ್ದಂತೆಯೇ, ಮೇಲೆ ಮೇಲೆ ತಮ್ಮ ಮನೋನೇತ್ರದೆದುರಿಗೆ ಚಲಚ್ಚಿತ್ರ ಪರಂಪರೆಯಂತೆ ಕಂಡುಬರುತ್ತಿದ್ದ ಆ ನೋಟವನ್ನು ಕೌತುಕಾವಿಷ್ಟರಾಗಿ ಹಾಗೆ

ಯೇ ನೋಡುತ್ತಲೇ ಇದ್ದರು. ಶ್ರೀರಾಮ ಲಕ್ಷ್ಮಣರು ಗುಹನ ಆಶ್ರಮ ವನ್ನು ಸೇರಿ ಅಲ್ಲಿ ಜಟಾಧಾರಣ ಮಾಡಿದುದನ್ನೂ, ಸುಮಂತ್ರನು ಹಿಂದಿರುಗಿ ನಡೆದ ತರುವಾಯ ಗಂಗೆಯನ್ನು ದಾಟಿ, ಭರದ್ವಾಜಾಶ್ರಮ ಪ್ರವೇಶಮಾಡಿ, ಅವರ ಅನುಜ್ಞೆಯಿಂದ ಚಿತ್ರಕೂಟವನ್ನು ಪ್ರವೇಶಿಸಿ ಅಲ್ಲಿ ಪರ್ಣಶಾಲೆಯ ನ್ನು ನಿರ್ಮಿಸಿಕೊಂಡು ಅಲ್ಲಿ ತಾಪಸೋಚಿತ ಜೀವನದಿಂದ ಶೋಭಿಸುತ್ತಿದ್ದ ಚಕ್ರವರ್ತಿ ಪುತ್ರನಾದ ಶ್ರೀ ರಾಮನನ್ನೂ ವಾಲ್ಮೀಕರು ಕಂಡರು. ಕಥೆ ಯು ಮುಂದೆ ಸಾಗುತ್ತಲೇ ಇದ್ದಿತು. ತರುವಾಯ ಭರತಾಗಮನವೂ ಮೃತ ಪಿತನಿಗೆ ತಿಲೋದಕ ಪ್ರದಾನವೂ, ತಮ್ಮನಿಗೆ ಪಾದುಕಾಪ್ರದಾನವೂ ಆದಮೇಲೆ ಶ್ರೀರಾಮಾದಿಗಳು ದಂಡಕಾವನಪ್ರವೇಶಮಾಡಿದ ವಿಚಾರವೂ ಅಲ್ಲಿ ವಿರಾಧವಧ, ಶರಭಂಗದರ್ಶನ, ಸುತೀಕ್ಷ್ಣ ಸಮಾಗಮ ಮುಂತಾದುವೂ ಅಗಸ್ತ್ಯದರ್ಶನ, ಸೀತೆಯು ಅನಸೂಯೆಯೊಂದಿಗೆ ಇದ್ದುದು ಮೊದಲಾದ ಕಥಾ ವಿಶೇಷಗಳೂ ಕಂಡುಬಂದುವು. ವಾಲ್ಮೀಕರೂ ಏಕಾಗ್ರ ಚಿತ್ತವೃ ತ್ತಿಯಿಂದ ಹಾಗೆಯೇ ಕುಳಿತಿರುತ್ತಿರಲು, ಕಥೆಯು ಮುಂದೆ ಮುಂದೆ ಸಾಗಿ ದಂತೆಲ್ಲಾ ನವೀನ ನವೀನ ವಿಚಾರಗಳನ್ನು ಕಾಣುತ್ತಿದ್ದರು. ಪಂಚವಟಿಯ ನ್ನು ಪ್ರವೇಶಿಸಿದಮೇಲೆ ಶೂರ್ಪಣಖಾ ವೃತ್ತಾಂತವೂ, ಖರದೂಷಣಾದಿ ಗಳ ಮಹತ್ಸೈನ್ಯವು ಶ್ರೀರಾಮನಿಂದ ಸಂಹೃತವಾದುದೂ, ಅದನ್ನನುಸರಿ ಸಿದ ರಾವಣಾಗಮನ, ಮಾಯಾಮೃಗ ಸಂಹಾರ, ಸೀತಾಪಹರಣ ಮೊದಲಾ ದ ದುಃಖಕರ ವಿಚಾರಗಳೂ ಬರತೊಡಗಿದವು ಲೀಲಾ ವಿನೋದಿಯಾದ ಪರಮಾತ್ಮನು ಸೀತಾವಿಯೋಗ ದುಃಖದಿಂದ ವಿಲಪಿಸುತ್ತಿದ್ದುದನ್ನೂ ಜಟಾಯುಮೋಕ್ಷ, ಕಬಂಧದರ್ಶನ, ಪಂಪಾಗಮನ ಮುಂತಾದುವನ್ನೂ ನಂತರ ಶಬರಿಯಾಶ್ರಮಕ್ಕೆ ಬಂದು ಅಲ್ಲಿ ಆ ಭಕ್ತಳಿಂದ ಶ್ರೀರಾಮನು ಫಲಾಹಾರ ಗ್ರಹಣಮಾಡಿದ ದೃಶ್ಯಗಳನ್ನೂ ವಾಲ್ಮೀಕರು ಕಂಡರು ತರು ವಾಯ ಆಂಜನೇಯನು ವನದಲ್ಲಿದ್ದ ಶ್ರೀರಾಮಾದಿಗಳಿಗೆ ವಟುರೂಪದಿಂದ ದರ್ಶನವನ್ನಿತ್ತು ಅವರನ್ನು ಋಷ್ಯಮೂಕಪರ್ವತ ಸಮೀಪಕ್ಕೆ ಕರೆದೊ ಯ್ದುದೂ, ಅಲ್ಲಿ ಸುಗ್ರೀವಸಖ್ಯ, ವಾಲಿವಧೆ, ಸುಗ್ರೀವ ಪಟ್ಟಾಭಿಷೇಕಾದಿ ವೃತ್ತಾಂತಗಳೂ, ಸೀತಾನ್ವೇಷಣಕ್ಕಾಗಿ ವಾನರವೀರರು ನಾಲ್ಕು ದಿಕ್ಕುಗಳಿ ಗೂ ಹೊರಟ ವೃತ್ತಾಂತವೂ ವಾಲ್ಮೀಕರಿಗೆ ವಿಶೇಷ ಸಂತಸವನ್ನುಂಟುಮಾ

ಡಿದುವು. ಕ್ರಮವಾಗಿ ಸ್ವಯಂಪ್ರಭಾದರ್ಶನವೂ ಆಂಜನೇಯನು ಸಮು ದ್ರ ಲಂಘನಮಾಡಿ ಲಂಕಾನಗರಿಯಲ್ಲಿ ಸೀತಾಮಾತೆಯನ್ನು ಹುಡುಕಿದುದೂ, ವನಭಂಗ ರಾಕ್ಷಸ ಸಂಹಾರಾದಿ ಭಯಂಕರ ಕಾರ್ಯಗಳೂ, ಅದ್ಭುತವಾದ ಲಂಕಾದಹನ ಕಾರ್ಯವೂ ವಾಲ್ಮೀಕಿ ಮಹರ್ಷಿಗಳ ಧ್ಯಾನನೇತ್ರದೆದುರಿಗೆ ಹೊಳೆದುವು. ತರುವಾಯ ಚೂಡಕಾದರ್ಶನದಿಂದ ಸಂತುಷ್ಟನಾದ ಶ್ರೀ ರಾಮನು ಉತ್ಸಾಹಿತನಾಗಿ ದಂಡಯಾತ್ರಾಪ್ರಯಾಣಕ್ಕೆ ಅನುಜ್ಞೆಯನ್ನೀ ಯಲು ಕಪಿ ಕರಡಿಗಳು ಕೋಟಿ ಕೋಟಿ ಸಂಖ್ಯೆಯಿಂದ ಹೊರಟುದೂ, ಸಮುದ್ರತೀರದಲ್ಲಿ ಶ್ರೀರಾಮನ ಪ್ರಾಯೋಪವೇಶ ಸಂದರ್ಭವೂ, ತರುವಾ ಯ ನಡೆದ ಸಮುದ್ರಸೇತುಬಂಧನ ವಿಭೀಷಣ ಶರಣಾಗತಿ ಮುಂತಾದ ವೃ ತ್ತಾಂತಗಳೂ, ಲಂಕೆಯ ಮುತ್ತಿಗೆ, ಕಪಿಸೈನ್ಯ ರಾಕ್ಷಸ ಸೈನ್ಯಗಳಿಗೆ ನಡೆದ ಮಹದ್ಯುದ್ಧ, ರಾವಣಾದಿ ರಾಕ್ಷಸವಧಾ ಮುಂತಾದ ವಿಶೇಷ ಸಂಗತಿಗಳೂ ವಾಲ್ಮೀಕರಿಗೆ ಅಗಾಧ ಆಶ್ಚರ್ಯವನ್ನುಂಟುಮಾಡಿದುವು. ತರುವಾಯ ಅ ಗ್ನಿಪ್ರವೇಶದಿಂದ ಶುದ್ಧಳಾದ ಸೀತೆಯನ್ನು ಶ್ರೀರಾಮನು ಅಂಗೀಕಾರಮಾಡಿ ಸಕಲರೊಂದಿಗೂ ಪುಷ್ಪಕಾರೋಹಣಮಾಡಿ, ನಂದೀಗ್ರಾಮದಲ್ಲಿ ತನ್ನನ್ನೀ ಎದುರುನೋಡುತ್ತಿದ್ದ ಭರತನಿಗೆ ದರ್ಶನಕೊಟ್ಟುದೂ. ಸತ್ಯ ಪ್ರತಿಜ್ಞನಾ ದ ಶ್ರೀರಾಮನು ಹದಿನಾಲ್ಕು ವರ್ಷಗಳು ಮುಗಿದ ತರುವಾಯ ಮುನಿವೇಷ ವನ್ನು ವಿಸರ್ಜಿಸಿ ಸೀತಾದೇವಿಯೊಂದಿಗೆ ದಿವ್ಯರತ್ನ ಸಿಂಹಾಸನಾರೂಢನಾಗಿ ಪಟ್ಟಾಭಿಷಿಕ್ತನಾಗಿ ರಾಕ್ಷಸಬಾಧೆಯಿಂದ ಕಂಗೆಟ್ಟಿದ್ದ ಸಮಸ್ತಲೋಕ ಕ್ಕೂ ಅಭಯ ಹಸ್ತವನ್ನು ನೀಡಿದುದೂ, ವಾಲ್ಮೀಕರ ಮನಸ್ಸಿಗೆ ಅತಿಶಯ ಸಮಾಧಾನವನ್ನುಂಟುಮಾಡಿದುವು. ಒಡನೆ ಬಹಿರ್ಮುಖರಾಗಿ ವಾಲ್ಮೀಕ ರು ಪುಣ್ಯಶ್ಲೋಕನಾದ ಶ್ರೀರಾಮನ ಪಾದಕಮಲಗಳನ್ನು ನೆನೆದು ಕಥಾರಚ ನೆಗೆ ತೊಡಗಿದರು. ಆನಂದೋದ್ರೇಕದಿಂದ ವಿಸ್ಮೃತಿಯುಂಟಾದಾಗ, ಪುನಃ ಧ್ಯಾನಮಗ್ನರಾಗಿ ಕಥಾ ಸಂದರ್ಭವನ್ನು ಕಾಣುತ್ತಾ ನಿಸ್ಸಂಶಯ ಮನಸ್ಕತೆಯಿಂದ ಶ್ರೀರಾಮಚಂದ್ರನ ದಿವ್ಯಕಥಾ ವಿಸ್ತಾರವನ್ನು ತಮ್ಮ ಮೃದುಮಧುರ-ಸುಮನೋಹರ ಪದಪುಂಜಗಳಿಂದ ಚಿತ್ರಿಸಿಬಿಟ್ಟರು. ಚಿತ್ರ ವಿಚಿತ್ರಗಳಾದ ಶಬ್ದಾಲಂಕಾರ ಅರ್ಥಾಲಂಕಾರಗಳು, ಅಮೋಘ ವರ್ಣನೆ ಗಳು, ಅಪೂರ್ವ ಕವಿತಾ ಚಮತ್ಕಾರಗಳು ಇವುಗಳಿಂದ ಇಪ್ಪತ್ನಾಲ್ಕು ಸಹ

ಸ್ರಶ್ಲೋಕಗಳನ್ನೂ ಐನೂರು ಸರ್ಗಗಳನ್ನೂ ಒಳಕೊಂಡ ಆರುಕಾಂಡಗಳ ಮಹಾಕಾವ್ಯರಚನೆಯು ಆ ಮಹಾನುಭಾವರಿಂದ ಲೋಕೋದ್ಧಾರಕ್ಕಾಗಿ ನೆರವೇರಿತು. ಆ ಕಾವ್ಯರಾಜದಲ್ಲಿ, ಧೀರೋದಾತ್ತ ನಾಯಕನಾದ ಶ್ರೀ ರಾಮನ ಮಹಾವೀರ್ಯವೂ, ಪ್ರಜೆಗಳಲ್ಲಿ ಆತನಿಗಿದ್ದ ನಿಷ್ಕಲ್ಮಷವಾದ ಅ ನುರಾಗವೂ, ಆತನಲ್ಲಿ ಪ್ರಜೆಗಳಿಗಿದ್ದ ಅವಿರಳ ಭಕ್ತಿ ವಿಶ್ವಾಸಗಳೂ, ಆತನ ಪಿತೃಭಕ್ತಿ, ಸೌಮ್ಯತೆ, ತಾಳ್ಮೆ, ಸತ್ಯಸಂಧತೆ ಮುಂತಾದ ಸ್ವರ್ಗೀಯ ಗುಣಗ ಳೂ ವಾಲ್ಮೀಕರ ಅಸ್ಖಲಿತವಾಣಿಯಿಂದ ಚಿರಜೀವಿತಗಳಾಗಿವೆ. ಇಂತಹ ಮಹತ್ಕಾವ್ಯವನ್ನು ರಚಿಸಿದ ವಾಲ್ಮೀಕರು, ಶ್ರೀರಾಮಸೇವಾ ರೂಪವಾದ ಆ ಬೃಹದ್ಗ್ರಂಥವನ್ನು ಲೋಕದಲ್ಲಿ ಪ್ರಚಾರಗೊಳಿಸುವ ಮಾರ್ಗವೇನು ಎಂದೂ ಯೋಚನೆಮಾಡಿದರು. ಅದರ ಪ್ರಚಾರಣೆಗೆ ಭಗವದ್ಯತ್ನದಿಂದ ಲೇ ಮುಂದೆ ಹೇಳುವಂತೆ ಒಂದು ಅಮೌಲ್ಯ ಸಾಧನವೂ ದೊರೆಯಿತು. ಹೀಗೆ ಬ್ರಹ್ಮವರಪ್ರಸಾದ ಲಬ್ಧವಾದ ಕವಿತ್ವ ರಚನಾ ಕೌಶಲ್ಯವು ಮಹಾ ಪುಣ್ಯಕರವಾದ ಶ್ರೀರಾಮಾಯಣ ಗ್ರಂಥರಚನೆಯಲ್ಲಿ ವಿನಿಯೋಗವಾಗಿ ವಾ ಲ್ಮೀಕರನ್ನೂ ಚಿರಜೀವಿಗಳನ್ನಾಗಿಸಿತು.

---

## ಉಪಸಂಹಾರ

ಲೀಲಾಮಾನುಷ ವಿಗ್ರಹನಾದ ಶ್ರೀರಾಮಚಂದ್ರನ ಅಲೌಕಿಕ ಆಳ್ವಿ ಕೆಯು ಇತ್ತ ಅಯೋಧ್ಯೆಯಲ್ಲಿ ನಡೆಯುತ್ತಿದ್ದ ಕಾಲದಲ್ಲಿಯೇ, ಅತ್ತ ಮಹಾನುಭಾವರಾದ ವಾಲ್ಮೀಕರು, ಅಗಾಧವಾದ ಈ ಕಾವ್ಯರಚನೆಮಾಡಿ, ಆ ಪುಣ್ಯಚರಿತ್ರವನ್ನು ಪಠನೆ ಮಾಡುತ್ತಲೂ, ನೋಡುತ್ತ ನೋಡುತ್ತ ಪುಳಕಗೊಳ್ಳುತ್ತಲೂ, ಆನಂದ ಬಾಷ್ಪಗಳನ್ನುದುರಿಸಿ ಆನಂದಗೊಳ್ಳುತ್ತ ಲೂ, ಭಗವಂತನು ಲೋಕವಿಡಂಬನೆಗಾಗಿ ಆಡಿತೋರಿಸಿದ ಆ ಅದ್ಭುತ ಲೀಲಾ ಪ್ರಸಂಗವನ್ನು ಕುರಿತು ಮೇಲೆ ಮೇಲೆ ಕೌತುಕಗೊಳ್ಳುತ್ತಲೂ ಹೀಗೆ ಕಾಲಯಾಪನೆ ಮಾಡುತ್ತಿದ್ದರು ಮುಂದೊಂದು ದಿನ ಆಶ್ರಮದಲ್ಲಿ ಕುಳಿತು ತತ್ವಚಿಂತಾಪರರಾಗಿದ್ದ ಅವರ ಬಳಿಗೆ, ಕಾಡಿಗೆ ಸಮಿತ್ಕುಶಾದಿಗಳ

ಸಂಗ್ರಹಣಕ್ಕಾಗಿ ಹೋಗಿದ್ದ ಶಿಷ್ಯರು ಬಂದು, ಗಾಬರಿಯಿಂದ,—ಕಾಡಿನಲ್ಲಿ ಒಬ್ಬಾನೊಬ್ಬ ನಾಕರಿಕ ಸ್ತ್ರೀಯು ಏಕಾಂಗಿಯಾಗಿ ಅಳುತ್ತಾ ಇದ್ದುದನ್ನು ಕಂಡೆವೆಂದು ವಿಜ್ಞಾಪಿಸಿದರು. ಅದನ್ನು ಕೇಳಿದ ವಾಲ್ಮೀಕರು ಆಕೆ ಯಾರಿರಬಹುದೆಂದು ಜ್ಞಾನದೃಷ್ಟಿಯಿಂದ ನೋಡಲಾಗಿ, ಆಕೆಯು ಶ್ರೀ ರಾಮನ ಧರ್ಮಪತ್ನಿಯಾದ ಸೀತೆಯೆಂದು ಗೊತ್ತಾಯಿತು. ಒಡನೆ ಭಯ ಭರಿತಭಕ್ತಿಯುಕ್ತರಾಗಿ ಆ ಶಿಷ್ಯರೊಂದಿಗೇ ಆಕೆಯಿದ್ದ ಸ್ಥಳವನ್ನು ಸೇರಿದರು ಅಲ್ಲಿ ದುಃಖಾಧಿಕ್ಯದಿಂದ ಮುಂಗಾಣದೆ ಆತ್ಮಹತ್ಯೆಗೆ ಸಿದ್ಧಳಾಗಿ-ಅಷ್ಟರಲ್ಲಿ ಏನೋ ಯೋಚಿಸಿಕೊಂಡು ಕೈತಡೆದು ಶೂನ್ಯದೃಷ್ಟಿಯಿಂದ ಎಲ್ಲೋ ನೋಡುತ್ತ ನಿಂತಿದ್ದ ಪೂರ್ಣಗರ್ಭಿಣಿಯಾದ ಆಕೆಯನ್ನು ಕಂಡು, ಮೃದುಮಧುರ ವಚನಗಳಿಂದ ಆದರಿಸಿ, ಸಮಾಧಾನ ಹೇಳಿ ತಮ್ಮ ಆಶ್ರಮಕ್ಕೆ ಕರೆತಂದರು. ಸೀತೆಯು, ಶ್ರೀರಾಮನು ಲೋಕಾಪವಾದಕ್ಕಂಜಿ ತನ್ನನ್ನು ಕಾಡಿಗೆ ಕಳುಹಿಸಿದನೆಂದು ನುಡಿದು, ಪತಿವಿರಹದ ತನ್ನ ವ್ಯಥೆಯನ್ನು ಹಲವು ಬಗೆಯಿಂದ ಹೇಳಿಕೊಂಡು ಮರುಗಿದಳು. ವಾಲ್ಮೀಕರು, ಆಕೆಯ ಮಾತುಗಳನ್ನೆಲ್ಲ ಕೇವಲ ಪುತ್ರೀವಾತ್ಸಲ್ಯದಿಂದ ಲಾಲಿಸಿ, ಮೇಲೆ ಮೇಲೆ ಸಮಾಧಾನಕರ ವಾಕ್ಯಗಳನ್ನು ನುಡಿಯುತ್ತ ಪೋಷಿಸುತ್ತಿದ್ದರು. ಹಾಗೆ ಕೆಲವು ದಿನಗಳು ಕಳೆಯುವುದರೊಳಗಾಗಿ ಸೀತಾಮಾತೆಯು ಅವಳಿ ಮಕ್ಕಳನ್ನು ಪ್ರಸವಿಸಿದಳು ಶ್ರೀರಾಮನ ಪ್ರತಿರೂಪದಂತಿದ್ದ ಆ ಪುತ್ರರುಗಳಿಗೆ ವಾಲ್ಮೀಕರು ಕುಶ (ದರ್ಭೆ) ಲವ (ಗೋಪುಚ್ಛದ ಕೂದಲು) ಗಳಿಂದ ರಕ್ಷೆಯನ್ನಿಟ್ಟು ಆಶೀರ್ವದಿಸಿದರು. ಆ ಮಕ್ಕಳು ಕುಶ ಮತ್ತು ಲವ ಎಂಬ ಹೆಸರುಗಳಿಂದಲೇ ಪ್ರಸಿದ್ಧರಾಗಿ, ಯುಕ್ತವಯಸ್ಸಿನಲ್ಲಿ ಶ್ರೀ ವಾಲ್ಮೀಕರಿಂದಲೇ ಸಕಲ ವಿದ್ಯೆಗಳಲ್ಲೂ ಸುಶಿಕ್ಷಿತರಾದರು. ಧನುರ್ವಿದ್ಯೆಯಲ್ಲಂತೂ ಅವರ ಸಾಮರ್ಥ್ಯವು ಜಗತ್ತಿಗೇ ಅತ್ಯದ್ಭುತವೆನ್ನಿಸುವಂತೆ ಇತ್ತು. ಆ ಸಮಕಾಲದಲ್ಲೇ ಇತ್ತ ಅಯೋಧ್ಯೆಯಲ್ಲಿ ಶ್ರೀರಾಮನು ಅಶ್ವಮೇಧಯಾಗಕ್ಕೆ ದೀಕ್ಷಾಧರನಾಗಿ, ಯಜ್ಞಾಶ್ವವನ್ನು ವಿಧ್ಯುಕ್ತವಾಗಿ ಪೂಜಿಸಿ, ಭೂಪ್ರದಕ್ಷಿಣೆಗೆಂದು ಬಿಟ್ಟನು. ಅದು ಸಕಲ ದೇಶಗಳನ್ನೂ ಸುತ್ತಿಕೊಂಡು, ವಾಲ್ಮೀಕರ ಆಶ್ರಮವಿದ್ದ ಭೂಪ್ರದೇಶಕ್ಕೆ ಬಂದಿರಲು, ಅಲ್ಲೇ ವನಕಾವಲಿಗೆಂದು ನಿಯಮಿತನಾಗಿ ಆಡುತ್ತಲಿದ್ದ ಬಾಲಕನಾದ ಲವನು ಕಂಡು ಅದನ್ನು

ಅಲ್ಲೇ ಇದ್ದ ಒಂದು ಬಾಳೇಮರಕ್ಕೆ ಕಟ್ಟಿಹಾಕಿದನು. ಒಡನೆ ಅದರೊಂದಿಗೆ ಬಂದಿದ್ದ ಶತ್ರುಘ್ನನ ಸೈನ್ಯಕ್ಕೂ ಆ ಬಾಲಕನಿಗೂ ಭಯಂಕರವಾದ ಯುದ್ಧವು ಕೈಗಟ್ಟಿ ಲವನು ಶತ್ರುಘ್ನನಿಂದ ಮೂರ್ಛೆಹೋದನು. ಅಷ್ಟರಲ್ಲಿ ವನಕ್ಕೆ ಹೋಗಿದ್ದ ಕುಶನು ಆ ಸಂಗತಿಯನ್ನು ಕೇಳಿ ರೋಷಗೊಂಡು, ಧನುರ್ಬಾಣಧಾರಿಯಾಗಿ ಹೊರಬಿದ್ದು, ಪಟ್ಟಣಾಭಿಮುಖವಾಗಿ ಸಾಗುತ್ತಿದ್ದ ಶತ್ರುಸೇನೆಯನ್ನು ತರುಬಿದನು. ಒಡನೆ ಶತ್ರುಘ್ನನ ಸೈನ್ಯವು ಹಿಂದಿರುಗಿ ಕುಶನ ಬಾಣಹತಿಯನ್ನು ತಡೆದುಕೊಳ್ಳಲಾರದೆ ಮೂರ್ಛೆಹೋಗಿ ಮಲಗಿತು. ಶತ್ರುಘ್ನನೂ ನೆಲಕ್ಕೆಬಿದ್ದನು. ತರುವಾಯ ಶ್ರೀ ರಾಮಾಜ್ಞೆಯಿಂದ ಅವರಮೇಲೆ ಭರತ ಲಕ್ಷ್ಮಣಾದಿಗಳು ವಿಶೇಷ ಸೈನ್ಯದೊಂದಿಗೆ ಸಾಗಿಬಂದರು. ಆದರೇನು, ಕುಶಲವರ ತೀಕ್ಷ್ಣ ಬಾಣ ಪರಂಪರೆಯು ಅವರನ್ನೂ ರಣಭೂಮಿಯಲ್ಲಿ ಮಲಗಿಸಿತು. ತರುವಾಯ ವಿಧಿಯಿಲ್ಲದೆ, ಯಜ್ಞದೀಕ್ಷಿತನಾಗಿ ಕುಳಿತಿದ್ದ ಶ್ರೀರಾಮನೇ ಶಸ್ತ್ರಧಾರಿಯಾಗಿ ಯುದ್ಧಭೂಮಿಗೆ ಬಂದನು. ತಂದೆಮಕ್ಕಳಾದ ಶ್ರೀರಾಮ-ಕುಶಲವರಿಗೆ ಭಯಂಕರ ಕಾಳಗವು ನಡೆದು, ರಾಕ್ಷಸಕುಲ ಧ್ವಂಸಕನಾದ ಶ್ರೀರಾಮನೂ ಮೂರ್ಛಿತನಾಗಿ ಬಿದ್ದನು. ಆಶ್ರಮದಲ್ಲಿದ್ದ ಸೀತೆಯು ಆ ವಾರ್ತೆಯನ್ನು ಕೇಳಿ ಕಲ್ಮರಗಳು ಕರಗುವಂತೆ ರೋದಿಸುತ್ತಿದ್ದ ಕಾಲಕ್ಕೆ ಸರಿಯಾಗಿ, ಕಾರ್ಯಾಂತರವಾಗಿ ವರುಣ ಲೋಕಕ್ಕೆ ಹೋಗಿದ್ದ ವಾಲ್ಮೀಕರು ಬಂದು, ರಾಮಸೈನ್ಯಕ್ಕಾದ ಪರಾಭವವನ್ನೂ ಶ್ರೀರಾಮಲಕ್ಷ್ಮಣಾದಿಗಳು ಮೂರ್ಛೆಹೋಗಿ ಬಿದ್ದಿದ್ದುದನ್ನೂ, ಆದರೂ ಮೈಮೇಲೆ ಒಂದು ಬಾಣದ ಗಾಯವೂ ಇಲ್ಲದೆ ಲೇಶಮಾತ್ರವೂ ಆಯಾಸಗೊಳ್ಳದೆ ನಿಂತಿದ್ದ ಕುಶಲವರನ್ನೂ ಕಂಡು ಪರಮಾನಂದದಿಂದ ಆ ಮಕ್ಕಳೊಂದಿಗೆ ಯುದ್ಧಭೂಮಿಗೆ ಬಂದು, ಅಲ್ಲಿ ಮೂರ್ಛೆಹೋಗಿದ್ದ ಶ್ರೀ ರಾಮನನ್ನೂ ಆತನ ಸೋದರರನ್ನೂ, ಮಿಕ್ಕ ವಿಶೇಷ ಚತುರ್ಬಲವನ್ನೂ ತಮ್ಮ ಕಮಂಡಲುವಿನ ಮಂತ್ರೋದಕದಿಂದ ಪ್ರೋಕ್ಷಿಸಿ, ಎಬ್ಬಿಸಿದರು. ಶ್ರೀರಾಮನು ಆ ಚಿಕ್ಕ ಬಾಲಕರಿಂದ ವೀರಾಗ್ರೇಸರನಾದ ತನಗೆ ಯುದ್ಧದಲ್ಲಿ ಪರಾಭವವಾಯಿತೆಂದು ಕಳವಳಗೊಂಡಿರಲು, ವಾಲ್ಮೀಕರು ಆ ಇಬ್ಬರು ಬಾಲಕರನ್ನೂ ಶ್ರೀರಾಮನ ಪಾದಗಳಮೇಲೆ ಬೀಳಹೇಳಿ,-'ಶ್ರೀರಾಮಾ, ಇವರಿಬ್ಬರೂ ನಿನ್ನ ಸೂನುಗಳು, ಇವರಿಂದ ನಿನ್ನ

ಪಾದಗಳಿಗೆ ವಿಶೇಷ ಅಪಚಾರ ನಡೆದಿದೆ. ದಯಾಶರಧಿಯಾದ ನೀನು, ಇದ ನ್ನು ಮನಸ್ಸಿನಲ್ಲಿಡದೆ ಕಾಪಾಡು' ಎಂದು ಬೇಡಿಕೊಂಡರು. ಶ್ರೀರಾಮನು ಕೃ ಪಾಕಟಾಕ್ಷದಿಂದ ಆ ತನ್ನ ಸಂತಾನವನ್ನು ನೋಡಿ, ಅವರ ಜನನಾರಭ್ಯ ನಡೆ ದ ಸಕಲ ವೃತ್ತಾಂತಗಳನ್ನೂ ವಾಲ್ಮೀಕರಿಂದ ಕೇಳಿ ಪರಮ ಹರ್ಷಿತನಾಗಿ ಅವರಮೂಲಕ ತನಗೂ ತನ್ನ ಕುಟುಂಬಕ್ಕೂ ಆದ ಮಹೋಪಕಾರಕ್ಕಾಗಿ ಅವರಿಗೆ ತನ್ನ ಕೃತಜ್ಞತಾಪೂರ್ವಕ ವಂದನೆಗಳನ್ನು ಅರ್ಪಿಸಿದನು. ವಾಲ್ಮೀ ಕರು ತಮ್ಮಿಂದ ರಚಿತವಾದ ಶ್ರೀಮದ್ರಾಮಾಯಣ ಕಥೆಯನ್ನೆಲ್ಲಾ ಆ ಸಂ ದರ್ಭದಲ್ಲೇ ಕುಶಲವರಿಂದ ಆದ್ಯಂತವಾಗಿ ಹೇಳಿಸಿದರು. ಕುಶಲವರು ತಮ್ಮ ಸುಮಧುರ ಕಂಠಧ್ವನಿಯಿಂದ ನವರಸಭರಿತವಾದ ಆ ಕಾವ್ಯವನ್ನು, ಶ್ರುತಿಲಯಬದ್ಧವಾಗಿ ಹಾಡಿ, ನೆರೆದ ಸಮಸ್ತರನ್ನೂ ಆನಂದಾಮೃತ ಶರಧಿ ಯಲ್ಲಿ ಓಲಾಡಿಸಿದರು. ತರುವಾಯ ಶ್ರೀ ರಾಮನು *ಪತ್ನೀಪುತ್ರರೊಂದಿಗೆ ತನ್ನರಾಜಧಾನಿಗೆ ನಡೆದು ಅರ್ಧಕ್ಕೆ ನಿಂತಿದ್ದ ಯಾಗವನ್ನು ಪೂರ್ತಿಗೊಳಿಸಿದ ನು. ಯಾಗಕಾಲದಲ್ಲೂ ಶ್ರೀರಾಮನು ತನ್ನ ತಮ್ಮಂದಿರೊಂದಿಗೆ ಕುಳಿತು, ತ ನ್ನ ಹೃದಯಾಹ್ಲಾದಿನಿಯಾದ ಸೀತಾಚರಿತ್ರೆಯಿಂದ ಕೂಡಿ ನವರಸಭರಿತ ವಾಗಿದ್ದ ಆ ಸುಮನೋಹರಕಾವ್ಯವನ್ನು ಎಷ್ಟುಬಾರಿ ಕೇಳಿದರೂ ತೃಪ್ತಿಯಿ ಲ್ಲದೆ, ಮೇಲಿಮೇಲೆ ಅವರಿಂದ ಕೇಳಿ, ಸುಖಾನುಭವ ಮಾಡುತ್ತಿದ್ದನು.

ವಾಲ್ಮೀಕಿ ಮಹರ್ಷಿಗಳು, ಹೀಗೆ ಎಂದೋ ನಡೆದ ಶ್ರೀರಾಮಾವ ತಾರದ ಕಥಾನಕವನ್ನು ಅಜರಾಮರವಾದ ಕಾವ್ಯವನ್ನಾಗಿ ರಚಿಸಿ ಜಗತ್ತಿ ನಲ್ಲಿ ಇಂದಿಗೂ ಶ್ರೀರಾಮನಾಮವೆಂಬ ಒಂದು ಕಲ್ಪವೃಕ್ಷವನ್ನೇ ನಟ್ಟು ಅನಂತಶಾಖೆಗಳಿಂದ ಬೆಳೆಸಿಬಿಟ್ಟಿರುವರು. ಆ ಕಲ್ಪವೃಕ್ಷವು ಈವರೆಗೆ ತನ್ನ ಅಮೃತಫಲಗಳಿಂದ ಎಷ್ಟುಕೋಟಿ ಮಂದಿ ಮಾನವ ಪ್ರಾಣಿಗಳ ಭವ ರೋಗವನ್ನು ಕಳೆದು ಶಾಶ್ವತ ಮೋಕ್ಷಸುಖಾನುಭವವನ್ನು ದಯಪಾಲಿಸಿ ದೆಯೋ, ಇನ್ನೂ ಎಷ್ಟು ಮಂದಿ ಮಾನವರು ಅದರಿಂದ ಉದ್ಧೃತರಾಗತಕ್ಕವ

---

*ಇದು ಜೈಮಿನಿಭಾರತದಲ್ಲಿನ ಶ್ರೀರಾಮಾಯಣದ ಕಥಾವೃತ್ತಾಂತವನ್ನನುಸರಿಸಿದೆ. ಆದರೆ ಶ್ರೀಮದ್ರಾಮಾಯಣದ ಉತ್ತರಕಾಂಡದ ಕಥೆಯಲ್ಲಿ, ಯಾಗ ಕಾಲದಲ್ಲೂ ಸೀತೆ ಯು ಪುನಃ ಶ್ರೀರಾಮನಿಂದ ಪರೀಕ್ಷಿಸಲ್ಪಟ್ಟು, ಕ್ಷೋಭಾಧಿಕ್ಯದಿಂದ ಭೂಗರ್ಭದಲ್ಲಿ ಅಡಗಿ ದಳೆಂದು ಹೇಳಲ್ಪಟ್ಟಿದೆ.

ರಿರುವರೋ ಕಂಡವರಾರು? ಈ ಅಗಾಧಕೀರ್ತಿಯು ನಮ್ಮ ಕಥಾನಾಯಕರಾದ, ಆದಿಕವಿ, ವಾಲ್ಮೀಕಿ ಮಹರ್ಷಿಗಳಿಗೆ ಶ್ರೀರಾಮಾನುಗ್ರಹದಿಂದ ಲಭ್ಯವಾಯಿತು. ಯಾವ ಶ್ರೀರಾಮನಾಮವು, ಪಾಪಪಂಕದಲ್ಲಿ ಮುಳುಗಿ ಪಡಶಾಣದೆ ತಪಿಸುತ್ತಿದ್ದ ಆ ಮಹಾ ಪಾಪಿ ಕಿರಾತಾಧಿಪನನ್ನು ಮಹರ್ಷಿಯೆನ್ನಿಸಿ, ಆತನಿಂದ ಕೋಟ್ಯಾಂತರ ಮಾನವ ಪ್ರಾಣಿಗಳ ಉದ್ಧಾರಕ್ಕೆ ಸಾಧಕವಾದ ಇಂತಹ ಅಮೂಲ್ಯ ಕಾವ್ಯರಚನೆ ಮಾಡಿಸಿತೋ, ಆ ಪವಿತ್ರನಾಮವು, ಸಕಲರಿಗೂ ಶ್ರೇಯೋದಾಯಕವಾಗಿ, ಜಗತ್ಸಂರಕ್ಷಕವಾಗಿರಲಿ - ಲೋಕವು ಆ ದಿವ್ಯನಾಮ ಪಾರಾಯಣದಲ್ಲಿ ಭಕ್ತಿವಿಶ್ವಾಸಗಳನ್ನಿಟ್ಟು ರಕ್ಷಿತವಾಗಲಿ ಅಜ್ಞಲೋಕಕ್ಕೆ ಅಂತಹ ಸುಜ್ಞಾನವು ಪ್ರಾಪ್ತಿಸುವಂತೆ ಸಹ ಶ್ರೀರಾಮಮೂರ್ತಿಯೋ ಕೃಪಾಕಟಾಕ್ಷವನ್ನಿಟ್ಟು ಅನುಗ್ರಹಿಸಲಿ.

ತಥಾಸ್ತು



ಸುಬೋಧ ಮುದ್ರಣಾಲಯ, ಬೆಂಗಳೂರು ನಗರ.